ಮೈಸೂರು ವಿಶ್ವವಿದ್ಯಾನಿಲಯದ ಇಂಟರ್‌ಮೀಡಿಯೆಟ್ ತರಗತಿಯ ವಿದ್ಯಾರ್ಥಿಗಳ ಸಾರಸ್ವತಸತ್ತ್ವವನ್ನು ಸ್ಥಾಲೀಪುಲಾಕನ್ಯಾಯದಿಂದ ತೆಗೆದೆತ್ತಿ ತೋರಿಸುವ ಪುಸ್ತಕ—ಈ **'ನಮ್ಮ ನಮ್ಮವರು'**.

೧೯೩೯ರಲ್ಲಿ ಮೈಸೂರು ಇಂಟರ್ ಕಾಲೇಜಿನಲ್ಲೂ ೧೯೪೪ರಲ್ಲಿ ತುಮಕೂರು ಇಂಟರ್ ಕಾಲೇಜಿನಲ್ಲೂ ಇದ್ದ ವಿದ್ಯಾರ್ಥಿಗಳು ಕಾಲಕಾಲಕ್ಕೆ ಬರೆದ ಬರಹಗಳಿಂದ ಉತ್ತಮವಾದುವನ್ನು ಆಯ್ದು ಇಲ್ಲಿ ಸಂಕಲನ ಮಾಡಿದೆ.

ಸುಮಾರು ಇನ್ನೂರು ಪುಟಗಳ ಈ ಸಂಕಲನದಲ್ಲಿ ಮೊದಲನೆಯ ಅರ್ಧಭಾಗ ವಿದ್ಯಾರ್ಥಿಗಳ ಆಶುರಚನಾ ಸಾಮರ್ಥ್ಯವನ್ನು ವ್ಯಕ್ತಪಡಿಸುತ್ತದೆ; ಪೂರ್ವಸಿದ್ಧತೆಗಳೇನೂ ಇಲ್ಲದೆ, ನಿಂತ ಕಾಲಿನಲ್ಲಿಯೆ ನಾಲ್ಕು ಪಂಕ್ತಿ ನೇಯಬೇಕಾಗಿ ಬಂದರೆ, ಏನು ಬರೆದಾರು ಎಂಬುದನ್ನು ಇಲ್ಲಿ ಕಾಣಬಹುದು. ಇನ್ನು ಉಳಿದ ಅರ್ಧ ಭಾಗದಲ್ಲಿ ವಿದ್ಯಾರ್ಥಿಗಳ ವಿಚಾರವಿಲಾಸ ಮಿಂಚಿನ ಗೊಂಚಲಾಗಿದೆ; ಲಘುವಾಗಿ ಹೇಗೆ ಇರಬಲ್ಲರೋ ಹಾಗೆಯೇ ವಿದ್ಯಾರ್ಥಿಗಳು ಸಮಯ ಒದಗಿದಾಗ ಗೌರವಬುದ್ಧಿಯನ್ನೂ ಬಳಸಬಲ್ಲರು ಎಂಬುದಕ್ಕೆ ಇಲ್ಲಿ ಸಾಕಷ್ಟು ಪ್ರಮಾಣವುಂಟು. ವಿದ್ಯಾರ್ಥಿಗಳ ಮನಸ್ಸು ಬುದ್ಧಿಗಳು ಯಾವ ಹದದಲ್ಲಿವೆ ಎಂಬುದಕ್ಕೆ ಇದೊಂದು ಸಣ್ಣ ಸಾಕ್ಷಿ.

ಅರುವತ್ತಾರು ಲೇಖನಗಳನ್ನು ಒಳಕೊಂಡ ಈ 'ನಮ್ಮ ನಮ್ಮವರು' ಪುಸ್ತಕವು ವಿದ್ಯಾರ್ಥಿಗಳಲ್ಲಿ ಆಸಕ್ತಿ ಉಳ್ಳವರೆಲ್ಲ ಸಾವಧಾನದಿಂದ ಅವಲೋಕಿಸಬೇಕಾದ್ದು.

[ಬೆಲೆ: **ಎರಡೂವರೆ ರೂಪಾಯಿ**

# ನಮ್ಮ ನಮ್ಮವರು

ಬರೆದವರು:

ಮೈಸೂರು ವಿಶ್ವವಿದ್ಯಾನಿಲಯದ
ಇಂಟರ್‌ಮೀಡಿಯೆಟ್ ವಿಧ್ಯಾರ್ಥಿಗಳು

ಸಂಪಾದಕರು:

ಜಿ. ಪಿ. ರಾಜರತ್ನಂ



ಮಾರಾಟದ ಪೂರ್ಣಾಧಿಕಾರಿಗಳು:
ಕರ್ಣಾಟಕ ಸಂಘ
ಸೆಂಟ್ರಲ್ ಕಾಲೇಜ್, ಬೆಂಗಳೂರು

# ಅರಿಕೆ

ಈ ಪುಸ್ತಕವನ್ನು ಸಿದ್ಧಗೊಳಿಸಿದ್ದು ನನಗೆ ಒಂದು ಅಭಿಮಾನದ ಕೆಲಸ. ನನ್ನ ಮನಸ್ಸಿನ ಆಸೆ ಈಡೇರಿ ಈ ರೂಪದಲ್ಲಿ ಬರುವುದಕ್ಕೆ ಮೊದಲ ಸಹಾಯ — ೧೯೩೯ರಲ್ಲಿ ಮೈಸೂರಿನಲ್ಲಿಯೂ ೧೯೪೪ರಲ್ಲಿ ತುಮಕೂರಿನಲ್ಲಿಯೂ ನನ್ನೊಡನೆ ಸಹಕರಿಸಿದ ನನ್ನ ವಿದ್ಯಾರ್ಥಿ ಮಿತ್ರರದು.

ಅವರ ಬರಹಗಳನ್ನು ಮೊದಲ ಬಾರಿಗೆ ಪುಸ್ತಕ ರೂಪದಲ್ಲಿ ತಂದು, ಕಾಲೇಜಿನ ಹೊರಗೆ ಕೂಡ ಅವರ ಪ್ರಸಾರಕ್ಕೆ ನೆರವಾದವರು ಬೆಂಗಳೂರಿನ 'ಸತ್ಯಶೋಧನ ಪ್ರಕಟನ ಮಂದಿರ'ದವರು.

'ನಮ್ಮ ನಮ್ಮವರು' ಸಂಗ್ರಹವನ್ನು ಓದಿ, ಮುಕ್ಕಾಲಿಗೆ ನಾಲ್ಕು ಮೆಚ್ಚುಗೆಯ ಮಾತನಾಡಿದವರು ಆಗ ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾಗಿದ್ದ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು.

'ನಮ್ಮ ನಮ್ಮವರು' ಆದ ಲೇಖಕವರ್ಗವನ್ನು ಕುರಿತು ಸಂಪಾದಕನು ಆಡುವ ಸಂದರ್ಭದಲ್ಲಿ ಸೂಕ್ತವಾದ ಕೆಲವು ವಚನಗಳನ್ನು ತಮ್ಮ 'ಮಲಾರ'ದಿಂದ ಉದ್ಧರಿಸಿಕೊಳ್ಳಲು ವಿಶ್ವಾಸದಿಂದ ಅನುಮತಿ ಕೊಟ್ಟವರು ಕವಿಗಳಾದ 'ಶ್ರೀನಿವಾಸ'ರು.

ಈ ಎಲ್ಲರಿಗೂ ನನ್ನ ಕೃತಜ್ಞತೆಯ ವಂದನೆಗಳು.

ಜನವರಿ, ೧೯೫೨.

**ಜಿ. ಪಿ. ರಾಜರತ್ನಂ**

# ಈ ಪುಸ್ತಕದೊಳಗಿನ ಲೇಖಕರಲ್ಲಿ

## ವಿಜ್ಞಾಪನೆ

ನನಗೆ ವಿದ್ಯಾರ್ಥಿಗಳಾಗಿದ್ದ ನನ್ನ ಪ್ರಿಯ ಮಿತ್ರರೆ,

ನಿಮ್ಮ ಬರಹಗಳನ್ನು ಇಷ್ಟು ವರುಷಗಳ ಮೇಲೆ ಮತ್ತೊಮ್ಮೆ ಪುಸ್ತಕ ರೂಪವಾಗಿ ಪ್ರಕಟಿಸಿದ್ದೇನೆ. ಸಾಮಾನ್ಯವಾಗಿ, ಇಂಥ ಸಂದರ್ಭದಲ್ಲಿ, ಲೇಖಕರ ಅನುಮತಿ ಪಡೆಯುವುದು ಸಭ್ಯತೆ. ಆದರೆ, ನಿಮ್ಮಲ್ಲಿ ಅನೇಕರ ವಿಳಾಸ ನನಗೆ ತಿಳಿಯದ್ದರಿಂದಲೂ ಕೇಳಿದರೆ ಒಪ್ಪುತ್ತಿದ್ದಿರೆಂಬ ಭರವಸೆಯಿಂದಲೂ ನೀವು "ನಮ್ಮ ನಮ್ಮವರು" ಆದ್ದರಿಂದಲೂ ಸಲುಗೆಯ ಸ್ವಾತಂತ್ರ್ಯವನ್ನು ವಹಿಸಿ ಈ ಎರಡನೆಯ ಆವೃತ್ತಿಯನ್ನು ಸ್ವಂತವಾಗಿ ಪ್ರಕಟಿಸಿದ್ದೇನೆ.

ಈ ಪ್ರಕಟನೆಯ ಉದ್ದೇಶ ಎರಡು: ಒಂದು—ಕಾಲೇಜು ವಿದ್ಯಾರ್ಥಿಗಳು ಎಂಥ ವಿಷಯಗಳನ್ನು ಹೇಗೆ ಬರೆಯಬಲ್ಲರು ಎಂಬುದಕ್ಕೆ ಕೆಲವು ಮಾದರಿಗಳು ಇತರ ವಿದ್ಯಾರ್ಥಿಗಳಿಗೆ ಒದಗಲಿ ಎಂಬುದು; ಎರಡು—ಈ ಪ್ರಕಟನೆಯಿಂದ ಏನಾದರೂ ಲಾಭ ಸಂಪಾದನೆಯಾದರೆ, ಅದನ್ನು ನಮ್ಮ ಸೆಂಟ್ರಲ್ ಕಾಲೆಜ್ ಕರ್ಣಾಟಕ ಸಂಘದಲ್ಲಿ ವಿದ್ಯಾರ್ಥಿಗಳ ಬರಹದ ಪ್ರಕಟನೆಗೆ ವಿನಿಯೋಗಿಸಿಕೊಳ್ಳಬಹುದೆಂಬುದು.

ಈ ಉದ್ದೇಶಗಳು ನಿಮ್ಮ ಮನಸ್ಸಿಗೆ ಒಪ್ಪಿ ಬರುತ್ತವೆ ಎಂಬ ನಂಬಿಕೆಯಿಂದ ಈ ವಿಜ್ಞಾಪನೆಯನ್ನು ಮುಗಿಸುತ್ತ, ನಿಮಗೆ ನನ್ನ ಕೃತಜ್ಞತೆಯ ವಂದನೆಗಳನ್ನು ಸಲ್ಲಿಸುತ್ತೇನೆ.

**ಜಿ. ಪಿ. ರಾಜರತ್ನಂ**

ಮೈಸೂರು ವಿಶ್ವವಿದ್ಯಾನಿಲಯದ
ಕನ್ನಡಕುಲದ ಮುಖ್ಯರೂ
ಮೈಸೂರು ಕಾಲೇಜು ಕರ್ಣಾಟಕ ಸಂಘದ
ಉಪಾಧ್ಯಕ್ಷರೂ
ಆಗಿದ್ದ
ಕೀರ್ತಿಶೇಷ
**ಪ್ರೊ|| ಟಿ. ಎಸ್. ವೆಂಕಣ್ಣಯ್ಯ, ಎಂ.ಎ.**
ಅವರಿಗೆ ಇದು ಸಮರ್ಪಿತವು

---

## ನೆನಪು

ಎನಿತನೊರಲ್ದು ಪೇಳ್ದ ಕವಿಯೇವನದಂ ಪೆಸರಿಟ್ಟು ಮೆಚ್ಚಬ
ಲ್ಲನನರಸಲ್ಕೆವೇಳ್ಪುದವನಂ ಜಗದೊಳ್ ಪಡೆಯಲ್ಕೆ ಬಾರದಾ
ತನ ಮುಖದಿಂದಮಲ್ಲದದು ಸಲ್ಲದು ಕಟ್ಟಯುಮೇನೊ ಮಾಲೆಗಾ
ರನ ಪೊಸ ಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ

ಎಂದು, ಕವಿತ್ವ ಸಾರ್ಥಕವಾಗಲು ಬೇಕಾದ ಸಹೃದಯಸಾಪೇಕ್ಷತೆಯನ್ನು ಚಿತ್ರಿಸಿದ, ಕವಿಚಕ್ರವರ್ತಿ ಜನ್ನ, ಏಳುನೂರು ವರ್ಷ ಹಿಂದೆ.

ಅದನ್ನೇ ಕುರಿತು ಕಳೆದ ಶತಮಾನದ ಷೊರ್ಪೆಹವುರ್ ಕೂಡ ಹೇಳಿದ:

"The perceptive critical taste is, so to speak, the female analogue to the male quality of productive talent or genius. Not capable of *begetting* great work itself, it consists in a capacity of *reception*, that is to say, of recognising as such what is right, fit, beautiful, or the reverse; in other words, of discriminating the good from the bad, of discovering and appreciating the one and condemning the other. . . .

"Now, just as the sun cannot shed its light but to the eye that sees it, nor music sound but to the hearing ear, so the value of all masterly work in art and science is conditioned by the kinship and capacity of the mind to which it speaks. It is only such a mind as this that possesses the magic word to stir and call forth the spirits that lie hidden in great work. To the ordinary mind a masterpiece is a sealed cabinet of mystery—an unfamiliar musical instrument from which the player, however much he may flatter himself, can draw none but confused tones. How different a painting looks when seen in a good light, instead of in some dark corner. Just in the same way, the impression made by a masterpiece varies with the capacity of the mind to understand it.

"A fine work, then, requires a mind sensitive to its beauty; a thoughtful work, a mind that can really think, if it is to exist and live at all. . . .

"*The works of genius cannot be fully enjoyed except by those who are themselves of the privileged order. The first recognition of them, however, when they exist without aurthority to support them, demands no small superiority of mind. . . .*

"It (viz., the critical faculty) is a *rara avis*; almost as rare, indeed, as the phœnix, which appears only once in five hundred years."

ಇದನ್ನೇ ಜನ್ನ ಹೇಳಿದ್ದು, "ಅವನಂ ಜಗದೊಳ್ ಪಡೆಯಲ್ಕೆ ಬಾರದು" ಎಂದು. ಇಂತಹ ಸುಲಭ ಲಭ್ಯವಲ್ಲದ ಅಪೂರ್ವವಸ್ತುವೊಂದನ್ನು ನಾವು ಕಳೆದುಕೊಂಡೆವು, ಮೊನ್ನೆ ಪ್ರೊ|| ಟಿ. ಎಸ್. ವೆಂಕಣ್ಣಯ್ಯನವರನ್ನು ಕಳೆದು ಕೊಂಡಾಗ.

ಷೋಪೆರ್ಹವುರ್ ಹೇಳುವಂತೆ ಪ್ರಾಚೀನರನ್ನು ಹೊಗಳಿ ಹಾಡುವುದು ಕಷ್ಟವಲ್ಲ; ಅವರಿಗೆ ಹಳತನದ ಹಿರಿಮೆಯಿದೆ. ಆದರೆ ಸಮಕಾಲೀನರನ್ನು,

ಅಜ್ಞಾತರನ್ನು, ಕಂಡುಹಿಡಿದು, ಅವರ ತಿರುಳನ್ನು ಲೋಕಕ್ಕೆ ವಿಶದಪಡಿಸುವುದಕ್ಕೆ ಮನಸ್ಸಿನ ಔನ್ನತ್ಯ, ಔದಾರ್ಯ, ವೈಶಾಲ್ಯಗಳು ಅಪಾರವಾಗಿರಬೇಕು. ನಮ್ಮ ನಾಡಿನ ನೂತನ ಸಾಹಿತ್ಯದ ಶುಭೋದಯಕಾಲದಲ್ಲಿ ಚಿಲಿಪಿಲಿಗುಡುತ್ತಿದ್ದ ಹಲವಾರು ಕಿರುವಕ್ಕಿಗಳನ್ನು ಕಂಡುಹಿಡಿದು ಕರೆತಂದು, ಅವರ ಕೊರಲನ್ನು ಕಿವಿಯಾರೆ ಕೇಳಿ, "ಪ್ರಬುದ್ಧ ಕರ್ಣಾಟಕ"ದಲ್ಲಿ ಪರಿಪೋಷಿಸಿದ ವೆಂಕಣ್ಣಯ್ಯನವರಿಂದ ತಾವು ಬೆಳೆದು ಮುಂದೆ ಬಂದೆವೆಂದೂ ಅವರ ಮುಕ್ತಕಂಠದ ಮೆಚ್ಚುಗೆಯಿಂದಲೂ ಅವರ ಹಿತವಿಮರ್ಶೆಯಿಂದಲೂ ತಮ್ಮ ಬರವಣಿಗೆಗೆ ಕಳೆಯೇರಿತೆಂದೂ ನಮ್ಮ ಸಾಹಿತ್ಯದ ಹಿರಿಯ ಹೆಸರಿನವರನೇಕರು ಅವರ ಸತ್ಸಂಗವನ್ನು ಮೇಲಿಂದ ಮೇಲೆ ನೆನೆಸಿಕೊಳ್ಳುತ್ತಿರುವುದನ್ನು ಕೇಳಿದ್ದೇನೆ.

ವಾಚಕ ವಿಮರ್ಶಕರನ್ನು ಕುರಿತು

ಮಾನಿತಪದಮಂ ಪದಸಂ ।
ಧಾನಮನರ್ಘಪ್ರತೀತಿಯಂ ಕವಿಹೃದಯ ॥
ಸ್ಥಾನಮನರಿದೋದದೆ ಕ ।
ಣ್ಬೇನೆಯ ಕರಡಿಯವೊಲೂಳ್ದಪಂ ವಾಚಕನೇ ॥

ಎಂದು ಒಂದು ಅತಿಯನ್ನು ನಯಸೇನನೂ

ಬರೆದಾಹ ಬರೆದೆ ಭಾಪುರೆ ।
ಬರೆದಕ್ಕಟ ಬರೆದೆ ಲೇಸು ಬರೆದೆಯೆನುತ್ತುಂ ॥
ಬರಿದೆ ತಲೆದೂಗುವುದರಿಂ ।
ಬರಿದಪ್ಪುದು ಕಾವ್ಯಮರಿಯದರ ಜಾಣಿಂದಂ ॥

ಎಂದು ಇನ್ನೊಂದು ಅತಿಯನ್ನು ಹರಿಹರನೂ ಖಂಡಿಸಿದರು. ಈ ಎರಡೂ ಅತಿಗಳಿಂದ ದೂರರಾಗಿದ್ದವರು ಪ್ರೊ|| ವೆಂಕಣ್ಣಯ್ಯನವರು.

"In appreciating a genius criticism should not deal with the errors in his productions or with the poorer of his works, and then proceed to rate him low; it should attend only to the qualities in which he most excels. . . .

"That which distinguishes genius and should be the standard for judging it, is the height to which it is able to soar when it is in the proper mood and finds a fitting occasion—a height always out of reach of ordinary talent.

"A drug does not effect its purpose if the dose is too large; and it is the same with censure and adverse criticism when it exceeds the measure of justice."

ಎಂಬ ತತ್ವವನ್ನು ಹಿಡಿದು ಆಧುನಿಕ ಸಾಹಿತ್ಯವನ್ನೂ ಅದರಲ್ಲೂ ಕಿರುವಯಸ್ಸಿನ ಸಾಹಿತಿಗಳನ್ನೂ ಸಹಾನುಭೂತಿಯಿಂದ ಒರೆಹಚ್ಚುತ್ತಿದ್ದವರು ಪ್ರೊಫೆಸರ್ ವೆಂಕಣ್ಣಯ್ಯನವರು.

ತಮ್ಮ ಕಣ್ಣಮುಂದಿನ ಕಿರಿಯರನ್ನು ಕಂಡಾಗಲೆಲ್ಲ ವಿಶ್ವಾಸದಿಂದ ವಿಚಾರಿಸುವರು. 'ಹೊಸದಾಗಿ ಬರೆದುದು ಏನಾದರೂ ಇದ್ದರೆ ತಂದು ಓದು, ಕೇಳೋಣ' ಎಂದು ಸಂಕೋಚವನ್ನು ದೂರಮಾಡುವ ಸದರದಿಂದ ಬರಮಾಡಿಕೊಳ್ಳುವರು. "ಏಕೆ! ಏನೂ ಬರೆದಿಲ್ಲವೆ? ನಾವು ಬರೆಯಬೇಕಾದುದು ಇನ್ನೂ ಬೇಕಾದಷ್ಟಿದೆಯಪ್ಪ" ಎಂದು ಹೊಸ ಹೊಸ ವಿಷಯಗಳನ್ನು ಕುರಿತು ಮಾತನಾಡಿ ಪ್ರೇರಿಸುವರು. ಹೊರಕ್ಕೆ ತೆಗೆಯಲು ಕೂಡ ನಾಚುತ್ತಿದ್ದ ಹರಕು ಮುರುಕುಗಳನ್ನೂ ಹೊರದೆಗೆಯಿಸಿ, ಕೇಳಿ, ತಮ್ಮ ಸಹಜಸ್ಮಿತದಿಂದ ಅವುಗಳ ಗುಣಾವಗುಣಗಳನ್ನು ತೂಗಿ ತಿದ್ದುವರು. ತಮಗೆ ಯಾವುದಾದರೂ ಮೆಚ್ಚಾದರೆ ಅದನ್ನು ಎತ್ತಿಕೊಂಡು ಬಾಯಿತುಂಬ ಹಾಡಿ ಹರಸಿ, "ಪ್ರಬುದ್ಧ ಕರ್ಣಾಟಕ"ದಲ್ಲಿ ಅದಕ್ಕೆ ಮಣೆಹಾಕುವರು. ತನ್ನ ಕೃತಿ "ಪ್ರಬುದ್ಧ ಕರ್ಣಾಟಕ"ದಲ್ಲಿ ಅಚ್ಚಾಗುವುದು ತನಗೊಂದು ಗೌರವವೆಂದು ನಮ್ಮಲ್ಲಿ ರೂಢಿಯಾಗಿದ್ದ ಭಾವನೆಗೆ, ಅದು ಅಚ್ಚಾಗಬೇಕಾದರೆ ಪ್ರೊ|| ವೆಂಕಣ್ಣಯ್ಯನವರ ಮೆಚ್ಚುಗೆಗೆ ಪಾತ್ರವಾಗಿತ್ತೆಂಬ ನಂಬಿಕೆಯೂ ಒಂದು ಕಾರಣವೆಂದು ನನಗೆನ್ನಿಸುತ್ತದೆ.

ಅವರು ಮೈಸೂರು ಕಾಲೇಜಿಗೆ ಬಂದ ತರುಣದಲ್ಲಿ ಅವರ ಉಪಾಧ್ಯಕ್ಷತೆಯಲ್ಲಿ 'ಕರ್ಣಾಟಕ ಸಂಘ'ವು "ಕಿರಿಯ ಕಾಣಿಕೆ" ಮತ್ತು "ತಳಿರು" ಎಂಬ ಕವನ ಸಂಗ್ರಹಗಳನ್ನು ಪ್ರಕಟಿಸಿತು. ಕೇವಲ ವಿದ್ಯಾರ್ಥಿಗಳ ಕೃತಿಗಳನ್ನು ಕೂಡಿಸಿ ಅಚ್ಚುಹಾಕಿಸಿದ ಪ್ರಥಮಪ್ರಯತ್ನಗಳೆಂದರೆ ಇವೇ. ಆಗ 'ತಳಿರು' ಪುಸ್ತಕದ ಮುನ್ನುಡಿಯಲ್ಲಿ "ಮುಖ್ಯವಾಗಿ, ಕವನಮಾಡುವುದರಲ್ಲಿ ಆಸಕ್ತಿಯುಳ್ಳವರಿಗೆ ಉತ್ತೇಜನ ಕೊಡಬೇಕೆಂಬ ಉದ್ದೇಶದಿಂದ ಈ ಪುಸ್ತಕವನ್ನು ಪ್ರಕಟಿಸಿದ್ದೇವೆ" ಎಂದು ಅವರು ಹೇಳಿದ್ದರು. ಅದರಲ್ಲಿ ನನ್ನದೂ ಮೂರು ಕವನಗಳಿಗೆ ಅವಕಾಶಕೊಟ್ಟಿದ್ದರು. ಅಂದು ಮೊದಲಾದ ಅವರ ಉತ್ತೇಜನದ

ನಿರಂತರಧಾರೆಯಿಂದ ಪುಷ್ಟಿಗೊಂಡು ಬೆಳೆಯುತ್ತಿರುವವನು ನಾನು. ಅವರ ಮೇಲುಪಂಕ್ತಿಯನ್ನು ಅನುಸರಿಸಿ ಇಲ್ಲಿ ಕೊಟ್ಟಿರುವ ಈ ಮೂರನೆಯ ಪ್ರಯತ್ನವನ್ನು ಅವರು ವಿಶ್ವಾಸದಿಂದ ಓದಿಸಿ ಕೇಳಿ ಸಂತೋಷಪಟ್ಟಿದ್ದರು, ಇದಕ್ಕೆ ಅಭ್ಯುದಯವನ್ನು ಕೋರಿದ್ದರು. ಇದು ಅಚ್ಚಾಗಿ ಬಂದು, ಅವರಿಗೆ ತೋರಿಸುವೆನೆಂದು ಬಲು ಆಸೆ ಇಟ್ಟುಕೊಂಡಿದ್ದೆ. ಅದು ಕೈಗೂಡದೆ ಹೋಯಿತು.

ಸಾಹಿತ್ಯ ಹಳತಾಗಲಿ ಹೊಸತಾಗಲಿ, ಹಳತರಲ್ಲಿ ಜೈನ ವೀರಶೈವ ಬ್ರಾಹ್ಮಣ ಯಾವುದೇ ಆಗಲಿ, ಹೊಸತರಲ್ಲಿ ಹಿರಿಯರದಾಗಲಿ ಕಿರಿಯರದಾಗಲಿ —ಎಲ್ಲಿ ಗುಣ ಕಂಡರೂ ಅಲ್ಲಿ ಅದನ್ನು ಎತ್ತಿಕೊಂಡು ಏಕರೀತಿಯಾದ ತನ್ಮಯತೆಯಿಂದ ಪ್ರಚುರಪಡಿಸುತ್ತಿದ್ದವರು ಪ್ರೊ|| ವೆಂಕಣ್ಣಯ್ಯನವರು. ಭಗವಾನ್ ರಾಮಕೃಷ್ಣರನ್ನೂ ಕವಿ ರವೀಂದ್ರರನ್ನೂ ವಂಗದಿಂದ ಕನ್ನಡಕ್ಕೆ ತಂದರು, ತರಿಸಿದರು. ಕನ್ನಡ ಭಾಷಾಚರಿತ್ರೆಯನ್ನು ಪೂರ್ವಕಾಲದಿಂದ ಬರೆದಿಟ್ಟರು. ನಾಗವರ್ಮ ರಾಘವಾಂಕ ಹರೀಶ್ವರರನ್ನು ಹೆಚ್ಚು ಜನರಿಗೆ ಹತ್ತಿರಮಾಡಿ ಕೊಟ್ಟರು. ಪಂಪ ಬಸವಣ್ಣ ನಾರಣಪ್ಪನವರನ್ನು ಹೋದಕಡೆಯಲ್ಲೆಲ್ಲ ಹರಡಿ ಹಬ್ಬಿಸಿದರು. ಹೊಸದಕ್ಕಂತೂ ಅವರಿಂದಾದ ಪ್ರೇರಣೆ ಪ್ರೋತ್ಸಾಹಗಳಿಗೆ ಅವುಗಳನ್ನು ಪಡೆದು ಇರುವವರು ಅನೇಕರೆ ಸಾಕ್ಷಿ. ಪ್ರಾಚೀನ ನವೀನಗಳಿಗೆ ಸಂಬಂಧ ಸಂಘಟಿಯಿಸುವ ಸೇತುವೆಯಂತಿದ್ದರು, ಅವರು.

ಪ್ರೊ|| ವೆಂಕಣ್ಣಯ್ಯನವರ ಈ ಗುಣವನ್ನು ಸರಿಗಟ್ಟುತ್ತಿದ್ದುದೆಂದರೆ ಅವರಿಗೆ ತಮ್ಮ ಶಿಷ್ಯರಲ್ಲಿದ್ದ ವಾತ್ಸಲ್ಯ; ಅವರಿಗೆ ಅವರು ನೀಡುತ್ತಿದ್ದ ಅಭಯ ವರದ ಹಸ್ತಗಳು. ಬಂಧುವರ್ಗದಿಂದ ದೂರವಾಗಿ ತತ್ತ್ವಶಃ ತಬ್ಬಲಿಗಳಾಗಿದ್ದವರಿಗಂತೂ ಅವರು ತಾಯಿತಂದೆಗಿಂತ ಹೆಚ್ಚಾಗಿದ್ದರು. 'ಸಂಕಟ ಬಂದರೆ ವೆಂಕಟರಮಣ' ಎಂಬ ಹಳೆಯ ಗಾದೆ 'ಸಂಕಟ ಬಂದರೆ ವೆಂಕಣ್ಣಯ್ಯ' ಎಂಬ ಹೊಸ ರೂಪು ತಾಳಿತ್ತು. ಯುದ್ಧದಲ್ಲಿ ಸೋತು ನೊಂದ ದುರ್ಯೋಧನನಿಗೆ ತಂದೆತಾಯ್ವಿರು "ನೆಗಳ್ವ ಕಜ್ಜಮಾವುದುಮನಜ್ಜನೊಳಾಲೋಚಿಸಿ ನೆಗಳ್ವುದು" ಎಂದು ಹೇಳಿ, ಭೀಷ್ಮರಲ್ಲಿಗೆ ಕಳುಹಿಸಿದರಂತೆ. ಆದರಂತೆಯೇ ಏನು ಕೆಲಸ ಮಾಡಬೇಕಾದರೂ ಸಲಹೆ ಕೇಳಲು ಸುಲಭವಾಗಿ ಅವರ ಬಳಿಗೆ ಓಡುತ್ತಿದ್ದೆವು. ಒಂದೊಂದುಸಲ ಅವರ ಸಲಹೆಗೆ ವಿರುದ್ಧವಾಗಿ ನಡೆದು ಅನಂತರ ಪರಿತಪಿಸಿದರೆ, ಬೈಬಲಿನ 'Prodigal Son' ಕತೆಯಲ್ಲಿನ ತಂದೆಯಂತೆ ತಪ್ಪನ್ನು ಮರೆತು

ಪುನಃ ವಿಶ್ವಾಸದಿಂದ ಬಳಿಗೆ ಕರೆದುಕೊಳ್ಳುವರು. ಇಂತಹವರನ್ನು ಕಳೆದುಕೊಂಡವರು ತಬ್ಬಲಿಗಳಂತೆ ಪರದಾಡುವುದು ತಪ್ಪದು.

ನಮ್ಮ ಇಂದಿನ ಕನ್ನಡಕುಲದಲ್ಲಿ ಅವರಷ್ಟು ನಿಡುನಿಂತ ಎತ್ತರದವರು ಅವರೊಬ್ಬರೇ. ಅವರ ಹೊರಗಣ ಎತ್ತರ ಅವರ ಒಳಗಣ ಔನ್ನತ್ಯದ ಒಂದು ಸೂಚಿ. ವಿದ್ಯಾರ್ಥಿಸಂಘಗಳಲ್ಲಾಗಲಿ ಬೇರೆ ಸಮೂಹಗಳಲ್ಲಿಯಾಗಲಿ ಹತ್ತು ಜನ ಹತ್ತುಕಡೆಗೆ ಮುಖಮಾಡಿಕೊಂಡಿದ್ದರೆ, ಅವರೆಲ್ಲರನ್ನೂ ಒಮ್ಮುಖವಾಗಿ ತಿರುಗಿಸುವ ಅದ್ಭುತ ಶಕ್ತಿ ಅವರಲ್ಲಿತ್ತು. ತಾವು ಯಾವ ಒಂದು ವಿಶಿಷ್ಟ ಪಂಗಡಕ್ಕೆ ಸೇರದಿದ್ದರೂ ಎಲ್ಲಾ ಪಂಗಡಗಳಿಗೂ ಬೇಕಾದವರಾಗಿದ್ದರು. ಪ್ರೊ॥ ವೆಂಕಣ್ಣಯ್ಯನವರು ನಮ್ಮ ಕನ್ನಡ ಕುಲದ '**ಅಜಾತಶತ್ರು**'.

ಪ್ರೊ॥ ವೆಂಕಣ್ಣಯ್ಯನವರು ಕಣ್ಮರೆಯಾದರು. ಆದರೆ ಅವರ ಸಾಂಗತ್ಯ ಪಡೆದ ಯಾರ ಮನಸ್ಸಿನಿಂದಲೂ ಅವರು ಮರೆಯಾಗುವಂತಿಲ್ಲ. ನಮಗೂ ನಮ್ಮ ನಮ್ಮವರಿಗೂ ಅವರ ನೆನಪು ಅಚ್ಯುತವಾದ ಪ್ರೇರಣೆಯಾಗಿರಲಿ, ಅವರ ಆಶೀರ್ವಾದ ಸದಾ ರಕ್ಷೆಯಾಗಿರಲಿ.

*

# ವಿವರ

# ಲೇಖನಗಳು

ಪುಟ

## ಮೊದಲಿನ ಗೊಂಚಲು

ಎರಡನೆಯ ಗೊಂಚಲು



ವಿದ್ಯಾರ್ಥಿವಿಚಾರ ವಿಲಾಸ

## ಕಾವ್ಯಾವಲೋಕನ



## ಸೀನಿಯರ್ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿ

## FORE-WORD

I have much pleasure in complying with the suggestion of my young friend Mr. Rajaratnam that I should write a fore-word to this collection of short Kannada essays by his pupils in the Intermediate College. I take particular pleasure in doing so, because the collection represents commendable efforts to write Kannaḍa prose, and a refreshing diversion from the insidious temptation to write verse, blank or rhymed. Then again most of the essays are pleasing attempts, frequently successful, to write light humorous sketches and not laboured and heavy dissertations on serious subjects. This represents a healthy and much-needed strain in the Kannada world. I hope in good time one or more of the young writers will develop into a P. G. Wodehouse or a A. P. Herbert, who have done so much to increase the sum total of human enjoyment.

1939. N. S. SUBBA RAO.

# ಮುನ್ನುಡಿ

ಇಂಟರ್ಮೀಡಿಯೆಟ್ ಕಾಲೇಜಿನ ತಮ್ಮ ವಿದ್ಯಾರ್ಥಿಗಳ ಈ ಸಣ್ಣ ಕನ್ನಡ ಪ್ರಬಂಧಗಳ ಸಂಗ್ರಹಕ್ಕೆ ನಾನು ಒಂದು ಮುನ್ನುಡಿ ಬರೆಯಬೇಕೆಂದು ನನ್ನ ತರುಣ ಮಿತ್ರರಾದ ಶ್ರೀ ರಾಜರತ್ನಂ ಅವರು ಮಾಡಿದ ಸೂಚನೆಯನ್ನು ನಡಸಿ ಕೊಡಲು ನನಗೆ ಬಹು ಸಂತೋಷ. ಇದರಲ್ಲಿ ನನಗೆ ಒಂದು ನಿರ್ದಿಷ್ಟ ಸಂತೋಷ; ಏನೆಂದರೆ ಈ ಸಂಗ್ರಹವು ಕನ್ನಡ ಗದ್ಯವನ್ನು ಬರೆಯುವ ಶ್ಲಾಘನೀಯ ಪ್ರಯತ್ನಗಳನ್ನು ಆಯ್ದು ತೋರಿಸುವುದಲ್ಲದೆ ಪದ್ಯಗಳನ್ನು—ಪ್ರಾಸಸಹಿತ ವಾಗಲಿ ಪ್ರಾಸರಹಿತವಾಗಲಿ—ಬರೆಯುವ ಕಪಟಮೋಹವನ್ನು ತೊರೆದದ್ದರಿಂದ ಉಲ್ಲಾಸಗೊಳಿಸುತ್ತದೆ. ಇದೂ ಅಲ್ಲದೆ, ಪ್ರಬಂಧಗಳಲ್ಲಿ ಬಹುಮಟ್ಟಿನವು ಲಘುಹಾಸ್ಯಚಿತ್ರಗಳನ್ನು ಬರೆಯುವ ಹಿತವಾದ ಪ್ರಯತ್ನಗಳು, ಆಗಾಗ್ಗೆ ಕೃತ ಕೃತ್ಯವಾದವು; ಗಭೀರವಾದ ವಿಷಯಗಳನ್ನು ಕುರಿತು ತಿಣಿಕಿದ ಘನಪ್ರವಚನ ಗಳಲ್ಲ. ಕನ್ನಡ ಪ್ರಪಂಚಕ್ಕೆ ಆರೋಗ್ಯಕರವಾದ, ಬಲು ಆವಶ್ಯಕವಾದ ಧಾಟಿಯನ್ನು ಇದು ಕಾಣಿಸಿಕೊಡುವುದು.

ಮಾನವರ ಆನಂದದ ಒಟ್ಟುಕೂಟವನ್ನು ಹೆಚ್ಚಿಸಲು ಎಷ್ಟೋ ಮಾಡಿರುವ ಒಬ್ಬ ಪಿ. ಜಿ. ವೋಡ್ಹೌಸ್ ಅಥವಾ ಒಬ್ಬ ಎ. ಪಿ. ಹರ್ಬರ್ಟ್ ಆಗಿ ಇಲ್ಲಿನ ತರುಣ ಲೇಖಕರಲ್ಲಿ ಒಬ್ಬನೋ ಹೆಚ್ಚಿನವರೋ ಸಕಾಲದಲ್ಲಿ ವಿಕಾಸವಾಗುವ ರೆಂದು ಆಶಿಸುತ್ತೇನೆ.

೧೯೩೭. ಎ. ಎಸ್. ಸುಬ್ಬರಾವ್

# ನಮ್ಮ ನಮ್ಮವರು

## ೧

ನಮ್ಮನಮ್ಮವರು ಎಂದರೆ, ನಮ್ಮ ಕಾಲೇಜಿನ ವಿದ್ಯಾರ್ಥಿಗಳು.

ಈ ಮುಂದಿನ ೪೫ ಕನ್ನಡ ಕೃತಿಗಳು ಅವರವರೆ ಬರೆದುವು. ಇವುಗಳಲ್ಲಿ ಮೊದಲನೆಯ ೨೨, ತಮಗೆ ತೋಚಿದ ವಿಷಯಗಳನ್ನು, ಯಾವ ನಿರ್ಬಂಧವೂ ಇಲ್ಲದೆ, ಪರರ ಪ್ರೇರಣೆಯಿಲ್ಲದೆ, ತಾವೇ ಆರಿಸಿಕೊಂಡು, ಸ್ವತಂತ್ರವಾಗಿ ಬರೆದವು. ಅನಂತರದ ೨೦ ಲೇಖನಗಳು "ನನ್ನ ಮೊತ್ತಮೊದಲ ನೆನಪು" ಎಂದು ನಿರ್ದೇಶಿಸಿ ಕೊಟ್ಟ ಹಣೆಬರಹದ ಕೆಳಗೆ ಬರೆದವು.

ಇವು ಎಲ್ಲಿಯಾದರೂ ಅಚ್ಚಾದಾವೆಂಬ ನಿರೀಕ್ಷೆಯಿಂದ ಹವಣಿಸಿ ಬರೆದ ಲೇಖನಗಳಲ್ಲ; ಇವು ತರಗತಿಯಲ್ಲಿ, ಯಾವ ತೆರದ ಪೂರ್ವಸಿದ್ಧತೆಗಳೂ ಇಲ್ಲದೆ, ಅನಿರೀಕ್ಷಿತವಾಗಿ ಪ್ರಬಂಧವನ್ನು ಬರೆಯಬೇಕಾಗಿ ಬಂದಾಗ, ಕೇವಲ ೩೫—೪೦ ನಿಮಿಷಗಳೊಳಗೆ ಮುಗಿಸಿ ಆದವು.

ಇವು ಹುಡುಗರಿಗೆ "ಹೇಳಿಕೊಟ್ಟು ಬರೆಯಿಸಿದ" ಬರೆವಣಿಗೆಯಲ್ಲ; ಅವರ ಮನಸ್ಸಿನ ಮುಕ್ತದ್ವಾರದಿಂದ ಹೊರಬಿದ್ದ ಸಹಜವಾದ ಮಾತಿನಮಾಲೆ.

ಇಲ್ಲಿ ಯಾವ ಲೇಖನದಲ್ಲಿಯೂ—ಅಕ್ಷರಸ್ಖಾಲಿತ್ಯಗಳನ್ನು ತಿದ್ದಿದ್ದು (ಕೆಲವೆಡೆ ಸ್ಖಾಲಿತ್ಯಗಳನ್ನು ಬೇಕೆಂದೇ ಉಳಿಸಿಕೊಂಡಿದೆ), ಎರಡು ಕಡೆ ವಿರಸವಾದ ಭಾವಗಳನ್ನು ಬಿಟ್ಟದ್ದು, ಹೊರತಾಗಿ—ಹಿರಿಯರ ಯಾರ ಕೈಯಾಟವೂ ಇದರಲ್ಲಿ ಏನೂ ನಡೆದಿಲ್ಲವೆಂಬುದನ್ನು ಗಮನಿಸಬೇಕು. ಪ್ರತಿಯೊಬ್ಬನ ವಿಶಿಷ್ಟತೆಯನ್ನು ಹಾಗೆಯೆ ಉಳಿಸಿಕೊಂಡು ತದ್ವತ್ತಾಗಿ ಇಲ್ಲಿ ಕೊಡಲಾಗಿದೆ.

ನಾನು ಏಳೆಂಟು ಕಡೆ ಇವುಗಳನ್ನು ಓದಿ ತೋರಿಸಿದಾಗ, ಕೇಳಿದವರು ಇವುಗಳನ್ನು ವಿದ್ಯಾರ್ಥಿಗಳ ಹದಿನಾರಾಣೆಯ ಬರೆವಣಿಗೆಯೆಂದು ನಂಬದೆ, ಅವರವರ ಸ್ವಹಸ್ತಾಕ್ಷರದ ಮೂಲಪತ್ರಗಳನ್ನು ಕಾಣಿಸಿದಮೇಲೆ ಒಪ್ಪಿ ಬೆರಗಾಗಿದ್ದಾರೆ. ನಮ್ಮನಮ್ಮವರ ಶಕ್ತಿಸಾಮರ್ಥ್ಯಗಳಲ್ಲಿ ನಮ್ಮನಮ್ಮವರಿಗೇ ನಂಬಿಕೆಯಿಲ್ಲದಿರುವುದು ಏನೂ ಹೊಸದಲ್ಲ.

೨

ಮೊದಲಿನ ಇಪ್ಪತ್ತೆರಡು ಹರಟೆಗಳನ್ನೂ ಚಿತ್ರಗಳನ್ನೂ ಓದಿದವರು, ಉಳಿದ ವಿದ್ಯಾರ್ಥಿಗಳು ಇನ್ನೇನು ಬರೆದಿರಬಹುದೆಂದು ಕುತೂಹಲಪಡುವುದು ಸಹಜ. ಉಳಿದವು ಇವುಗಳಂತೆ ತದ್ವತ್ತಾಗಿ ಪ್ರಕಟಿಸಲು ತಕ್ಕವಾಗಿರಲಿಲ್ಲ. ಅವುಗಳಲ್ಲಿ ಎಲ್ಲವೂ ಚೆನ್ನಾಗಿರಬೇಕೆಂದು ನಿರೀಕ್ಷಿಸುವುದು ತರವಲ್ಲವಾದರೂ, ಒಳ್ಳೆಯವಾಗಿದ್ದವುಗಳಲ್ಲಿ ಅನೇಕ ಗುಟ್ಟಿನಲ್ಲಿ ಆಡಿದ ಮಾತುಗಳಂತಿದ್ದುವು; ಬರೆವಣಿಗೆ ಬಹು ಬಿಚ್ಚಾಗಿ, ಧೃಷ್ಟವಾಗಿ, ಹೊರಗೆಡವಲು ಸಂಕೋಚವನ್ನುಂಟು ಮಾಡತಕ್ಕುದಾಗಿತ್ತು. ಉಳಿದವುಗಳಲ್ಲಿ ಭಾಷೆಯಿದ್ದರೆ ವಿಷಯವಿಲ್ಲ, ವಿಷಯ ವಿದ್ದರೆ ನಿರೂಪಣೆಯ ಕ್ರಮವಿಲ್ಲ. ಆದರೂ ಎಲ್ಲ ಬರೆಹಗಳಲ್ಲೂ ಮುಖ್ಯವಾಗಿ ಸಹಜತೆಯಿತ್ತು, ಪ್ರತಿಯೊಂದರಲ್ಲೂ ಹೊಸತನವಿತ್ತು. ಸಂಸ್ಕರಿಸಿ ಅವುಗಳನ್ನೂ ಸೇರಿಸಬಹುದಾಗಿತ್ತಾದರೂ, ಇತರರ ಕೈವಾಡವಿಲ್ಲದ, ಕೇವಲ ವಿದ್ಯಾರ್ಥಿಗಳ ಬರೆಹಗಳನ್ನೇ ತೋರಿಸಬೇಕೆಂಬ ಆಶಯದಿಂದ ಅವುಗಳನ್ನು ಬಿಡಲಾಯಿತು.

ಇನ್ನು, ವಿದ್ಯಾರ್ಥಿಗಳು ಸಹಜವಾಗಿ ಬರೆಯಲು ಹೊರಟರೆ, ಅವರು ಎಂತಹ ವಿಷಯಗಳನ್ನು ಆರಿಸಿಕೊಳ್ಳುವರೆಂಬುದನ್ನು ಈ ಕೆಳಗಿನ ವಿವರ ದಿಂದ ಸ್ವಲ್ಪಮಟ್ಟಿಗೆ ಗ್ರಹಿಸಬಹುದು.

ತರಗತಿಯಲ್ಲಿ ವಿದ್ಯಾರ್ಥಿಗಳಿಂದ ಬಂದ ಪ್ರಬಂಧಗಳ ಸಂಖ್ಯೆ ೩೮೪. ಅವುಗಳಲ್ಲಿ ಒಂದು ಮಾತ್ರ ಛಂದಸ್ಸಿಲ್ಲದೆ 'ಪದ್ಯ'ವೆಂದು ಬರೆದ ಬರೆವಣಿಗೆ; ಉಳಿದುವು ಗದ್ಯವೆಂದೇ ಬರೆದ ಗದ್ಯ. ಅವುಗಳಲ್ಲಿ

(೧)"ಏನು ಪ್ರಬಂಧ ಬರೆಯಬೇಕು?" ಎಂಬುದನ್ನೇ ಕುರಿತು ಹರಟಿದ ಹರಟೆಗಳು—೧೪.

(೨) ಈ ವರ್ಷ ಯೂನಿಯನ್ ರೆಸ್ಟೋರೆಂಟಿನಲ್ಲಿ ಕಾಫಿಯ ಬೆಲೆ ಆರು ಕಾಸಿರಬೇಕೆ? ಅಥವಾ ಒಂಬತ್ತು ಕಾಸಿರಬೇಕೆ? ಎಂದು ವಿದ್ಯಾರ್ಥಿಗಳಲ್ಲಿ ನಡೆದ ಚಳುವಳಿಯನ್ನು ಕುರಿತು—೬.

(೩) ತಾವು ಕಾಲೇಜು ಸೇರಿದ್ದು, ಕಾಲೇಜು ವಿದ್ಯಾರ್ಥಿಗಳು, ಕಾಲೇಜು ಹುಡುಗರ ಸ್ವಭಾವ, ಕಾಲೇಜಿನ ಕ್ಯಾಂಟೀನ್, ಹಾಸ್ಟೆಲ್ಲುಗಳ ಅನುಭವ, ತಮ್ಮ ಕಂಬೈಂಡ್ ಸ್ಟಡಿ, ಕಾಲೇಜು ವಿದ್ಯಾಭ್ಯಾಸ, ಕಾಲೇಜಿನಲ್ಲಿ ರಜಗಳು, ಸೋಷಿ

ಯಲ್ ನೈಟ್, ಹ್ಯಾಟ್ ನೈಟ್ ಡಿಬೇಟ್, ಯೂನಿಯನ್ ಇಲೆಕ್ಷನ್, ಪರೀಕ್ಷೆಗಳು, ಸ್ಪೆಷಲ್ ಕ್ಲಾಸುಗಳು, ಕಾಲೇಜ್ ಡೇ, ಉಪನ್ಯಾಸಗಳು, ಕಾವ್ಯಪಠನಗಳು— ಮುಂತಾಗಿ ಕಾಲೇಜು ವಾತಾವರಣಕ್ಕೆ ಸಂಬಂಧಿಸಿದವು—೧೯.

(೪) ತಾವು ಹೆದರುತ್ತಿದ್ದ ದೆವ್ವ ಗುಮ್ಮಯ್ಯಗಳನ್ನು ಕುರಿತದ್ದು—೧೪.

(೫) ತಾವು ಓದಿದ ಭ್ರಾಂತಿವಿಲಾಸ, ರೋಮಿಯೋ ಜೂಲಿಯೆಟ್ ಮುಂತಾದ ಪುಸ್ತಕಗಳ ವಿಷಯವಾಗಿ—೬.

(೬) ತಾವು ಕಂಡ ಸಿನೆಮಗಳನ್ನು ಕುರಿತು—೫.

(೭) ರೈತನ ಜೀವನ, ವಿದ್ಯುಚ್ಛಕ್ತಿ, ಬ್ರಹ್ಮಚರ್ಯೆ, ದೇಶಾಟನೆ, ಗುಣ, ಬಡತನ, ಗುಲಾಮಗಿರಿ, ಕವಿ ಮತ್ತು ಜೀವನ, ರೇಷ್ಮೆಹುಳು, ಇರುವೆ— ಮುಂತಾದ ವಿವಿಧ ವಿಷಯಗಳ ಮೇಲೆ ನ್ಯಾಸ ಬರೆಯಲು ಪ್ರಯತ್ನಗಳು–೨೧.

(೮) ತಮಗೆ ಅನುಭವವಿಲ್ಲದ ಅರ್ಥವಾಗದ 'ನನ್ನ ಮುದ್ದು ಮೋಹ ನಾಂಗಿ,' 'ಮನೋರಮೆಯ ಮದುವೆ' ಮುಂತಾದ ಪ್ರಣಯದ ಪಜೀತಿಕತೆ ಗಳು—೧೨. (೩೮೪ಕ್ಕೆ ಇಂತಹದು ಕೇವಲ ೧೨ ಮಾತ್ರ ಬಂದಿರುವುದನ್ನು ಗಮನಿಸಬೇಕು).

(೯) ಇದರಂತೆಯೆ ರಾಜಕೀಯ ವಿಷಯಗಳಲ್ಲಿ ಕೈಬೆರಳು ಅದ್ದಲು ಪ್ರಯತ್ನಿಸಿದುವು –೪.

(೧೦) ಉಳಿದ ೨೮೨ರಲ್ಲಿ ಡಬ್ಬಲ್ ರೈಡಿಂಗ್, ಕಳ್ಳ ಅಡ್ರೆಸ್, ಸುಂಕಕ್ಕೆ ಸೊನ್ನೆ ಹಾಕಿದ್ದು, ಸಂಗೀತ ಕಚೇರಿ, ಹೆಗ್ಗಣ ಹೊಡೆದದ್ದು, ನಾಯಿಯ ಕಿವಿ ಕತ್ತರಿಸಿದ್ದು; ತಾವು ಬೇಲೂರು, ಹರಿಹರ, ಸಿದ್ದಲಿಂಗಪುರ, ತಲಕಾಡು, Zoo, ಚಾಮುಂಡಿ ಬೆಟ್ಟಗಳಿಗೆ ಹೋದ ಯಾತ್ರೆಗಳು, ಟ್ರಿಪ್ಪುಗಳು ಮುಂತಾದವು; ಎರಡು ಕಾಸಿನ ದೋಸೆ, ಕಾಗೆ ಪುರಾಣ, ಹೆಂಚಿಕಡ್ಡಿಮೀಸೆ, ಗರಣೆ ಮೊಸರು, ಪರೀಕ್ಷೆಯಾಗ ಮುಂತಾದವು; ತಮ್ಮ ಬೈಸಿಕಲ್ ಸವಾರಿ, ಈಜಿನ ಇತಿಹಾಸ, ಪುಟ್‌ಬಾಲ್ ಕ್ರಿಕೆಟ್ಟುಗಳು; ಚಿಕ್ಕ, ಚುಂಚ, ಮಂಚ, ದವಣೆತಿಮ್ಮ, ಚಿಡ್ಡಿ ಚಿಕ್ಕಣ್ಣ, ಸೀಮೆಯೆಣ್ಣೆ ಸಿದ್ದಯ್ಯ, ಗಡಾರಿ ತಿಮ್ಮಯ್ಯ, ನಮ್ಮ ಕೋಳಿಕಳ್ಳ ಮುಂತಾದ ತಮ್ಮ ಪರಿಚಯದವರನ್ನು ಕುರಿತ ಚಿತ್ರಗಳು; ಇವುಗಳಲ್ಲಿ ತಾವು ಮಾಡಿದ ಯಾತ್ರೆ ತಾವು ಕಂಡ ಜಾತ್ರೆಗಳೇ ಬಹಳ.

ಈ ರೀತಿಯಾಗಿ ವಿದ್ಯಾರ್ಥಿಗಳು ಪೂರ್ವಸಿದ್ಧತೆಯಿಲ್ಲದೆ ಸಹಜವಾಗಿ

ಬರೆದ ಲೇಖನಗಳಲ್ಲಿ ಒಂದು ದೊಡ್ಡ ಗುಣ ಕಂಡುಬರುತ್ತದೆ: ತಮಗೆ ಅನುಭವವಿಲ್ಲದ ಯಾವ ವಿಷಯದ ಗೋಜಿಗೂ ಅವರು ಹೋಗುವುದು ಅಪೂರ್ವ. ಆದರೆ ಯಾವುದಾದರೂ ಪತ್ರಿಕೆಗೆ ಏನಾದರೂ ಬರೆದು ಕೊಡಬೇಕೆಂದು ಮನಸ್ಸಿಗೆ ಬಂದರೆ ಸಾಕು; "ನನ್ನ ನವಮೋಹನಾಂಗಿ"ಯರನ್ನೂ "ಮನೋರಮೆಯ ಮದುವೆ"ಗಳನ್ನೂ ಮೈಲಿ ಮೈಲಿಗಟ್ಟಲೆ ಹೊಸೆದು ಹರಿಸಿ ಬಿಡುತ್ತಾರೆ!

ಈ ರೀತಿಯಾಗಿ ವಿಷಯದ ಆಯ್ಕೆಯನ್ನು ವಿದ್ಯಾರ್ಥಿಗಳ ಪಾಲಿಗೆ ಬಿಟ್ಟಿದರ ಫಲವಾಗಿ ಬಂದ ೩೮೪ ಬರೆಹಗಳಲ್ಲಿ ಪ್ರಕಟಿಸಲು ತಕ್ಕವಾಗಿ ಕಂಡುಬಂದವು ೨೨ ಮಾತ್ರ.

೩

ಆದರೆ ಇನ್ನೊಮ್ಮೆ "ನನ್ನ ಮೊತ್ತಮೊದಲ ನೆನಪು" ಎಂದು ವಿಷಯವನ್ನು ನಿಷ್ಕರ್ಷಿಸಿಕೊಟ್ಟಾಗ, ವಿದ್ಯಾರ್ಥಿಗಳಿಂದ ಬಂದ ೨೩೮ ಬರೆಹಗಳಲ್ಲಿ (ಉಳಿದವರ ಕಡೆಯಿಂದ ಬರೆಸಲಾಗಲಿಲ್ಲ) ತದ್ವತ್ತಾಗಿ ಪ್ರಕಟಿಸಲು ತಕ್ಕವಾದವುಗಳ ಸಂಖ್ಯೆ ೨೦! ಮೊದಲಿನದಕ್ಕಿಂತ ಇದರಲ್ಲಿ ಹೆಚ್ಚು ವಿವಿಧತೆಯಿದೆ, ಸಹಜತೆಯಿದೆ, ಸ್ವಯಂಸ್ವರೂಪವಿದೆ.

ಈ ೨೩೮ ರಲ್ಲಿ ಅರ್ಧಕ್ಕಿಂತ ಹೆಚ್ಚುಪಾಲು, ತಾವು ಮೊತ್ತಮೊದಲು ಶಾಲೆಗೆ ಹೋದ ನೆನಪು, ಇಂದಿಗೂ ಮರೆಯದ ನೆನಪು.

೧. "ನನಗೆ ಐದು ವರ್ಷ, ಶಾಲೆಗೆ ಸೇರಿಸಿದರು. ನನಗೆ ಶಾಲೆಯೆಂದರೆ ನಡುಕ. ನಾವು ಚಿಕ್ಕವರಾಗಿದ್ದಾಗ ಉಪಾಧ್ಯಾಯರ ಕೈಗೆ ನಾವು ಸಿಕ್ಕಿಬಿಟ್ಟರೆ ಯಮನ ಕೈಗೆ ಸಿಕ್ಕಿದ ಹಾಗೆಯೆ! ಚರ್ಮವನ್ನು ಸುಲಿದು ಬಿಡುತ್ತಿದ್ದರು. ಅಬ್ಬಾ! ಈಗಲೂ ನೆನೆಸಿಕೊಂಡರೆ ಮೈ ನಡುಗುತ್ತದೆ."

೨. "ನನಗೂ ನನ್ನ ಶಾಲಾಧ್ಯಾಪಕರಿಗೂ ಇದ್ದ ಸಂಬಂಧವನ್ನು ನೆನೆಸಿಕೊಂಡರೆ ನನಗೆ ಈಗಲೂ ಹೃದಯ ಕಂಪನವಾಗುತ್ತದೆ. ಅಲ್ಲಿ ಅವರು ನನ್ನನ್ನು ಹೊಡೆಯುತ್ತಿರಲಿಲ್ಲ. ಏನಾದರೂ ತಪ್ಪಿದೆನೆಂದರೆ, ಸರಿ; ಕುರ್ಚಿ ಕೂರಿಸಿ, ನನ್ನ ಮೇಲೆ ಮತ್ತೊಬ್ಬನನ್ನು ಕೂರಿಸುತ್ತಿದ್ದರು. ಈ ಚಿತ್ರಹಿಂಸೆಯನ್ನು ನಾನು ವಾರಕ್ಕೆರಡು ಮೂರು ಸಾರಿಯಾದರೂ ಅನುಭವಿಸುತ್ತಿದ್ದೆ."

೩. "ನಾನು ಸ್ಕೂಲಿಗೆ ಬಹಳ ಮುಂಚೆ ಹೋಗುತ್ತಿದ್ದೆ. ೬ ಗಂಟೆಗೆ ಎದ್ದು ಕಾಫಿ ಮುಗಿಸಿಕೊಂಡು ೬-೩೦ ಗಂಟೆಗೆ ಸ್ಕೂಲು ಬಾಗಿಲನ್ನು ಕಾಯುತ್ತಿದ್ದೆ. ನನ್ನ ಸ್ನೇಹಿತರು ಎಷ್ಟೋ ಜನ ನನ್ನನ್ನು 'ಸ್ಕೂಲುಜವಾನ' ಎಂದು ಕೂಗಿ ನನ್ನಿಂದ ಬೈಸಿಕೊಳ್ಳುತ್ತಿದ್ದುದು ಜ್ಞಾಪಕವಿದೆ. ಆದರೆ ನಮ್ಮ ಮೇಷ್ಟ್ರು ಮಾತ್ರ ನನ್ನನ್ನು 'ಮಾನೀಟರ್' ಮಾಡಿದರು. ಮೇಷ್ಟರಿಗೆ ನಾನು ಅಚ್ಚುಮೆಚ್ಚು. ಅವರು ನನಗೆ ಸೀಮೆಸುಣ್ಣ ಕೊಡುತ್ತಿದ್ದರು."

೪. "ನಾನು ಸ್ಕೂಲಿಗೆ ಹೋಗುವುದಕ್ಕೆ ತಂಟೆಮಾಡುತ್ತಿದ್ದೆ. ಆದ್ದರಿಂದ ನನ್ನ ತಂದೆಯವರು ಮನೆಯ ಆಳಿನ ಸಂಗಡ ನನ್ನನ್ನು ಕಳುಹಿಸುತ್ತಿದ್ದರು. ನಾನು ಅವನ ಮೈಯನ್ನು ಪರಚಿ ಜಿಗಟಿ ಅವನಿಗೆ ನೋವನ್ನು ಉಂಟುಮಾಡಿದರೂ ಸಹ ಬಿಡದೆ ಸ್ಕೂಲಿಗೆ ಕರೆದುಕೊಂಡು ಹೋಗಿ ಮೇಷ್ಟ್ರರಿಗೆ ಚಾಡಿ ಹೇಳಿ ಹೊಡಿಸುತ್ತಿದ್ದ."

೫. "ನಾನು ಶಾಲೆಗೆ ಹೋದರೂ ಏಟು, ಹೋಗದಿದ್ದರೂ ಏಟು. ಆದ್ದರಿಂದ ಹೋಗುತ್ತಲೇ ಇರಲಿಲ್ಲ. ಅದಕ್ಕಾಗಿ ನನ್ನನ್ನು ನನ್ನ ಅಕ್ಕನವರ ಊರಿಗೆ ಕಳುಹಿಸಿದರು. ಅಲ್ಲಿಯ ಪಾಠಶಾಲೆ ದೊಡ್ಡದಾದರೂ ದಡ್ಡರಿಂದಲೆ ತುಂಬಿತ್ತು. ಆದ್ದರಿಂದ ನನ್ನ ಭಾವನವರು ನನ್ನನ್ನು ಶಾಲೆಗೆ ಸೇರಿಸದೆ ಮನೆಯಲ್ಲಿಯೇ ವಿದ್ಯಾಭ್ಯಾಸ ಮಾಡಿಸತೊಡಗಿದರು. ವಿದ್ಯೆ ಹೆಚ್ಚಾಗಿಯೇ ಬಂತು. ಆದರೆ ಪೆಟ್ಟು ಮಾತ್ರ ತಪ್ಪಲೇ ಇಲ್ಲ."

೬. "ನನ್ನ ಮೊಟ್ಟ ಮೊದಲ ನೆನಪೆಂದರೆ ನಮ್ಮ ತಂದೆ ನನ್ನನ್ನು ಶಾಲೆಗೆ ಹಾಕಿದ್ದು. ನಮ್ಮ ಮೇಷ್ಟರು ಒಂದು ಗೆಡ್ಡೆ ಬೆತ್ತವನ್ನು ತಮ್ಮ ಅಂಗಿಯ ತೋಳಿನಲ್ಲಿಟ್ಟುಕೊಳ್ಳುತ್ತಿದ್ದರು. ಅವರ ಕೋರೆ ರುಮಾಲು, ಕುಡಿಮೀಸೆ ಮತ್ತು ಮಾರುದ್ದ ಕಚ್ಚೆಯನ್ನು ನೋಡಿದ ತತ್‌ಕ್ಷಣವೆ ಹುಡುಗರು ನಡುಗಲಾರಂಭಿಸುತ್ತಿದ್ದರು. ಅವರ ಬೆತ್ತದ ಪರಿಚಯ ನನಗಿದ್ದಷ್ಟು ಬಹುಶಃ ನನ್ನ ಸ್ನೇಹಿತರಿಗೆ ಯಾರಿಗೂ ಇದ್ದಿರಲಾರದು."

೭. "ನನಗೆ ಮೊದಲು ಪಾಠಶಾಲೆಗೆ ಹೋಗುವುದೆಂದರೆ ಬಹಳ ಸಂತೋಷವೂ ಕುತೂಹಲವೂ ಇತ್ತು. ಬರುಬರುತ್ತಾ ಶಾಲೆಯು ಬೇಸರವಾಗುತ್ತಾ ಬಂತು. ಇದಕ್ಕೆ ಎರಡು ಕಾರಣಗಳಿದ್ದವು. ಸ್ಕೂಲಿನಲ್ಲಿ ಉಪಾಧ್ಯಾಯರು ವಿಪರೀತ ಹೊಡೆಯುತ್ತಿದ್ದುದು, ಒಂದು. ಎರಡನೆಯದು, ಮೊದಲಿ

ನಿಂದಲೂ ಯಾವ ಅಡಚಣೆಯೂ ಇಲ್ಲದೆ ತಿರುಗಾಡಿದ ನಾನು ಈಗ ಒಂದೇ ಕಡೆಯಲ್ಲಿ ನಾಲ್ಕು ಅಥವಾ ಐದು ಗಂಟೆಗಳ ಕಾಲ ಕುಳಿತುಕೊಂಡಿರುವುದಕ್ಕೆ ಬೇಸರವಾಗುತ್ತಿತ್ತು. ಅದಕ್ಕಾಗಿ ಸ್ಕೂಲಿಗೆ ಚಕ್ಕರ್ ಹೊಡೆದು ಮನೆಯಲ್ಲಿ. ಸುಳ್ಳು ಹೇಳುತ್ತಿದ್ದೆ. ಒಂದು ದಿನ ಇದು ಪತ್ತೆಯಾಗಿ ಪ್ರತಿದಿನವೂ ಉಪಾಧ್ಯಾಯರಿಂದ ಸ್ಕೂಲಿಗೆ ಬಂದಿದ್ದನೆಂದು ಬರೆಸಿಕೊಂಡು ಬರಬೇಕೆಂದು ಮನೆಯಲ್ಲಿ ಆಜ್ಞೆಯಾಯಿತು."

೮. "ನಮ್ಮೂರ ಈಶ್ವರ ದೇವಸ್ಥಾನದಲ್ಲಿಯೇ ನಾನು ಕಲಿತ ಮಠ. ನಾನು ಸೇರಿದ ದಿವಸ, ಅಲ್ಲಿ ಮಂಗಳಾರತಿ ನೈವೇದ್ಯಗಳಾದ ಮೇಲೆ ನನ್ನನ್ನು ಕೂಡಿಸಿ, ಮುಂದೆ ಸ್ವಲ್ಪ 'ಮರಳು ಹಾಕಿ, ಅದರ ಮೇಲೆ ಏನನ್ನೋ ಬರೆದು, "ಶ್ರೀ, ಓಂ" ಎಂಬುದಾಗಿ ಉಚ್ಚಾರ ಮಾಡಿಸುತ್ತ, ಬೆರಳಿನಿಂದ ತಿದ್ದಿಸಿದರು. ಶಾಲೆಯ ಹುಡುಗರಿಗೆಲ್ಲಾ ಕಡಲೆಪುರಿ, ಕೊಬ್ಬರಿಯನ್ನು ಹಂಚಿದರು. ಆ ದಿವಸ ಮಾತ್ರ ನನ್ನ ಸಂತೋಷಕ್ಕೆ ಮೇರೆಯಿರಲಿಲ್ಲ. ಅದನ್ನು ನಾನು ಒಂದು ಹಬ್ಬವೆಂದೇ ತಿಳಿದುಕೊಂಡಿದ್ದೆ. ಆದರೆ ಮಾರನೆಯ ದಿನದಿಂದ ಬೆತ್ತದ ಕಹಿ ಗೊತ್ತಾಗಲು ಮೊದಲಾಯಿತು."

೯. "ನಾನು ಬಹಳ ತುಂಟನಾಗಿದ್ದೆ. ಮನೆಯಲ್ಲಿ ನನ್ನ ತುಂಟಾಟವನ್ನು ನನ್ನ ತಂದೆ ತಾಯಿಗಳು ಸಹಿಸಲಾರದೆ ಸ್ಕೂಲಿಗೆ ಕಳುಹಿಸಿದರು. ನಮ್ಮ ಪಕ್ಕದ ಮನೆಯ ಕಿಟ್ಟಿಯೂ ಬರುತ್ತಿದ್ದ. ಅವನು ಒಂದು ದಿನ ಸ್ಲೇಟನ್ನು ತೊಳೆಯದೆ ಗೀಚಿಕೊಂಡು ಬಂದಿದ್ದ. ನಾನು ಅವನಿಗೆ ಸಹಾಯ ಮಾಡಬೇಕೆಂದು ಸ್ಲೇಟನ್ನು ತೊಳೆದು, ಅದನ್ನು ಕೊಡವುತ್ತಿದ್ದಾಗ ಸ್ಲೇಟು ಕೈ ಜಾರಿ ಬಿದ್ದು ಒಡೆದುಹೋಯಿತು. ನಮ್ಮ ಮೇಷ್ಟ್ರು ಬಹಳ ಕೋಪಿಷ್ಠರು. ನನ್ನ ಹೊಸ ಸ್ಲೇಟನ್ನು ಕಿತ್ತುಕೊಂಡು ಕಿಟ್ಟುವಿಗೆ ಕೊಟ್ಟದ್ದಲ್ಲದೆ, ನನಗೆ ಬಾಸುಂಡೆ ಮೂಡುವ ಹಾಗೆ ಚೆನ್ನಾಗಿ ಹೊಡೆದರು. ಆಗ ನನಗೆ, ಸ್ಲೇಟು ಹೋದದ್ದು ಪ್ರಪಂಚವೇ ಮುಳುಗಿಹೋದ ಹಾಗೆ ಕಂಡಿತು. ಅಂತೂ, ಅಂದಿನಿಂದ ನನಗೆ ಯಾವ ಉಪಾಧ್ಯಾಯರನ್ನು ಕಂಡರೂ ನುಂಗಿಬಿಡಲೇ ಎನ್ನುವಷ್ಟು ಕೋಪ ಬರುತ್ತದೆ."

೧೦. "ಆಗ ಪ್ರೈಮರಿ ಮೂರನೆಯ ತರಗತಿಯಲ್ಲಿ ಓದುತ್ತಿದ್ದೆ. ಪಾಠಶಾಲೆಗೆ ನಾವೇನಾದರೂ ಸ್ವಲ್ಪ ಹೊತ್ತಾಗಿ ಬಂದರೆ ನಮ್ಮ ಉಪಾ

ಧ್ಯಾಯರು ತೊಡೆ ಹಿಂಡಿ ಒಂದೊಂದು ಕೈಗೂ ಆರಾರು ಏಟು ಹೊಡೆಯು ತ್ತಿದ್ದರು."

೧೧. "ಐದು ವರುಷ. ಆ ವಯಸ್ಸಿನಲ್ಲಿ ಉಪಾಧ್ಯಾಯರನ್ನು ಕಂಡರೆ ಹುಲಿಯನ್ನು ನೋಡಿದಷ್ಟು ಹೆದರಿಕೆಯಾಗುತ್ತಿತ್ತು. ಅವರೂ ಹುಲಿಯ ಹಾಗೆಯೆ ಇದ್ದರು. ಅವರು ಒಂದು ಸಲ ದೊಣ್ಣೆಯನ್ನು ಹಿಡಿದುಕೊಂಡು ಕೂಗಿದರೆ ಸ್ಕೂಲೇ ಬಿದ್ದುಹೋಗುವುದೋ ಎನ್ನುವ ರೀತಿಯಲ್ಲಿ ಕೂಗುತ್ತಿದ್ದರು. ಪಾಠಶಾಲೆಗೆ ರಾಜರಾಗಿಬಿಟ್ಟದ್ದರು. ಅವರು ನಮ್ಮಿಂದ ನೆಲವನ್ನು ಅಗೆಸಿ ಗಿಡಗೆಡ್ಡೆಗಳನ್ನು ಬೆಳೆಯಿಸುತ್ತಿದ್ದರು. ಆದರೆ ಅದರ ಫಲವನ್ನು ಮಾತ್ರ ನಮ್ಮ ಕಣ್ಣಿಗೂ ತೋರಿಸುತ್ತಿರಲಿಲ್ಲ."

೧೨. "ಉಪಾಧ್ಯಾಯರು 'ನರಜನುಮವತ್ಯಧಿಕವದರೊಳು' ಎಂಬ ಪದ್ಯ ಹೇಳಿಕೊಡುತ್ತಿದ್ದಾಗ ನಾನು ಎಲ್ಲೋ ನೋಡುತ್ತಿದ್ದೆ. ಮೇಷ್ಟ್ರು ಬೆತ್ತವನ್ನು ತೆಗೆದುಕೊಂಡು ನನ್ನ ಅಂಗೈಮೇಲೆ ಬಲವಾಗಿ ಎರಡು ಎಳೆದರು. ನಾನು ಗಟ್ಟಿಯಾಗಿ ಕಿರಿಚಿಕೊಂಡೆ. ಅದರೆ ಮೇಷ್ಟ್ರು ಅಷ್ಟಕ್ಕೇ ತೃಪ್ತಿ ಹೊಂದಲಿಲ್ಲ. ಮೈ ಮೇಲೆ ಸಿಕ್ಕಿದ ಕಡೆ ಬೆತ್ತದಿಂದ ಬಾರಿಸಿದರು. ನನಗೆ ಅತ್ತೂ ಅತ್ತೂ ಕಡೆಗೆ ಅಳುವೇ ಬಾರದ ಹಾಗೆ ಆಯಿತು. ಮಧ್ಯಾಹ್ನ ಶಾಲೆಯನ್ನು ಮುಚ್ಚುವಾಗ ನನ್ನನ್ನು ಒಳಗಡೆ ಕೂಡಿಟ್ಟು ಹೋದರು. 'ಲಾಕ್‌ಅಪ್'ನಲ್ಲಿರುವವರಿಗೆ ಊಟ ಒದಗಿಸುವಂತೆ ನಮ್ಮ ಮನೆಯವರು ನನಗೆ ಅನ್ನ ತಂದುಕೊಟ್ಟರು. ಶಾಲೆಯ ಬಾಗಿಲು ಪುನಃ ತೆಗೆದ ಬಳಿಕ ಉಪಾಧ್ಯಾಯರು 'ಇನ್ನು ಮೇಲೆ ಸರಿಯಾಗಿ ಪಾಠ ನೋಡುತ್ತೀಯೊ?' ಎಂದು ಕೇಳಿದರು. ನಾನು 'ಊ, ಸ!' ಎಂದೆ."

೧೩. "ನಮ್ಮ ಉಪಾಧ್ಯಾಯರಿಗೆ ಹತ್ತು ರೂಪಾಯಿ ಸಂಬಳ ಬರುತ್ತಿತ್ತು. ನಮ್ಮ ತಂದೆ ನನಗೆ ದಿನಾ ಮೂರು ಕಾಸು ಕೊಡುತ್ತಿದ್ದರು. ಒಂದು ದಿನ ಉಪಾಧ್ಯಾಯರು ಜೇಬಿನಲ್ಲಿದ್ದ ಕಾಸನ್ನು ನೋಡಿದರು. ಅಂದಿನಿಂದ ನಾನು ಪಾಠ ತಪ್ಪಿದರೂ ಹೊಡೆಯುತ್ತಿರಲಿಲ್ಲ. ಅಂದಿನಿಂದ ನನ್ನ ತಿಂಡಿ ನಿಂತುಹೋಯಿತು. ಉಪಾಧ್ಯಾಯರು ನನ್ನ ಕೈಯಿಂದಲೇ ನನ್ನ ಕಾಸಿನಿಂದಲೇ ಹತ್ತಿರದ ಹೋಟಲಿನಿಂದ ದೋಸೆ ತರಿಸಿ, ತಾವು ಸ್ವಲ್ಪ ತಿಂದು ಮಿಕ್ಕುದನ್ನು ನನಗೆ ಕೊಡುತ್ತಿದ್ದರು. ನನ್ನ ಹಾಗೆಯೆ ಇನ್ನೂ ನಾಲ್ಕು

ಜನ ನನ್ನ ಸ್ನೇಹಿತರು ನಮ್ಮ ಉಪಾಧ್ಯಾಯರ ಉಪಚಾರವನ್ನು ಮಾಡುತ್ತಿದ್ದರು."

೧೪. "ಮನೆಯವರು ನಾನು ಶಾಲೆಗೆ ಹೋಗಲೆಬೇಕೆಂದು ಹೇಳಲು, ನನ್ನ ಭಾಗಕ್ಕೆ ಯಾರೂ ಇಲ್ಲವೆಂದು ಅಳುತ್ತ ನನ್ನ ತಂದೆಯವರ ಜತೆಯಲ್ಲಿ ಹೊರಟೆ. ಶಾಲೆಯ ಒಳಗಡೆ ಒಬ್ಬನು ಬೆತ್ತವನ್ನು ಹಿಡಿದು ಕುಳಿತಿದ್ದ. ಕೂಡಲೆ ನನಗೆ ನನ್ನ ಅಜ್ಜಿ ನರಕದ ವಿಚಾರವಾಗಿ ಹೇಳುತ್ತಿದ್ದ ಕತೆಗಳು ನೆನಪಿಗೆ ಬಂದು, ಅವನು ಶಿಕ್ಷೆಯನ್ನು ಕೊಡುವ ಯಮರಾಯನಂತೆಯೂ ಶಾಲೆಯು ನರಕದಂತೆಯೂ ಕಂಡಿತು. ತತ್‌ಕ್ಷಣವೇ ಕಾಲಿಗೆ ಬುದ್ಧಿಹೇಳಿ ಕಣ್ಣುಮುಚ್ಚಿ ಬಿಡುವುದರೊಳಗೆ ಅಮ್ಮನ ಬಳಿಯಲ್ಲಿದ್ದೆ. ಆದರೂ ನಮ್ಮ ತಂದೆ ಮನೆಗೆ ಬಂದು ದಾರಿಯುದ್ದಕ್ಕೂ ದರದರನೆ ಎಳೆದುಕೊಂಡು ಹೋದರು."

ಇದು ಆ ೨೩೮ರಲ್ಲಿ ಅರ್ಧಕ್ಕಿಂತ ಹೆಚ್ಚಿನ ಲೇಖನಗಳಲ್ಲಿ ಮೇಲಿಂದ ಮೇಲೆ ತಲೆದೋರುವ ಪಲ್ಲವಿ: ಮನೆ—ಶಾಲೆ—ಏಟು, ಮನೆ—ಶಾಲೆ—ಏಟು, ಮನೆ—ಶಾಲೆ—ಏಟು.

ಈ "ಶಾಲೆಯ ನೆನಪು"ಗಳು ಹೊರತಾಗಿ ಉಳಿದ ನೆನಪುಗಳಾದರೊ ನಾನಾ ಮುಖವಾಗಿವೆ, ನಮ್ಮನ್ನು ನಮ್ಮ ಕಿರಿಯಂದಿನ ದಿನಗಳಿಗೆ ಕೊಂಡೊಯ್ಯುತ್ತವೆ.

ಜೊತೆಗಾರನ ಜರತಾರಿ ಟೋಪಿಯನ್ನು ಬೀದಿಯುದ್ದಕ್ಕೂ ಚೆಂಡಿನಂತೆ ಒದೆದುಕೊಂಡು ಅವನನ್ನು ಅಳಿಸಿಕೊಂಡು ಬಂದದ್ದು; ಸಕ್ಕರೆಬಾದಾಮಿ ಯೆಂದು ಹೇಳಿ ಏರೊಪ್ಲೇನ್ ಕಾಯಿಯ ಬಿತ್ತವನ್ನು ತಿನ್ನಿಸಿ ಬಾಯಿ ಕಹಿ ಮಾಡಿದ್ದು; ಕೈಗೆ ಕಳ್ಳಿಹಾಲು ಹಚ್ಚಿಕೊಂಡು ಎಟುತಿಂದು, ಮನೆಗೆ ಕೈ ತೋರಿಸಿದ್ದು; ಉಪಾಧ್ಯಾಯರ ಕುರ್ಚಿಗೆ ಗುಂಡುಸೂಜಿ ಚುಚ್ಚಿದ್ದು, ಅವರು ತೂಕಡಿಸುವಾಗ ಅವರ ತಲೆಗೆ ಬಫೂನ್ ಟೋಪಿಯನ್ನು ಹಾಕಿದ್ದು; ಮುನಿಸಿ ಪಾಲಿಟಿ ನಲ್ಲಿಯಲ್ಲಿ ಬಟ್ಟೆಬರೆ ನೆನೆಸಿಕೊಂಡು ಮನೆಗೆ ಬಂದಾಗ, ಅಣ್ಣ ಅಪ್ಪಂದಿರು ಏಟು ಬಿಗಿದಾಗ, ತಾಯಿ ಬಂದು ನೆನೆದ ಬಟ್ಟೆ ತೆಗೆದು ಒಣಗಿದ ಬಟ್ಟೆ ಹಾಕಿ ಬಿಸಿಹಾಲು ಕುಡಿಸಿದ್ದು; ಬೆಕ್ಕು, ನಾಯಿ, ಹುಲಿವೇಷಗಳನ್ನು ಕಂಡು ಬೆದರಿದ್ದು; ಗೊಗ್ಗಯ್ಯ, ಹುಣಿಸೆಯ ಮರದ ಪಿಶಾಚಿಗಳನ್ನು ಕೇಳಿ ಹೆದರಿದ್ದು; 'ಮೈಗೆ ಪಟ್ಟೆಪಟ್ಟೆಯ ನೀಳವಾದ ಅಂಗಿ, ತಲೆಗೆ ಕರಡಿಯ

ಕೂದಲಿನಿಂದ ಮಾಡಿದ ಒಂದು ವಿಕಾರವಾದ ಉಡುಪು, ಮುಖಕ್ಕೆ ವಿಚಿತ್ರವಾಗಿ ಬಳಿದುಕೊಂಡಿರುವ ವಿಭೂತಿ ಮತ್ತು ನಾಮ'—ಈ ವೇಷದ 'ಗೊರವಯ್ಯ'ನನ್ನು ಕಂಡದ್ದು; ಎಕ್ಕಡ ಹಾಕಿಕೊಳ್ಳಬೇಕೆಂದು ಹಠಹಿಡಿದು ಕಾಲು ಕಚ್ಚಿಸಿಕೊಂಡದ್ದು, ಸೋಪು ಹಾಕಿಕೊಳ್ಳಬೇಕೆಂದು ಆಸೆಪಟ್ಟು ಕಣ್ಣು ಉರಿಸಿಕೊಂಡದ್ದು: ಮಣ್ಣೆ ವಿಗ್ರಹಗಳನ್ನಿಟ್ಟು ದೇವರ ಪೂಜೆಯಾಟವಾಡಿದ್ದು; ಲಾಲಿ ಗುಲಾಲ್ ಮಿಠಾಯಿ ತಿಂದದ್ದು; ತಂದೆ ತಾಯಿಯರ ಜೊತೆಯಲ್ಲಿ ಜಾತ್ರೆಗೆ ಹೋಗಿ, ತಪ್ಪಿಸಿಕೊಂಡದ್ದು; ಕಂಡವರ ತೋಟದಲ್ಲಿ ಹಣ್ಣು ಕಿತ್ತದ್ದು; ದಾರಕ್ಕೆ ಕಲ್ಲು ಕಟ್ಟಿ ತಿರುಗಿಸಿ ದಾರಿಗನ ಕಣ್ಣೊಂಗಿಸಿದ್ದು; ಹೊಟ್ಟೆಗೆ ಯಾರೋ ಮದ್ದು ಹಾಕಿ ಬಡವಾದದ್ದು; ದೀಪಾವಳಿ ದಿವಸ ಪಟಾಕಿ ಹಾರಿಸುವ ಸಂಭ್ರಮದಲ್ಲಿ ಮನೆಗೆ ಬೆಂಕಿಯಿಟ್ಟದ್ದು; ಸಂಕ್ರಾಂತಿ ಹಬ್ಬದ ದಿನ ಕಿಚ್ಚು ಹಾಯಿಸುವುದು ನೋಡಲು ಹೋದಾಗ ಹಸು ಹಾದಿದ್ದು; ಮರಕೋತಿ, ಲಗ್ಗೆಚೆಂಡು, ದಚ್ಚಿಭಾರ, ಕೊಕ್ಕಾಟ, ಗಣೇಶನ ಆಟ, ಟೋಪಿ ಆಟ—ಇವುಗಳನ್ನು ಆಡಿದ್ದು; ಮಡಿಕೋಲು ಕದ್ದು, ಚಿಣ್ಣಿದಾಂಡು ಮಾಡಿಕೊಂಡು, ಏಟು ತಿಂದದ್ದು; ಮಳೆಗಾಲದ ದಿನ ದೋಣಿ ಮಾಡಿ ಬಚ್ಚಲಲ್ಲಿ ಬಿಟ್ಟದ್ದು; ಮನೆಗಳಲ್ಲಿ ಬಗೆಬಗೆಯ ತಿಂಡಿ ಕದ್ದಿದ್ದು; ಸ್ಕೂಲಿನಲ್ಲಿ 'ಒಂದಕ್ಕೆ, ಸಾರ್' ಎಂದು ಕೇಳಿಕೊಂಡು ಓಡುತ್ತಿದ್ದದ್ದು; ತಂದೆ ಕ್ಷೌರಮಾಡಿಕೊಳ್ಳುತ್ತಿದ್ದುದನ್ನು ಕಂಡು, ತಾನು ಅದೇ ಕತ್ತಿಯಿಂದ ಕೆನ್ನೆ ಕತ್ತರಿಸಿಕೊಂಡದ್ದು; ಬಾವಿಯಲ್ಲಿ ಕಾಲುಜಾರಿ ಬಿದ್ದದ್ದು; ಸೋರುವ ಜಾಪ್‌ಪೆನ್ನಿನಿಂದ ಅಂಗಿ ಕೆಡಿಸಿಕೊಂಡು ಒದೆತಿಂದದ್ದು; ಬಾಬಯ್ಯನ ಹಬ್ಬ ನೋಡಿದ್ದು; ಕಾಮನ ಹಬ್ಬದ ದಿನ 'ಕಾಮಣ್ಣ ಕಟ್ಟಿಗೆ' ಕೂಗಿದ್ದು; ಗೌರಿಗಣೇಶನ ದಿನ ಹೂ ತರಲು ಹೋಗಿ, ತೋಟಗಾರನಿಂದ ಬಡಿತ ತಿಂದು, 'ಅವನ ಹೊಡೆತದಿಂದ ದುಃಖವಾಗಲಿಲ್ಲ. ಆದರೆ ಹಬ್ಬದ ದಿವಸ ಹೊಡೆದನಲ್ಲಾ' ಎಂದು ವ್ಯಸನಪಟ್ಟದ್ದು; ಪಟ ಆಡಿಸಲು ದಾರವಿಲ್ಲದೆ, ಕುದುರೆಯ ಜವಿ ಕೀಳಲು ಹೋಗಿ ಒದಿಸಿಕೊಂಡದ್ದು; ಕೋತಿಗೆ ಕೈಕೊಟ್ಟು ಪರಚಿಸಿಕೊಂಡದ್ದು; ವಿರಾಮಕಾಲದಲ್ಲಿ ಗೋಲಿ ಆಡಿ, ಸೋತು, ಕೈ ಮಡಿಸಿ ಗೋಲಿಯನ್ನು ಬದ್ದಿನ ಹತ್ತಿರಕ್ಕೆ ನೂಕಿ, ಕೈಯಲ್ಲಿ ರಕ್ತ ಬಂದದ್ದು; ಲೆಕ್ಕ ತಪ್ಪು ಮಾಡಿದ್ದಕ್ಕೆ ಮನೆಯ ಜಗುಲಿಯ ಮೂಲೆಯಲ್ಲಿ ಗೋಡೆಗೆ ಮುಖ ಮಾಡಿ ನಿಲ್ಲಿಸಿದ್ದು; ತಂದೆಯವರಿಂದ ೩ ಕಾಸು ತೆಗೆದುಕೊಂಡು '೧ ಕಾಸಿಗೆ

ಮೋಟಾರ್, ೧ ಕಾಸಿಗೆ ಪೆಪ್ಪರ್‌ಮೆಂಟ್ ತೆಗೆದುಕೊಳ್ಳುತ್ತೇನೆ' ಎನ್ನು ತ್ತಿದ್ದದ್ದು; ಮೂಗಿನ ಮೇಲೆ ಬೆರಳಾಡಿಸುತ್ತ, ಮೂಗು ಕೊಯ್ಯುತ್ತೇನೆಂದು ಹಿರಿಯರು ಹೆದರಿಸುತ್ತಿದ್ದದ್ದು; 'ಚಿಕ್ಕವರು ದೊಡ್ಡವರಾಗಬಹುದು. ದೊಡ್ಡವ ರೇಕೆ ಚಿಕ್ಕವರಾಗುವುದಿಲ್ಲ?' ಎಂದು ಕುತೂಹಲಪಟ್ಟು, ಉತ್ತರಕ್ಕೆ ಮನೆ ಯವರನ್ನು ಪೀಡಿಸಿ ಮೊಟ್ಟೆಸಿಕೊಂಡದ್ದು; ತನ್ನನ್ನು ಎತ್ತಿ ಎತ್ತಿ ಜುಗುಪ್ಸೆ ಗೊಂಡ ಆಳು ಮೆಲ್ಲಗೆ ತನ್ನನ್ನು ಜಿಗುಟಿ ಅಳಿಸುತ್ತಿದ್ದುದು; ಸಿನಿಮಾದಲ್ಲಿ ಟಿಕೆಟ್ ತೆಗೆದುಕೊಳ್ಳಲು ಹೋಗಿ, ಆದಿಶೇಷನ ಮೇಲೆ ಮಲಗಿದ ವಿಷ್ಣುವಿ ನಂತೆಯೋ ಗರುಡನ ಮೇಲೆ ಕುಳಿತ ನಾರಾಯಣನಂತೆಯೋ ಕೆಳಗಿನವರ ತಲೆಗಳ ಮೇಲೆ ಮಲಗಿ ಅಥವಾ ಹೆಗಲಿನ ಮೇಲೆ ಕುಳಿತು ಟಿಕೀಟು ತೆಗೆದು ಕೊಂಡವರ ಪಾದಧೂಳಿಯನ್ನು ಮಾತ್ರವಲ್ಲದೆ ಪಾದರಕ್ಷೆಯ ಧೂಳಿಯನ್ನೂ ತಲೆಯಲ್ಲಿ ಧರಿಸಿದ್ದು; ಇತ್ಯಾದಿ, ಇತ್ಯಾದಿ.

ಇವೇ ಮುಂತಾದುವನ್ನು ವಿದ್ಯಾರ್ಥಿಗಳು ತಮ್ಮ "ಮೊತ್ತಮೊದಲ ನೆನಪು" ಎಂಬುದಾಗಿ ಚಿತ್ರಿಸಿದ್ದಾರೆ. ಇವುಗಳಲ್ಲಿ ಇದ್ದುದು ಇದ್ದಂತೆ, ಸಂಪೂರ್ಣವಾಗಿ, ಯಾವ ಬದಲಾವಣೆಯೂ ಇಲ್ಲದೆ ಪ್ರಕಟಿಸಲು ತಕ್ಕುವಾದ ೨೦ ಚಿತ್ರಗಳನ್ನು ಕೊಟ್ಟಿದೆ.

೪

ನಮ್ಮವರು ಪ್ರಚಂಡರು. ತಮಗಿಂತ ಹಿರಿಯರಾದವರ ಸಾಮೀಪ್ಯದ ಸಂಕೋಚವೊಂದು ಇಲ್ಲದಿದ್ದರೆ, ಅವರ ಬಾಯಿ ತುಂಬ ಹಿಡಿಸದಷ್ಟು ಮಾತು. ತಾವು ಕಂಡದ್ದನ್ನು, ತಾವು ಕೇಳಿದ್ದನ್ನು, ತಮಗೆ ತಿಳಿದದ್ದನ್ನು, ತಮಗೆ ತೋಚಿದ್ದನ್ನು ಕಣ್ಣಿಗೆ ಕಟ್ಟುವಂತೆ ಕಿವಿ ನಿಮಿರುವಂತೆ ಅವರು ವರ್ಣಿಸ ಬಲ್ಲರು. ಇದ್ದುದಕ್ಕೆ ಊಹಿಸಿ ಉಪ್ಪು ಕಾರ ಹಚ್ಚಿ ಉತ್ಪ್ರೇಕ್ಷೆ ಮಾಡಬಲ್ಲರು. ಇಲ್ಲದ್ದನ್ನು ಕೂಡ ಇದ್ದುದಕ್ಕಿಂತ ಹೆಚ್ಚಾಗಿ ಹೌದೆನ್ನಿಸಬಲ್ಲರು.

ಆದರೆ ಆ ಮಾತುಗಳ ಒಂದೇ ಒಂದು ತಿಲಾಂಶವನ್ನು ಕಾಗದದ ಮೇಲೆ ಬರೆಯಬೇಕೆಂದರೆ ಸಾಕು—ಥಟಾರನೆ ಅವರ ಕೈಕಾಲು ತಣ್ಣಗಾಗಿಬಿಡುತ್ತದೆ. ಆದರೆ, ತಾವು ಏನು ಮಾತನಾಡುತ್ತಿದ್ದರೋ ಅದನ್ನು, ಹೇಗೆ ಮಾತನಾಡು ತ್ತಿದ್ದರೋ ಹಾಗೆ, ಕಾಗದದ ಮೇಲೆ ಮೂಡಿಸಿದರೆ ಅದು ಓದುಗರಿಗೆ ಎಂತಹ

ರಸಗವಳವಾಗುವುದೆಂಬುದನ್ನು ಅವರು ಅರಿಯರು. ಈ ಮಾತಿಗೆ ಈ ಮುಂದಿನ ಲೇಖನಗಳೆ ಸಾಕ್ಷಿ. ನಮ್ಮವರಿಗೆ ವಿನಯ ಬೇಕು, ನಿಜ; ಆದರೆ ದೈನ್ಯ ಬೇಡ. ನಮ್ಮವರು ಧೃಷ್ಟತನವನ್ನು ದೂರ ತಳ್ಳುವುದು ಒಳ್ಳೆಯದು; ಅದರ ಬದಲು ಧೈರ್ಯ ಸಂಪಾದಿಸಬೇಕು.

ಆದರೆ ಕೆಲವರು, ಬರೆಯಬೇಕೆಂದು ಧೈರ್ಯಮಾಡಿ ತೊಡಗುವವರು, ಅದೇಕೊ ಕಾಣೆ, ಮೊತ್ತಮೊದಲು ಪದ್ಯವನ್ನೆ ಬರೆಯಲು ಪ್ರಯತ್ನಪಡುವರು! ಕೆಲವರು ಅಪರೂಪವಾಗಿ ಗದ್ಯವನ್ನೂ ಬರೆಯುವರು. ಆದರೆ, ಪದ್ಯ ಬರೆಯಲಿ, ಗದ್ಯ ಬರೆಯಲಿ, ಪುನಃ ಅದೇಕೊ ಕಾಣೆ, ತಮ್ಮ ಅನುಭವಗಳನ್ನೆಲ್ಲ ಒತ್ತರಿಸಿ, ತಮಗೆ ಪರಿಚಯವೆ ಇಲ್ಲದ ವಸ್ತು ವಿಷಯಗಳನ್ನೆತ್ತಿಕೊಂಡು ಬರೆಯುವರು. ಆ ಬರೆವಣಿಗೆ ಅಸಹಜವಾಗುವುದು ಸ್ವಾಭಾವಿಕ. ಒಳ್ಳೆಯ ಕೃತಿಗಳಿಗೂ ನಾಲ್ಕು ಒಳ್ಳೆಯ ಮಾತು ದೊರಕದ ನಾಡಿನಲ್ಲಿ ಒಳ್ಳೆಯವಾಗದ ಕೃತಿಗಳಿಗೆ ತಲೆಗೊಂದು ಮಾತು ಬರುವುದು ಏನೂ ಆಶ್ಚರ್ಯವಲ್ಲ. ಅದರ ಫಲವಾಗಿ ಅನೇಕ ವೇಳೆ "ಬೆಳೆಯುವ ಪೈರು ಭಾದ್ರಪದದೊಳೆ ಸುಟ್ಟು ಹೋಗುವುದು" ಸಹಜ. ಆದರೆ ಅದು ಅನ್ಯಾಯ.

೫

ನಾನು ಕನ್ನಡ ಕಲಿಸಲು ಕಾಲೇಜಿಗೆ ಬಂದು ಮೂರು ನಾಲ್ಕು ತಿಂಗಳಾಗಿತ್ತು. ಒಂದು ದಿನ, ಯೂನಿವರ್ಸಿಟಿ ಯೂನಿಯನ್ನಿನ ಕಾರ್ಯದರ್ಶಿಗಳು, ನನ್ನ ಮಿತ್ರರು, "'ಯೂನಿಯನ್' ಪತ್ರಿಕೆಗೆ ಬಂದಿರುವ ಕನ್ನಡ ಲೇಖನಗಳನ್ನು ಕಳುಹಿಸುತ್ತೇನೆ. ಕೊಂಚ ಅಚ್ಚಿಗೆ ಸಿದ್ಧಪಡಿಸಿಕೊಡಿ" ಎಂದರು. ನಾನು ಒಪ್ಪಿದೆನೋ ಇಲ್ಲವೊ, ಕಳುಹಿಸಿಯೆ ಬಿಟ್ಟರು.

ಬಂದ ಲೇಖನಗಳನ್ನು ಕುತೂಹಲದಿಂದ ವಿಂಗಡಿಸಿದೆ.

ಬಂದ ಲೇಖನಗಳ ಸಂಖ್ಯೆ—೬೮: ವಿದ್ಯಾರ್ಥಿಗಳು ಕಳುಹಿಸಿದ್ದು—೬೮, ವಿದ್ಯಾರ್ಥಿನಿಯರು—ಏನೂ ಇಲ್ಲ.

ಬಂದ ಲೇಖನಗಳ ಸಂಖ್ಯೆ—೬೮; ಇಂಟರ್ ಕಾಲೇಜಿನವು—೩೬, ಕಾಲೇಜಿನವು—೨೭, ಹೆಸರು ಕುಲ ಗೋತ್ರ ಪತ್ತೆಯಾಗದವು—೫.

ಬಂದ ಲೇಖನಗಳ ಸಂಖ್ಯೆ—೬೮: ಪದ್ಯ—೩೭, ಗದ್ಯ—೩೧.

ಈ ಕುತೂಹಲ ಶಾಂತವಾದ ಮೇಲೆ ಅವುಗಳನ್ನು ಒಂದೊಂದಾಗಿ ಓದಿದೆ. ಕೊಂಚ ತಿದ್ದಿ ಅಚ್ಚು ಮಾಡಿಸಬಹುದಾದ ಒಂದು ಪದ್ಯ ಸಿಕ್ಕಿತು. ಮಿಕ್ಕವು ಯಾವುದಾದರೂ ಅಚ್ಚಾಗಬೇಕಾದರೆ, ಅವುಗಳನ್ನು ಸಂಪೂರ್ಣವಾಗಿ 're-cast' ಮಾಡಬೇಕೆನ್ನಿಸಿತು. ಆಗ—

"ಎಲ್ಲ ಕಗ್ಗವ ತುಂಬಿ ಕಾಗದದಿ ಕೆರೆದಿಟ್ಟು
ಮೆಲ್ಲನದ 'ಯೂನ್ಯರ್ಸ'ಗೆ ಕೊಡುವಾತ—ಸಿಂಹಕ್ಕೆ
ಹುಲ್ಲು ಕೊಟ್ಟಂತೆ ಸರ್ವಜ್ಞ"

"ನೆಟ್ಟಗಾಗದ ಪದ್ಯ, ಸೊಟ್ಟ ಶೈಲಿಯ ಗದ್ಯ,
ಹಿಟ್ಟನಾಸೆಯ ಗ್ರಂಥ, ಒಟ್ಟಗೇ—ಬರಿಕಸದ
ಬುಟ್ಟಿಗೇ ಬಿಸುಡು ಸರ್ವಜ್ಞ"

ಎಂದು ೧೯೩೪ನೆಯ ಮಾರ್ಚಿ ೧೮ರ "ಯೂನಿರ್ಯ"ಇನ ೫ನೆಯ ಪುಟದಲ್ಲಿ ಅಚ್ಚಾಗಿದ್ದುದು ನೆನಪಾಯಿತು.

ಇತ್ತ, ಆರಿಸಿದ ಲೇಖನಗಳು ಬೇಗ ಬೇಕೆಂದು ಕಾರ್ಯದರ್ಶಿಗಳ ತಗಾದೆ ಜೋರಾಯಿತು. ಆದರೆ ಆರಿಸಲು ಆ ಲೇಖನಗಳಲ್ಲಿ ಕೊಂಚವೂ ಕಾವಿರಲಿಲ್ಲ. ಆ ಲೇಖನಗಳನ್ನು ಕಾಯಿಸುವುದರಿಂದೇನೂ ಆಗುವಂತೆ ಕಾಣಲಿಲ್ಲ. ಆದರೂ ಪುನಃ ಒಂದು ರಾತ್ರೆಯೆಲ್ಲಾ ದೀಪ ಹಚ್ಚಿಕೊಂಡು ಅವುಗಳನ್ನು ಓದಿದೆ. ಪುನಃ ದೊರಕಿದುದದೊಂದೇ ಪದ್ಯ. ಆ ರಾತ್ರಿಯ ಮನಸ್ಸಿನ ಪರಿಸ್ಥಿತಿಯಿಂದಲೂ ಆದ 'exposure'ನಿಂದಲೂ ಮಾರನೆಯ ದಿವಸ ಕೊಂಚ ಚಳಿ ನೆಗಡಿಯಾಗಿ ಗಂಟಲು ಕಟ್ಟಿಕೊಂಡಿತು.

"'ಯೂನಿರ್ಯ'ಗೆ ಯಾವುದೂ ಕನ್ನಡ ಲೇಖನವಿಲ್ಲ" ಎಂದು ಹೇಳಿಬಿಡಬೇಕೆಂದು ಮಾರನೆಯ ದಿನ ಕಾಲೇಜಿಗೆ ಬಂದಾಗ, ಕಾರ್ಯದರ್ಶಿಗಳು ಸಿಕ್ಕಲಿಲ್ಲ. ಮೊದಲನೆಯ ಪೀರಿಯಡ್ ನನಗೆ ಕ್ಲಾಸಿತ್ತು. ಕ್ಲಾಸಿಗೆ ಹೋದೆ. ಪಾಠ ಹೇಳಬೇಕೆಂದು ಬಾಯಿಬಿಟ್ಟೆ. ಆದರೆ, ಕಟ್ಟಿಕೊಂಡ ಗಂಟಲು ಬಿಟ್ಟಿರಲಿಲ್ಲ. ವಿದ್ಯಾರ್ಥಿಗಳಿಗೆ ಇದ್ದ ಸ್ಥಿತಿಯನ್ನು ಹೇಳಿದೆ. ಅವರಿಗೆ ಹೇಗೂ ಆ ತಿಂಗಳಿನ ಪ್ರಬಂಧರಚನೆ ಮಾಡಿಸಬೇಕಾಗಿತ್ತು. "ಯಾವ ವಿಷಯದ ಮೇಲಾದರೂ ಸರಿಯೆ, ಒಳ್ಳೆಯ ಶುದ್ಧವಾದ ವಾಕ್ಯಗಳಿಂದ ಕೂಡಿದ ಎರಡು ಪುಟ

ದಷ್ಟು ಸಮಂಜಸವಾದ ಬರೆವಣಿಗೆಯನ್ನು ಕೊಡಿರಿ" ಎಂದು ಕೋರಿದೆ. ಕೆಲವರು ಮೊದಲು ಗೊಣಗುಟ್ಟಿದರು ಕೂಡ, ಕಡೆಗೆ ಎಲ್ಲರೂ ಏನಾದರೂ ಬರೆದುಕೊಟ್ಟರು. ಅವರು ಬರೆದುಬರೆದು ಕೊಟ್ಟಂತೆಯೆ ಒಂದೆರಡನ್ನು ಅಲ್ಲಿಯೆ ನೋಡಿದೆ. ಬರೆವಣಿಗೆ ಬಹು ನವೀನವಾಗಿತ್ತು. ಆಕರ್ಷಕವಾಗಿತ್ತು, ಸಹಜ ವಾಗಿತ್ತು.

ತರಗತಿಯಲ್ಲಿ ಬಂದುದೆಲ್ಲವನ್ನೂ ಓದಿಕೊಂಡೆ. ಬರೆದವರೆದುರಿಗೇ ಅದನ್ನು ಓದಿದೆ. ಅದರ ಪರಿಣಾಮ ಹಿತವಾದುದರಿಂದ ಅದೇ ಕ್ರಮವನ್ನು ಇತರ ತರಗತಿಗಳಲ್ಲೂ ಆಚರಿಸಬೇಕೆಂದು ಕುತೂಹಲ ಬಂತು. ಆ ಆಚರಣೆಯ ಫಲವಾಗಿ ಬಂದ ಎಲ್ಲಾ ಪ್ರಬಂಧಗಳನ್ನೂ ತರಗತಿಗಳಲ್ಲಿ ಓದಿ ಹೇಳುತ್ತ, ಒಳ್ಳೆಯ ಬರೆವಣಿಗೆ ಯಾವುದು, ಕೆಟ್ಟುದು ಯಾವುದು ಎಂಬುದನ್ನು ಸೋದಾ ಹರಣವಾಗಿ ವಿವರಿಸುವಾಗ ವಿದ್ಯಾರ್ಥಿಗಳಲ್ಲಿ ಕಂಡುಬಂದ ಆಸಕ್ತಿಯನ್ನು ಗಮನಿಸಿ, ಈ ಒಂದು ಹೊಸ ತರಹದ ಬರೆವಣಿಗೆ 'ಯೂನಿಯನ್'ಗೆ ತಕ್ಕ ಆಹಾರವಾಗುವುದೆಂದು ಕಾರ್ಯದರ್ಶಿಗಳಿಗೆ ತಿಳಿಸಿದೆ. ಉಪಯೋಗಿಸಲು ಅವರ ಸಮ್ಮತಿ ದೊರೆಯಿತು.

ಆ ಬರೆಹಗಳನ್ನು ಅಚ್ಚಿಗೆ ಕಳುಹಿಸುವ ಮುಂಚೆ ನನ್ನ ಮಿತ್ರರನೇಕ ರಿಗೆ ಓದಿದೆ. 'Ancient Mariner'ನ ಹಾಗೆ ಅವರನ್ನು ಸಿಕ್ಕಿದ ಕಡೆ ತಡೆದು, ಹಿಡಿದು ನಿಲ್ಲಿಸಿ, ಓದಿ, ಅವರ ಸಂತೋಷವನ್ನು ಕಂಡೆ. ಮೈಸೂರು ಮಹಾರಾಜರ ಹೈಸ್ಕೂಲು ವಿದ್ಯಾರ್ಥಿಗಳು ಅವನ್ನು ಒಂದು ಗಂಟೆಯಕಾಲ ಮೈಯೆಲ್ಲಾ ಕಿವಿಯಾಗಿ ಕೇಳಿದರು. ಮೈಸೂರು ಕಾಲೇಜು ಕರ್ಣಾಟಕ ಸಂಘದ ಆಶ್ರಯದಲ್ಲಿ ಆ ಗೊಂಚಲನ್ನು "ನಮ್ಮ ನಮ್ಮವರು" ಎಂಬ ಹೆಸರಿ ನಿಂದ ಓದಿದ ಮೇಲೆ "ನಮ್ಮ ನಮ್ಮವರು part 2 ಯಾವಾಗ ಓದ್ತೀರಿ, ಸಾರ್?" ಎಂದು ಅನೇಕರು ಕೇಳಿದರು. ಆ ವರ್ಷ ಬಳ್ಳಾರಿಯಲ್ಲಿ ನಡೆದ ಪರಿಷತ್ತಿನಿಂದ ಬೆಂಗಳೂರಿಗೆ ಹಿಂದಿರುಗುವಾಗ, ನನ್ನ ವಿದ್ಯಾಗುರುಗಳೊಬ್ಬರ ರೈಲು ಪ್ರಯಾಣದ ಆಯಾಸವನ್ನೂ ಬೇಸರವನ್ನೂ ಅವು ಬಹುಮಟ್ಟಿಗೆ ಕಡಿಮೆಮಾಡಿದವು. ನನಗೆ ಪೂಜ್ಯರಾದ ಹಿರಿಯರೊಬ್ಬರು ಒಂದು ರಾತ್ರೆ ತಮ್ಮ ದೇಹಾಯಾಸವನ್ನೂ ಲೆಕ್ಕಿಸದೆ ಹನ್ನೊಂದೂವರೆ ಗಂಟೆಯವರೆಗೆ ಸಾವ ಧಾನದಿಂದ ಆ ಎಲ್ಲ ಲೇಖನಗಳನ್ನೂ ಕೇಳಿ ತಮ್ಮ ಮೆಚ್ಚುಗೆಯನ್ನು ಸೂಚಿಸಿ

ದರು. ಆ ಬರೆಹಗಳಿಗೆ ಸಾಕಷ್ಟು "ಸತ್ವಪರೀಕ್ಷೆ"ಯಾಯ್ತೆಂದು ಅವುಗಳನ್ನು ಅಚ್ಚಿಗೆ ಕಳುಹಿಸಿದೆ. ಅವೇ ಮೊದಲಿನ ಕುಚ್ಚು.

ಈ ಲೇಖನಗಳನ್ನು "ಸಂಪಾದಿಸು"ವಾಗ ನಾನು ಒಂದು ಸ್ವಾತಂತ್ರ್ಯ ವಹಿಸಿದ್ದೇನೆ; ಲೇಖನಗಳ ಧೋರಣೆಯನ್ನು ತಿದ್ದದೆ, ಅವುಗಳ ವೈಶಿಷ್ಟ್ಯವನ್ನು ಹಾಗೆಯೆ ಉಳಿಸಿ, ಅಚ್ಚಿಗೆ ಕಳುಹಿಸಿದ್ದೇನೆ. ಇವುಗಳ ಭಾಷೆ ಹದಿನಾರಾಣೆ "ಗ್ರಂಥಸ್ಥ" ವೆನ್ನಿಸಿಕೊಳ್ಳುವಂತಹದಲ್ಲವಾದರೂ, "ವ್ಯಾವಹಾರಿಕ"ವೆನ್ನಿಸಿಕೊಳ್ಳುವದಾದರೂ, "ಸಕಲ ಲಕ್ಷಣಕಾಗಿ ಬಿರುಸುಮಾಡಿದರೆ ಪುಸ್ತಕದ ಬದನೆಕಾಯಹುದು" ಎಂದು, ಹರಟೆಗಳಿಗೆ ಸಹಜವಾಗಿರಬೇಕಾದ ಆ ಗುಣವನ್ನು ಗೌರವಿಸಿ ಹಾಗೆಯೆ ಉಳಿಸಿದ್ದೇನೆ.

೬

ಈ ಪ್ರಕಟನೆಯಿಂದ, ಕಿರಿಯರಲ್ಲಿ ಅನೇಕರಿಗೆ ಬರೆಯಬೇಕೆಂದರೆ ಬರುವ ಛಳಿ ಬಿಟ್ಟು ಹೋಗುವುದೆಂದು ನಂಬಿದ್ದೇನೆ. "ನನಗೆ ಬರೆಯುವ ಶಕ್ತಿ ಎಲ್ಲಿ ಬಂತು! ಅದಕ್ಕೇ ಕೇಳಿಕೊಂಡು ಬಂದ ವರಕವಿಗಳಿದ್ದಾರೆ" ಎಂದು ನಾಚುವ ಅತಿನ್ಯೈಚ್ಯಭಾವದ ತಮ್ಮ!

" . . . ಯಾವ ವೇಳೆಗೆ ಯಾರ
ಬಾ ನನ್ನ ಕಂದ ಬಾ ಬೆಳೆ ಎಂದು ಹರಸುತ
ತನ್ನ ವಾಣಿಗೆ ವೀಣೆ ಮಾಡುವಳೊ ಸರಸತಿ,
ಹೇಳಲಾಗದು. ಹಾಡಲಾಸೆಯಿರೆ ಮನಸಾರ
ಹಾಡು. ನೀನಾಗಬಹುದವಳ ವೀಣೆಯ ತಂತಿ" (ವಃಲಾರ, ೯)

ಏನೇನು? ಕನ್ನಡದಲ್ಲಿ ಚೆನ್ನಾಗಿ ಬರೆಯಲು ಬಾರದೆಂದು ಬಾಯಿಬಿಡುವೆಯ! ಇನ್ನಾವ ಭಾಷೆಯಲ್ಲಿ ನಿನ್ನ ಭಾವಗಳನ್ನು ನಿನ್ನವರಿಗೆ ತಿಳಿಸುವೆ? ಏನು!

"ಕನ್ನಡದಿ ನುಡಿಯೆ ಬಾರದು, ಆಂಗ್ಲಭಾಷೆಯಲಿ
ನುಡಿಯುವೆನು ಬರೆಯುವೆನು, ಎಂಬೆನ್ನ ಒಡಹುಟ್ಟಿ,
ಈ ನಾಡು ಬಡತನವ ಸಹಿಸಿ ಹೊಟ್ಟೆಯ ಕಟ್ಟಿ
ನಿನಗೆ ವಿದ್ಯೆಯನು ಕಲಿಸಿದುದಾವ ಆಸೆಯಲಿ?

ಕಳೆಯೇರಲೆಂದಕ್ಕಸಾಲಿಗನ ಮೂಸೆಯಲಿ
ಕಾಯಲಿರಿಸಿದ ಮಿಸುನಿ ಹತ್ತು ಬಣ್ಣವ ಪಡೆದು
ಏನೇನ ಮಾಡಿದರು ಮೂಸೆಯಡಿಯನು ಬಿಡದೆ
ಕಚ್ಚಿಕೊಂಡರೆ, ಗೆಯ್ದುದೆಲ್ಲ ಬರಿ ಘಾಸಿಯಲೆ?
ಬಾ ಬಂಧು, ಯಾವುದನು ಹೇಳಬೇಕೋ ಅದನು
ಬಂದಂತೆ ಹೇಳು, ಕೇಳಲು ನಾಡು ಕಾದಿರುವುದು.
ಆಂಗ್ಲಭಾಷೆಯೊಳಾಡಿ ಆಂಗ್ಲರನು ತಣಿಸುವರೆ
ಆಂಗ್ಲಸೇವಕರಿಹರು. ಆರಯಿಸು, ನಾವಿಹುದು
ಈ ನಾಡು ಈ ನುಡಿಯ ಸಲುವಾಗಿ. ನಮ್ಮದನು
ಹಳ್ಳದಲಿ ಬಿಟ್ಟು ಹೆರರೊಪ್ಪಿಗೆಗೆ ದಣಿಯುವರೆ?" (ಮಾಲಾರ. ೪೮)

ನಿನ್ನ ಬರೆಹವನ್ನು ಇತರರು ನೋಡಿ ನಗುವರು, ಬಯ್ಯುವರು, ಎಂದು ಅಂಜಿಕೆಯೆ ನಿನಗೆ? ಚಿಂತಿಸಬೇಡ, ತಮ್ಮ.

"... ಬಯ್ಯುವರು ಕಾರಣಗಳನು ನೋಡಿ
ಬಯ್ಯುವರೆ? ಬಯ್ಯಬೇಕೆಂದೊಳಗು ತುಯ್ಯುವುದು;
ಅದರಿಂದ ಬಯ್ಯುವರು. ಇದು ನಾಲಿಗೆಯ ಚಪಲ.
ಕವಿತೆಯನು ನುಡಿವುದಕೆ ನೀನಾಸೆಪಡುವಂತೆ
ಬಯ್ವುದರೊಳವರಿಗಾಸೆ. ಮಾವ ನೆಡುವಂತೆ
ಬೇವನೂ ನೆಡಬೇಕು; ಇದರ ಎಲೆ ಅದರ ಫಲ
ನಾಡಿನೊಳಗಿರಬೇಕು. ನಿನ್ನ ಬಯ್ದಾ ಮನುಜ
ತಾ ಬಲ್ಲವನು ಎಂದುಕೊಂಬನಲೆ. ಕವಿ ನೀನು,
ಇವನೇಕೆ ಬಯ್ಯುವನು, ಎನ್ನ ಕವಿತೆಯೊಳೇನು
ಇವನ ನೋಯಿಸುತಿಹುದು, ಹಾ ನೊಂದನೇ ಅನುಜ,
ಎಂದು ಕನಿಕರ ತೋರು, ಹಿರಿದಾಗಿ ನೀ ಬೆಳೆವೆ,
ಅವನಿಗಾ ಪುಣ್ಯವಿರೆ ಆ ಮನವನೂ ತೊಳೆವೆ." (ಮಾಲಾರ. ೪೬)

ನೋಡು, ಬರೆಯಬೇಕೆನ್ನಿಸಿದರೆ, ಒಂದು ಕೈ ನೋಡು. ನಿನಗೇ ಸಾಕಾದರೆ, ಬೇಡವಾದರೆ, ಬಿಟ್ಟುಬಿಡು; ಯಾರಿಗೂ ಏನೂ ನಷ್ಟವಿಲ್ಲ. ಆದರೆ ತೊಡಗದೆಯೆ ಇರಬೇಡ. ನೋಡಿ, ಆಗದಿದ್ದರೆ ಬಿಡು.

ಅಲ್ಲದೆ ಕಿರಿಯರಲ್ಲಿ ಹುದುಗಿಕೊಂಡಿರುವ ಸಹಜಸಾಮರ್ಥ್ಯದಲ್ಲಿ ವಯಸ್ಸಾದವರು ಯಾರಿಗಾದರೂ ತಾತ್ಸಾರವಿದ್ದರೆ, ಅದು ಈ ಪ್ರಕಟನೆಯ ದರ್ಶನದಿಂದ ಕೊಂಚ ಮಟ್ಟಿಗಾದರೂ ತೊಲಗುವುದೆಂದು ನಂಬಿದ್ದೇನೆ. ಈ ಎಲ್ಲಾ ಲೇಖನಗಳಲ್ಲಿಯೂ

"ಸತ್ವವಿಹುದೋ ಇಲ್ಲಿ, ಇಲ್ಲ ಇದು ಬರಿಜಾಳೊ,
ಹೇಳುವನು ನಾನಲ್ಲ. ನೋಡಿರಿದ ತಾಳ್ಮೆಯಲಿ.
ಆ ಮೇಲೆ ನಿಮ್ಮೊಳಿಹುದೇನತ್ತ ಸರಿಯಿರೆನಿ." (ಮುಲಾರ. ೭೬)

ಇವುಗಳಲ್ಲಿ ಎಲ್ಲವೂ ಸರ್ವಗುಣಪೂರ್ಣವಾಗಿವೆಯೆಂದು ಯಾರೂ ವಾದಿಸುತ್ತಿಲ್ಲ. ಇವುಗಳು—ಮೂರು ಹೊರತಾಗಿ—ತರಗತಿಗಳಲ್ಲಿ, ಕೇವಲ ೩೫-೪೦ ನಿಮಿಷಗಳಲ್ಲಿ, ಯಾವ ಪೂರ್ವ ಸಿದ್ಧತೆಗಳೇನೂ ಇಲ್ಲದೆ, ಅನಿರೀಕ್ಷಿತವಾಗಿ, ಪುನರಾವರ್ತನಕ್ಕೂ ಅವಕಾಶವಿಲ್ಲದೆ ಮೊತ್ತಮೊದಲನೆಯ ಸಲ ಬರೆದು ಕೊಟ್ಟವುಗಳೆಂಬುದನ್ನು ವಾಚಕರು ಮರೆಯಬಾರದು. "ಬಹಳ ದಿನ ಬಾಳುವ ಭಾರದ ಬರಹವಲ್ಲ ಇದು. ಇಂದಿದ್ದು ನಾಳೆ ಸಾಯುವಂತಹದು. ನಮ್ಮ ಕಣ್ಣ ಮುಂದಿನ ಈ ಹಸುಗೂಸುಗಳು ಇನ್ನೇನು ಮಾಡಿಯಾವು?" ಎಂದು ಮೂಗು ಮುರಿಯುವವರೆ,

" . . . . . . . . ತುಸ ನಿಲ್ಲಿ.
ಮಗುವಿಗಿನ್ನೂ ಮೂರು ದಿನವಿಲ್ಲ. ಜೋಯಿಸರು
ರಚಿಸಬಹುದಿದಕರಿತು ಇಂದೊಂದು ಜಾತಕ.
ಅದನು ಅಲ್ಪಾಯುವೆಂದರಿತರೂ ಕಾಗದಕೆ
ಅವರು ಅರಿಸಿನ ಹಚ್ಚುವರು; ನಾಳೆ ಈ ಬದುಕು
ಮುಗಿದು ಹೋಗುವುದು, ಕಾದಿದೆ ನಿಮಗೆ ಸೂತಕ,
ಎಂದು ಕೂಗುತ ಹೆತ್ತ ಜೀವವನು ನೋಯಿಸರು." (ಮುಲಾರ. ೪೨.)

ಸಾಯುವುದು ಸಾಯುವುದು, ಉಳಿಯುವುದು ಉಳಿಯುವುದು. ಸಾವ ಶಕುನವನ್ನು ನುಡಿಯಲು ಇಷ್ಟೇಕೆ ಆತುರ? ಸಮಾಧಾನವಿರಲಿ. ಕಿರಿಯರನ್ನು ಸೈರಿಸಿರಿ.

ಈ ಪ್ರಕಟನೆಯಿಂದ, ಇದು ಮಾತ್ರವಲ್ಲ; "ಹೊಸಗನ್ನಡ ಕವಿತೆಗಳಿಗೆ ಛಂದಸ್ಸಿಲ್ಲ, ಪ್ರಾಸವಿಲ್ಲ, ಅಲಂಕಾರವಿಲ್ಲ, ವ್ಯಾಕರಣವಿಲ್ಲ, ಕಟ್ಟಿಲ್ಲ, ನಿಟ್ಟಿಲ್ಲ,

ಕಂಡಾಪಟ್ಟೆ ಬರೆಯಬಹುದು" ಎಂಬ ಭ್ರಮೆಯಿಂದ ಅಬದ್ಧವಾದ ಪಂಕ್ತಿಗಳನ್ನು ತಿಣಿಕುವ ವಿಪರೀತಹುಚ್ಚು ಪ್ರಾರಂಭಗಾರ ಉತ್ಸಾಹಿಗಳಲ್ಲಿ ಕಡಮೆಯಾಗಿ, **ಗದ್ಯರಚನೆಯಲ್ಲೂ ಗೌರವವುಂಟು** ಎಂಬುದು ಮನದಟ್ಟೀತೆಂದು ಆಶಿಸುತ್ತೇನೆ. ಛಂದೋಬದ್ಧವಾಗಿದ್ದರೂ ಭಾವವಿಲ್ಲದ ಕವಿತೆಗೂ ಇದೇ ಮಾತು ಅನ್ವಯಿಸುತ್ತದೆ.

"ಪ್ರಾಸ ಗಣ ಯತಿಗಳನು ಎದೆಗೆಡದೆ ಪೇರಿಸಲು
ಬಣ್ಣಬಣ್ಣದ ಮಾತ ಸರಿಯಾಗಿ ಸೇರಿಸಲು
ಕವಿತೆಯಾಗುವುದೆಂದು ಸಿಜದಿ ನೆನೆದಿರ ಏನು ?
ಕಾಗದದ ಹೂವಿನಲಿ ದೊರೆಯಬಹುದೇ ಜೇನು ?
ಆಕಾರವಿರೆ ಉಸಿರು ಬೇಡೆಂದು ನಂಬಿದಿರೊ ?
ಬಲ್ಲವರೆ, ಕಬ್ಬಾಗಬಹುದೆಂತು ಚೆಂಬಿದಿರು ?
ನರಿಗೆ ಬಣ್ಣವ ಹಚ್ಚಿ ಹುಲಿಯೆಂಬ ನುಣ್ಚದುರು
ಎಷ್ಟು ದಿನ ಸೊಗಸುವುದು ? ಸಾಕು ಬಿಡಿ ಅಣ್ಣದಿರು.
ಒಳಗು ಹೊರಗಿನ ಬಾಳಿನಾಳವನು ನೆರೆ ನೋಡಿ,
ನೋವು ನಗೆಯೊಳಗೀಸಿ, ಚೆಲುವು ವಕ್ರತೆ ಮೀರಿ,
ಅಂತರದ ಬೆಂತರನ ಮೊಗಗಂಡು ಧೃತಿಗೆಟ್ಟು,
ಮರೆಯ ದೈವವ ತಿಳಿದು ಪದತಳದಿ ಕೆಡೆದಾಡಿ,
ಅನುಭವವ ನುಡಿಯಿರಿ, ಪ್ರಾಸ ಗಣ ಯತಿ ಸೇರಿ
ಕಾವ್ಯವಾಗುವುದು ನುಡಿ. ಇದು ಕವನದೊಳಗುಟ್ಟು." (ಮಲಾರ. ೭)

ಇದು ತಿಳಿಯದೆ, ಹುಸಿಗವಿತೆಗಳನ್ನು ಹೊಸೆದು, ಯಾರೂ ಮೆಚ್ಚುವುದಿಲ್ಲವೆಂದು ಮನಸ್ಸು ಚಿಕ್ಕದು ಮಾಡಿಕೊಳ್ಳುವುದಕ್ಕಿಂತ ಇಲ್ಲಿ ಕೊಟ್ಟಿರುವ ರೀತಿಯ ಲಘು ಸಾಹಿತ್ಯವನ್ನಾದರೂ ರಚಿಸಿದರೆ ಅವರಿಗೂ ಮೇಲು, ಓದುಗರಿಗೂ ಲೇಸು. ಕವನದ ಜೀವಸ್ಥಾನವನ್ನು ಅನುಸಂಧಾನಮಾಡದವನು ಉತ್ಕೃಷ್ಟ ಕವಿತೆಯನ್ನು ಬರೆಯಲಾರ. ಹೀಗೆ ಬರೆಯುವವರು ಬಹಳ ವಿರಳ. ಉಳಿದವರು ಹತ್ತರ ಜೊತೆಗೆ ಹನ್ನೊಂದು. ಆದರೆ ಗದ್ಯವನ್ನು ಬರೆಯಲು ಅಭ್ಯಾಸಮಾಡುವ ಪ್ರತಿಯೊಬ್ಬನೂ, ಒಂದಲ್ಲ ಒಂದು ದಿನ, ಓದುಗರು ಮೆಚ್ಚುವಂತಹ ಬರೆವಣಿಗೆಯನ್ನು ಸೃಷ್ಟಿಮಾಡಬಲ್ಲನು. ಇದಕ್ಕೆ ಕೆಲವರಿಗೆ ತಿಂಗಳುಗಳು ಬೇಕಾಗ

ಬಹುದು, ಕೆಲವರಿಗೆ ವರುಷಗಳು ಹಿಡಿಯಬಹುದು. ಆದರೆ ಅಭ್ಯಾಸದಿಂದ ಗದ್ಯದಲ್ಲಿ ಜಯ ಸಂಪಾದಿಸುವುದು ಸರ್ವರಿಗೂ ಸಾಧ್ಯ. ಪದ್ಯಕ್ಕೇನೂ ಗದ್ಯಕ್ಕಿಂತ ಹೆಚ್ಚಿನ ಕಿರೀಟವಿಲ್ಲ. ಎರಡೂ ಮನಸ್ಸಿನ ಭಾವಗಳನ್ನು ವರ್ಣಗಳಿಂದ ಹೊರಗೆಡಹುವ ಎರಡು ಮಾರ್ಗಗಳು. ಯಾರಿಗೆ ಯಾವ ಮಾರ್ಗ ಸಹಜವೋ, ಸುಗಮವೋ, ಅದನ್ನೇ ಅವರು ಕಂಡುಕೊಂಡು ಶರಣು ಹೋಗುವುದು ಶ್ರೇಯಸ್ಕರ.

೭

ಇಲ್ಲಿಗೆ "ನಮ್ಮ ನಮ್ಮವರು" ಮುಗಿಯಿತು. ಇದನ್ನು

"ಇಂದು ನಿನಗರ್ಪಿಸಿರುವೆನು ನನ್ನ ತಾಯ್ನುಡಿಯೆ.
ಗುಣದಿಂದ ಬೆಲೆಯಿಂದ ಈ ಕೃತಿಗೆ ನೂರ್ಮಡಿಯ
ಹಿರಿಮೆ ಕಾಣುವ ಕೃತಿಯ ರಚಿಸಿ ಹಾಡುತ ಬಂದು
ನಿನ್ನ ಮಕ್ಕಳು ನಿನ್ನ ನಲಿಸಿ ನಲಿದರು ಅಂದು,
ಇಂದು ನಲಿಸುತ ನಲಿಯುತಿಹರು, ಬಹಕಾಲದಲಿ
ಭಾವ ಊಹೆ ರಸ ರಾಗಗಳ ಮೇಳದಲಿ
ರಚಿಸಿ ತರುವರು ಮತ್ತೆ ನಿನ್ನ ಸೇವಿಸಲೆಂದು.
. . . . . . . . . . . . ಭಕ್ತಿಯಲಿ ತಂದಿಹನು,
ಎಂದು ಕರುಣೆಯ ತೋರಿ ಇದನು ಒಪ್ಪುವೆ ನೀನು" (ಮಲಾರ. ೧.)

ಈ ನಮ್ಮನಮ್ಮವರ ಮತ್ತು ಅವರಂತಹವರ ಶಕ್ತಿಸಾಮರ್ಥ್ಯಗಳು ನಿನ್ನ ಕೃಪೆಯಿಂದ—ಇಲ್ಲಿಯ ಲೇಖಕರೊಬ್ಬರ ಮಾತಿನಿಂದಲೇ ಹೇಳುವುದಾದರೆ—"ಬೆಳೆದು ಬೆಳುದಿಂಗಳಿನಂತೆ ಬೆಳಗಲಿ, ಹೂಗಂಧದಂತೆ ಹಬ್ಬಿ ಹರಿಯಲಿ." ಹಿರಿಯರೂ ಅವರಿಗೆ ನೆರವಾಗಿ ಅವರನ್ನು ಬೆಳೆಯಿಸಲಿ, ಬೆಳಗಿಸಲಿ, ಹಬ್ಬಿಸಿ ಹರಿಯಿಸಲಿ.

೧೯೩೯. ಜಿ. ಪಿ. ರಾಜರತ್ನಂ.

# ಮೊದಲಿನ ಗೊಂಚಲು

## ೧. ಇಂದಿನ ಕನ್ನಡ ತರಗತಿ.

ಇಂದಿನ ದಿನ ೧೨-೩೦ ಗಂಟೆಗೆ ಕಾಲೇಜಿನ ಗಂಟೆ ಹೊಡೆದ ಮೇಲೆ ನಾವೆಲ್ಲರೂ ತರಗತಿಗೆ ಬಂದು ಕುಳಿತುಕೊಂಡೆವು. ಕೊಂಚ ಹೊತ್ತಾದ ಮೇಲೆ ನಮ್ಮ ಉಪಾಧ್ಯಾಯರೂ ಬಂದರು. ತರಗತಿಯಲ್ಲಿ ನಿಶ್ಶಬ್ದವಿತ್ತು. ಆಗ ಅವರು "ನಿಮ್ಮ ರಿಜಿಸ್ಟರ್ ನಂಬರುಗಳನ್ನು ಹೇಳಿ. ಎಷ್ಟು ನಂಬರು ಬಂದಿದೆ, ನೋಡೋಣ" ಎಂದರು. ಸರಿ. ಪರೀಕ್ಷೆಗೆ ಕುಳಿತಿದ್ದ ಮಹಾಶಯರೆಲ್ಲರೂ ತಮ್ಮ ತಮ್ಮ ನಂಬರುಗಳನ್ನು ಹೇಳಿದರು. ಅನಂತರ ಅವರೇ ಎಲ್ಲರಿಗೂ ಅವರವರಿಗೆ ಬಂದಿರುವ ನಂಬರುಗಳನ್ನು ಓದಿದಮೇಲೆ, ಪಾಠವನ್ನು ಹೇಳುತ್ತಾರೆಂದು ಕುತೂಹಲದಿಂದ ಪುಸ್ತಕಗಳನ್ನು ತೆಗೆದುಕೊಂಡೆವು.

ಆಗ ಅವರು "ಈಗ ನೀವು ಒಂದು ಅಥವಾ ಎರಡು ಪುಟಗಳಲ್ಲಿ ಒಂದು ಸಣ್ಣ ಪ್ರಬಂಧವನ್ನು ಬರೆದುಕೊಡಬೇಕು" ಎಂದರು. ಇದನ್ನು ಕೇಳಿದೊಡನೆ ನನಗೆ ಬಹಳ ಸಂಕಟವಾಯಿತು. "ಅಯ್ಯೋ, ಅನ್ಯಾಯವಾಗಿ ಈ ಪ್ರಬಂಧ ಬರೆಯುವುದಕ್ಕೆ ಪೆಂಟ್ಯಾಂಗ್ಯುಲರ್ ಪಂದ್ಯದ ಕಾಮೆಂಟ್ರಿಯನ್ನು ಕೇಳದೆ ಬಂದೆನಲ್ಲಾ!" ಎನ್ನಿಸಿತು. ಆದರೇನು ಮಾಡುವುದು? ಬೋನಿನಲ್ಲಿ ಸಿಕ್ಕಿಕೊಂಡ ಇಲಿಯಂತೆ ಆದೆ. ಕೊಡುವ ಹಿಂಸೆಯನ್ನೆಲ್ಲಾ ಅನುಭವಿಸಬೇಕಾಯಿತು.

ಸರಿ. ಏನು ಬರೆಯುವುದು? ಉಪಾಧ್ಯಾಯರು ಕೆಲವು ಬೇರೆ ತರಗತಿಯ ಪ್ರಬಂಧಗಳನ್ನು ಓದಿದರು. ಎಲ್ಲರೂ ನಕ್ಕರು. ಬರೆಯುವುದಕ್ಕೆ ತೊಡಗಬೇಕಾಯಿತು. ಉಪಾಧ್ಯಾಯರು "ಕೃತಿಚೌರ್ಯ ಬೇಡ" ಎಂದರು. ಸರಿ. ನಮ್ಮ ಸ್ವಂತವೇ ಆಗಬೇಕಾಯಿತು. ಆ ಪ್ರಬಂಧಕ್ಕೆ ನಾವೇ Title ಕೊಡಬೇಕಂತೆ. ಅಲ್ಲದೆ ಕಡೆಯಲ್ಲಿ ನಡೆದದ್ದೊ, ಕೇಳಿದ್ದೊ, ಕಂಡದ್ದೊ, ಕದ್ದಿದ್ದೊ—ಎಂದು ಬೇರೆ ಬರೆಯಬೇಕಂತೆ. ಅಂತೂ ತಪ್ಪಾದರೂ ಆಗಲಿ, ಸರಿಯಾದರೂ ಆಗಲಿ ಎಂದು "ಇಂದಿನ ಕನ್ನಡ ತರಗತಿ" ಎಂದು Title ಕೊಟ್ಟೆ.

ಬರೆಯುವಾಗ ಮಧ್ಯೆ attendance ಗಲಾಟೆ ಬೇರೆ. ಅದರಲ್ಲಿ ತಮ ತಮಾಷೆಯಾಗಿರೋ ಹೆಸರುಗಳು ಬೇರೆ. ನಾವು ತರಗತಿಗೆ ಬಂದರೆ ತಾನೆ ಈ ತರಹ ಗಲಾಟೆ ಎಂದುಕೊಂಡು ಬೇಗ ಪೂರೈಸೋಣ ಎಂದು ಹೊರಟೆ. ಶುರು ಮಾಡಿದರೆ ತಾನೆ ಕೊನೆ ಕಾಣುವುದು! 'Ideas ಏನು ಬರೆಯುವುದು?' ಎಂದು ಯೋಚಿಸುತ್ತಿದ್ದರೆ, ಹೊರಗಡೆ ನಗನಗತಾ ಓಡಾಡೋ ಮಿತ್ರರು ಬೇರೆ. ಮನಸ್ಸು ಬೇರೆ ಒಂದು ಕಡೆ ನಿಲ್ಲುತ್ತಾ ಇಲ್ಲ.

ಅಂತೂ ಹೇಗೋ ಕಷ್ಟಪಟ್ಟು ಒಂದು ಪುಟ ಬರೆದು ಕೊಟ್ಟುಬಿಟ್ಟು ಹೋಗೋಣವೆಂದು ಎರಡು ಪುಟ ಬರೆದದ್ದೂ ಆಯ್ತು, ಉಪಾಧ್ಯಾಯರಿಗೆ ಕೊಟ್ಟದ್ದೂ ಆಯ್ತು. ಇನ್ನು ಅವರು ಏನು ಬೇಕಾದರೂ ಮಾಡಲಿ. ಮಾಡಿದ್ದುಣ್ಣೋ ಮಹಾರಾಯ ಅನ್ನೋ ಹಾಗೆ ಅವರು ಹೊಗಳಿದರೂ ಸರಿ, ತೆಗಳಿದರೂ ಸರಿ, ಎಲ್ಲಾ ಅವರಿಗೇ ಬಿಟ್ಟದ್ದು.

ಅಂತೂ, Radio ಕೇಳೋ opportunity ಕಳೆದುಹೋಯ್ತು.

—ಜಿ. ಎಸ್. ಸುಬ್ಬರಾಮಯ್ಯ.

## ೨. ಬರೀ ತಲೆ

ನಮ್ಮ ತರಗತಿಯಲ್ಲಿರುವವರೆಲ್ಲ ಋಷಿಗಳೆಂದೇ ಇರಬೇಕು, ನಮ್ಮ ಉಪಾಧ್ಯಾಯರ ಭಾವನೆ. ಇಲ್ಲದಿದ್ದರೆ, ನಮ್ಮನ್ನು ಹೀಗೆ ನಿರ್ದಯವಾಗಿ ವಾಕ್ಯರಚನೆಯನ್ನು ಬರೆಯಲು ಕೇಳುತ್ತಿರಲಿಲ್ಲ.

ರಾಮೇಶ್ವರಕ್ಕೆ ಹೋದರೂ ಶನೀಶ್ವರನ ಕಾಟ ತಪ್ಪದ ಹಾಗೆ ನಾನು ಕೊನೆಯ ಬೆಂಚಿನ ಮೇಲೆ ಕುಳಿತಿದ್ದರೂ ಮೇಷ್ಟ್ರು ಅಲ್ಲಿಗೇ ಬಂದರು. ನನ್ನ ತಲೆಯಲ್ಲಾದರೋ ಏನೂ ಇಲ್ಲ. ಉಪಾಧ್ಯಾಯರಾದರೋ "ತಲೆ ಬೆಚ್ಚಗೆ ಮಾಡಿಕೊಳ್ಳಿ" ಎನ್ನುತ್ತಾ ಇದ್ದರು. ಏನು ತಲೆ ಬೆಚ್ಚಗೆ ಮಾಡಿಕೊಳ್ಳುವುದು? ನಮ್ಮ ತಲೆಗಳೇನು ಬಾಬಯ್ಯನ ಹಬ್ಬದಲ್ಲಿ ಉಪಯೋಗಿಸುವ ತಮಟೆಗಳೆ? ನನಗೆ ಕೋಪ ಬಂತು. ಮೇಷ್ಟ್ರನ್ನು . . . ಅಷ್ಟರಲ್ಲಿ ತಲೆಗೆ ಒಂದು ಯೋಚನೆ ಬಂತು. ಬರೆಯೋಣ ಎಂದು ಮೊದಲುಮಾಡುವುದಕ್ಕೆ ಹೋದೆ. ಆದರೆ 'ಹೆಡ್ಡಿಂಗ್' ಅಂತೆ. ಅದನ್ನು ಯೋಚಿಸುತ್ತಿದ್ದೆ. ಹಿಂದೆ

ಕುಳಿತಿದ್ದ ಸ್ನೇಹಿತ "ಸೂರಿ, ಶಾಂತ" ಎಂದ. ಪಕ್ಕದ ಮಾಧು "ಸೂರಿ, ನಾನು ಹೋದ ಸಿನಿಮ"ಎಂದ. ಸೀಸರನ ಕೊಲೆಮಾಡುವ ಮೊದಲ ರಾತ್ರಿ ಬ್ರೂಟಸ್ಸಿನ ತಲೆ ಹೇಗಾಯ್ತೋ ಹಾಗಾಯ್ತು ನನ್ನ ತಲೆ ಇಂದು. ನೀವು ನಗಬಹುದು. ಆದರೆ ಇವತ್ತಿನ ಕಷ್ಟಕ್ಕೆ ಸಿಕ್ಕಿದಂತೆ ಇನ್ನೆಂದೂ ಹಿಂದೆ ಸಿಕ್ಕಿರಲಿಲ್ಲ.

ಬೆಲ್! ಅಗೋ ಹೊತ್ತಾಯ್ತು. ಅನೇಕರು ಆಗಲೇ ಬರೆದು ಮುಗಿಸಿ ಕೊಟ್ಟುಬಿಟ್ಟರು. ನನಗೆ ಇನ್ನೇನೂ ಹೊಳೆಯದೆ "ಬರೀತಲೆ"ಯ ಮೇಲೆ ಬರೆದೆ.

—ಆರ್. ಸೂರ್ಯನಾರಾಯಣ.

## ೩. ಅರ್ಧ ನಡೆದದ್ದು + ಅರ್ಧ ಊಹಿಸಿದ್ದು

ಬುಧವಾರದ ದಿನ ಕ್ಲಾಸು ನನ್ನ ಗ್ರಹಚಾರಕ್ಕೆ ೧೦-೩೦ಕ್ಕೆ ಇತ್ತು. ಅದರಲ್ಲೂ ಕನ್ನಡ ಪೀರಿಯಡ್ಡು. ಕನ್ನಡ ಎಂದರೆ ನನಗೇನೋ ತಲೆನೋವು. ಕ್ಲಾಸಿಗೆ ಚಕ್ಕರ್ ಕೊಡಬೇಕೆಂದು ಮನಸ್ಸಿನಲ್ಲಿದ್ದರೂ ನೋಡುವವರಿಗೆ ಅದು ಕಾಣಬಾರದೆಂದು ನಿದಾನವಾಗಿ ಬಂದೆ. ಕ್ಲಾಸಿಗೆ ಲೇಟಾಗಿ ಹೋದರೆ ಮೇಷ್ಟ್ರು ಓಡಿಸುವರೆಂಬ ಭರವಸೆಯಿಂದ ನಿದಾನವಾಗಿ ಬಂದೆ. ಆದರೆ ಅವರು ನನ್ನ ಇಚ್ಛೆಯಂತೆ ನಡೆದುಕೊಳ್ಳಲಿಲ್ಲ; ಒಳಗೆ ಪ್ರವೇಶಿಸಬಹುದೆಂದು ಅಪ್ಪಣೆ ಯನ್ನಿತ್ತರು.

ಒಳಗೆ ಹುಡುಗರೆಲ್ಲ ಒಂದು ರಫ್ ನೋಟ್ ಬುಕ್ಕನ್ನು ಎದುರಿಗೆ ಇಟ್ಟು ಕುಳಿತಿದ್ದರು. ನಾನು ಕ್ಲಾಸಿಗೆ ಬರುವಾಗ ಮೇಷ್ಟ್ರು ಪಾಠ ಮಾಡುತ್ತಿದ್ದರೆ ನಾನು ಕೊನೆಯ ಬೆಂಚಿನಲ್ಲಿ ನಿದ್ರೆಯ ಸುಖವನ್ನು ಅನುಭವಿಸಬಹುದೆಂದು ಯೋಚಿಸಿದ್ದೆ. ಆದರೆ ಅವರು ಒಂದು ಪ್ರಬಂಧ ಬರೆಯುವಂತೆ ಹೇಳಿದರು. ಅದನ್ನು ಕೇಳಿದೊಡನೆಯೇ ನನ್ನ ಎದೆ ಢಗ್ ಎಂದು ಹಾರಿಹೋದಂತಾಯಿತು. ನಾನು ಬೆಳಗ್ಗೆ ಬೆಕ್ಕನ್ನು ನೋಡಿದ್ದೆನೇನೋ!

ಪ್ರಬಂಧ ಬರೆಯುತ್ತಿರುವವನ ಹಾಗೆ ನಟಿಸಿ, ಗಂಟೆಯ ಶಬ್ದವನ್ನು ಕೇಳಿದೊಡನೆಯೇ ಹೊರಟುಹೋಗೋಣವೆಂದು ಯೋಚಿಸಿ ಸುಮ್ಮನೆ ಕುಳಿತಿದ್ದೆ. ಆದರೆ ಮೇಷ್ಟ್ರು ನನ್ನ ಹತ್ತಿರವೇ ಓಡಾಡುತ್ತಾ "ಬರೆಯುವುದಕ್ಕೆ

ತಿಳಿಯದೆ ಇರುವವರು ಬರಿಯ ಕಾಗದದ ಮೇಲೆ ತಮ್ಮ ಹೆಸರನ್ನು ಬರೆದು ಕೊಡಿ" ಎಂದರು. ಇದು ಪೂರ ಅವಮಾನವೆಂದು ತಿಳಿದು ಆ ದಿನ ನನಗೆ ಸಂಭವಿಸಿದುದನ್ನೇ ಬರೆದು ಕೊಟ್ಟಿದ್ದೇನೆ.

—ಆರ್. ಪ್ರಹ್ಲಾದರಾವ್.

## ೮. ಏನು ಬರೆಯೋದು?

ನಮ್ಮ ಮೇಷ್ಟ್ರು ಕ್ಲಾಸಿಗೆ ಬಂದವರೇ "ನಿಮಗೆ ಬೇಕಾದ್ದು ಬರೀರಿ" ಎಂದರು. ಹಾಗೆ ಹೇಳಿದ್ದಕ್ಕೆ ನನಗೆ ಒಂದು ಆಲೋಚನೆ ಹೊಳೆಯಿತು: ಕಾಗದ ತೆಗೆದುಕೊಂಡು ಅದರ ತುಂಬ ಎಳೆಯ ಮಕ್ಕಳ ಹಾಗೆ ಗೀಚಬೇಕು—ಎಂದು. ಅಷ್ಟರಲ್ಲೆ ನನಗೊಂದು ದೊಡ್ಡ ಏಟು ಬಿತ್ತು—ಮೇಷ್ಟ್ರು "ನೀವು ಬರೆಯೋದು ದೊಡ್ಡ ಕ್ಲಾಸಿಗೆ ಸರಿಯಾದ ಪ್ರಬಂಧವಾಗಿರಬೇಕು" ಎಂದರು. ನನಗೆ ಬಹಳ ಕೋಪ ಬಂತು. ಏನು ಮಾಡುವುದು? ಹಾಗೆಯೇ ನುಂಗಿಕೊಂಡೆ.

ತರುವಾಯ, ಏನು ಬರೆಯುವುದೆಂದು ಮನಸ್ಸಿನಲ್ಲಿ ನಿರ್ಧರ ಮಾಡಿದೆ. ಬರೆಯಲು ಕಾಗದ ಬೇಕು. ಆದರೆ ನಾನು ಪುಸ್ತಕ ತರದೆ ಕೈಬೀಸಿಕೊಂಡು ಬಂದಿದ್ದೆ. ಬರೆಯಬೇಕು. ತಿರುಪೆಮಾಡಬೇಕಾಗಿ ಬಂತು. ತಿರುಪೆ ಕೇಳಿದರೆ, ಹುಡುಗರು, ಇದೆ ಸಮಯ ಎಂದುಕೊಂಡು "ಕಾಪಿ ಕೊಡಿಸು" ಎಂದರು. ಕಡೆಗೆ, ಕೊಸರಿ, ಕಾಗದ ಹೊಂಚಿದೆ. ಬರೆಯೋಣ ಎಂದು ಜೇಬಿಗೆ ಕೈ ಹಾಕಿ ಪೆನ್ ತೆಗೆದು, ಮುಚ್ಚಳ ಬಿಚ್ಚಿದೆ. ಹಿಂದಕ್ಕೆ ಸಿಕ್ಕಿಸಿದೆ. ಬರೆದೆ. ಆದರೆ, ಆ ಪೆನ್‌ನಲ್ಲಿ ಇದ್ದದ್ದು ಕಣ್ಣಿಗೆ ಕಾಣದ ಶಾಯಿ. ನನಗೇನೋ ಕಾಣಿಸಿತು. ಆದರೆ ಮೇಷ್ಟ್ರು ಕಣ್ಣಿಗೆ ಕಾಣಬೇಕಲ್ಲ! ಆದ್ದರಿಂದ, ಪೆನ್ನಿನಲ್ಲಿ ಬರೆಯುವ ಯೋಚನೆ ಬಿಟ್ಟು, ಪೆನ್ಸಿಲ್ ಹುಡುಕಿದೆ. ನನ್ನ ಅದೃಷ್ಟ. ಸೀಸ ಮುರಿದುಹೋಗಿರಬೇಕೆ! ಜೇಬಿನಲ್ಲಿ ಚಾಕು ಇರಲಿಲ್ಲ. ಮತ್ತೆ ತಿರುಪೆ.

ಚಾಕೂನೂ ಸಿಗಲಿಲ್ಲ. ಹಳೇ ಬ್ಲೇಡು ಒಂದು ಸಿಕ್ಕಿತು. ಅದೂ ಡಬ್ಬಲ್ ಎಡ್ಜ್ಡ್. ಒರೆಯುವಾಗ ಗಾಯವಾಯಿತು. ಮೇಷ್ಟರನ್ನು ಬೈದೆ. ಆದರೆ ಬರೆಯದೆ ಇದ್ದರೆ ಅವಮಾನ, ಪೆನ್ಸಿಲ್ ಒರೆದೆ. ಅಷ್ಟು ಹೊತ್ತಿಗೆ ಮೇಷ್ಟ್ರು "ಹೊತ್ತಾಯಿತು" ಎಂದರು. ಏನು ಮಾಡಬೇಕು, ಏನು ಬರೆಯಬೇಕು—ಎಂಬುದೇ ಗೊತ್ತಿರಲಿಲ್ಲ. ಕಡೆಗೆ ಬುದ್ಧಿ ಓಡಿಸಿದೆ. (ನಮ್ಮ ಮೇಷ್ಟ್ರು,

ನಾವು ಹೇಳಿದ್ದನ್ನೆ ನಮಗೆ ತಿರುಗಿಸುವುದರಲ್ಲಿ ಬುದ್ಧಿವಂತರು. ಅವರಾಗಿದ್ದರೆ —ಎಲ್ಲಿಗಪ್ಪ ನಿನ್ನ ಬುದ್ಧಿ ಓಡಿಸಿದೆ? ಎಂದು ಕೇಳುತ್ತಿದ್ದರು. ಅದಕ್ಕೋಸ್ಕರ ಹೇಳುತ್ತೇನೆ.) ಬುದ್ಧಿಯನ್ನು ನಾನು ಯಾವ ವಿಷಯವಾಗಿ ಬರೆಯಬೇಕೆಂಬುದರ ಮೇಲೆ ಓಡಿಸಿದೆ.

ಹ್ಞೂ, ಹ್ಞೂ, ಏನೂ ಹೊಳೆಯಲಿಲ್ಲ. ಕಡೆಗೆ, ಇಲ್ಲಿಯವರೆಗೆ ಪಟ್ಟ ತೊಂದರೆಗಳನ್ನೇ ಬರೆದೆ. ನೋಡಬೇಕು, ಮೇಷ್ಟ್ರು ಏನು ಹೇಳುತ್ತಾರೊ!

—ಜಿ. ಎಸ್. ಆದಿರಾಜಯ್ಯ.

## ೫. ಏನನ್ನಾದರೂ ಬರೆ

ನಾನು ಒಂದು ದಿನ ಕ್ಲಾಸಿನಲ್ಲಿ ಕೂತಿದ್ದೆ. ಆಗ ಮಧ್ಯಾಹ್ನ ೩ ಘಂಟೆ. ಕನ್ನಡ ಅಧ್ಯಾಪಕರ ಆಗಮನವಾಯಿತು. ನನಗೆ ಬಾಹ್ಯ ಪ್ರಪಂಚದ ಜ್ಞಾನವೇ ಇರಲಿಲ್ಲ. ಹುಡುಗರೆಲ್ಲಾ ಒಳಕ್ಕೆ ಬಂದರು. ಮೇಷ್ಟ್ರು ಇದ್ದಕ್ಕಿದ್ದ ಹಾಗೆ "ಒಂದು ಪ್ರಬಂಧ ಬರೆಯಿರಿ" ಎಂದರು. ಬೆಳಗ್ಗೆ ಅಲಾರಂಗೆ ಗಾಬರಿಯಾಗು ವಂತೆ ಹಾರಿಬಿದ್ದೆ. ಏನನ್ನು ಬರೆಯಬೇಕೆಂದು ಪಕ್ಕದವನನ್ನು ಚುಚ್ಚಿ ಕೇಳಿದೆ. ಅವನು "ಏನಾದರೂ ಬರಿ" ಎಂದ. ನನಗೆ ಕೋಪ ಬಂತು. ಆಗಾಗಲೇ ಅರ್ಧ ಗಂಟೆ ಆಗಿಹೋಗಿತ್ತು. "ಯಾಕೆ ಮೇಷ್ಟ್ರು ಹೀಗೆ ಗೋಳಾಡಿಸ್ತಾರಪ್ಪಾ" ಎನ್ನಿಸಿತು. ಆದರೂ ನಿರ್ಬಂಧ. ಇದರ ಜೊತೆಗೆ ಬೇಜಾರು. "ಏನು ಬರೆಯಲಿ?" ಎಂದರೆ "ಏನಾದರೂ ಬರೆ" ಎನ್ನುವುದು ಮನಸ್ಸು. ಅದರಂತೆ ಬರೆದರೆ, ಯಾವುದು ಬರೆಯಬೇಕು? ಬರೆಯದೆ ಇದ್ದರೆ ಅಪಮಾನ. ಬರೆಯಲಿಕ್ಕೆ ಏನೂ ಹೊಳೆಯುವುದಿಲ್ಲ. ಆದರೂ, ಬರೆಯಲೆಬೇಕು ಎಂದು ಬರೆಯಲು ಮೊದಲುಮಾಡಿದೆ.

"ಏನು ಬರೆಯಲಿ?" ಎಂದು ತಿರುಗಿ ಪ್ರಶ್ನೆ. "ಮನಸ್ಸಿಗೆ ಬಂದದ್ದು ಬರೆ" ಎಂದು ಉತ್ತರ ಬಂತು. "ಏನೂ ತೋಚದೆ ಹೇಗೆ ಬರೆಯಲಿ?" "ಬರೆಯುತ್ತಿರುವುದನ್ನೇ ಬರೆ" ಎಂದು ಬಂತು ಉತ್ತರ. ಕೋಪ ಬಂತು. ತಲೆ ಕೆರೆದುಕೊಂಡೆ. ಕ್ರಾಪೆಲ್ಲಾ ಕೆಟ್ಟುಹೋಯಿತು. ಆಗ ನನಗೆ ಎಷ್ಟು ವೇದನೆಯಾಯಿತೊ ಅದನ್ನು ತಿಳಿಸಲಾರೆ. ಹಣೆಗೆ ಜೋರಾಗಿ ಹೊಡೆದು

ಕೊಂಡೆ. ಅದರಿಂದ ಏನೂ ಉಪಯೋಗವಾಗಲಿಲ್ಲ. ಮೇಷ್ಟ್ರು ಮುಖ ನೋಡಿದೆ. ಗಾಬರಿ ಆಯಿತು.

ಇನ್ನು ಹತ್ತು ನಿಮಿಷ ಕಾಲವಿದೆ. ಅಷ್ಟರಲ್ಲೇ ಬರೆಯಬೇಕು. ಇಷ್ಟು ಹೊತ್ತೂ ಏನೇನೋ ಬರೆಯುತ್ತಿದ್ದೇನೆ. ಏನು ಬರೆದೆ ಎಂದು ನೋಡಲೆ? ನನಗೇ ನಾಚಿಕೆಯಾಗುತ್ತೆ. ಮೇಷ್ಟ್ರು ನೋಡಿದರೋ ಬೈಯುತ್ತಾರೆ. "ಬರೆಯದೆ ಇದ್ದರೆ ಬೈಯುತ್ತಾರೆ. ಬರೆದರೆ ಬೈಯುತ್ತಾರೆ. ಇದೆಲ್ಲಿಂದ ಬಂತಪ್ಪ ಪ್ರಾಣಸಂಕಟ" ಎಂದು ಬರೆಯುತ್ತಲೇ ಯೋಚನೆಮಾಡುತ್ತಿದ್ದೆ. ಮಧ್ಯಾಹ್ನದ ಬಿಸಿಲು. ನಿದ್ದೆ ಸ್ವಲ್ಪ ಸ್ವಲ್ಪ ಬರುತ್ತಾ ಇತ್ತು. ಆದರೂ ಅರ್ಧನಿದ್ದೆ ಅರ್ಧ ಎಚ್ಚರದಲ್ಲೇ ಮನಸ್ಸಿಗೆ ತೋರಿದ್ದನ್ನು ಬರೆದೆ. ಆದರೆ ಏನು ಬರೆದೆನೊ ಅದರ ತಿಳುವಳಿಕೆಯೆ ಇಲ್ಲ.

ಆದರೆ ನಾನು ನನ್ನ ಗುರುವಿಗೆ ವಿಧೇಯನಾದ ಶಿಷ್ಯ ಎಂದು ನನಗೆ ಜಂಬ. ನನ್ನ ಮೇಷ್ಟ್ರು "ಏನಾದರೂ ಬರೆ" ಎಂದರು. ಅದರಂತೆ ನಾನು ಅವರು ಹಾಕಿದ ಗೆರೆ ದಾಟಲಿಲ್ಲ. ಅದಕ್ಕೇ ನನಗೆ ಸಂತೋಷ.

—ಎನ್. ಕೆ. ಶಾಮಣ್ಣ.

## ೬. ಒಂದು ಸ್ವಾರಸ್ಯವಾದ ಪ್ರಬಂಧ

ಈ ದಿನ ನಮ್ಮ ಉಪಾಧ್ಯಾಯರು "ನಿಮ್ಮ ಜೀವನದಲ್ಲಿ ನಡೆದ ಒಂದು ಸ್ವಾರಸ್ಯವಾದ ವಿಷಯದ ಮೇಲೆ ಒಂದು ಪ್ರಬಂಧವನ್ನು ಬರೆದುಕೊಡಿ" ಎಂದು ಕೇಳಿದರು. ಆದರೆ ಅವರು ಕೊಟ್ಟ ಕಾಲ ಅರ್ಧ ಗಂಟೆ. ಕೇಳುವುದು ಒಂದು ಸೊಗಸಾದ ಪ್ರಬಂಧ. ಅರ್ಧ ಗಂಟೆಯಲ್ಲಿ ಒಂದು ಸೊಗಸಾದ ಪ್ರಬಂಧವನ್ನು ಹೇಗೆ ಬರೆಯುವುದು? ಆಗುತ್ತದೆಯೆ? ಪರವಾಯಿಲ್ಲ. ಒಂದು ಸಣ್ಣ ಪ್ರಬಂಧವನ್ನು ಸೊಗಸಾಗಿ ಬರೆಯಬಹುದು. ಸ್ವಾರಸ್ಯವಾದ ಅನುಭವಗಳು ಹೇರಳವಾಗಿದ್ದುವು. ಆದರೆ ಯಾವುದನ್ನು ಬರೆದರೆ ಒಂದು ಸೊಗಸಾದ ಪ್ರಬಂಧವಾದೀತು?—ಎಂದು ಆಲೋಚನೆ ಮಾಡುವುದರಲ್ಲಿಯೇ ಉಪಾಧ್ಯಾಯರು ಕೊಟ್ಟ ಕಾಲವು ಅರ್ಧ ಕಳೆದುಹೋಯಿತು.

ಇನ್ನು ಉಳಿದಿರುವುದು ಕಾಲುಗಂಟೆ. ಇಷ್ಟು ಕಾಲವನ್ನು ಆಲೋಚನೆ

ಮಾಡುವುದರಲ್ಲಿಯೆ ಕಳೆದುದಾಯಿತು. ಇನ್ನು "ಒಂದು ಸ್ವಾರಸ್ಯವಾದ ವಿಷಯವನ್ನು ಬರೆಯಬೇಕು" ಎಂದರೆ—(ಒಂದು ಯೋಚನೆ ಮನಸ್ಸಿಗೆ ಬಂತು. ಆ ಯೋಚನೆ ದುಡ್ಡಿನದು. ಹೋದ ತಿಂಗಳಿನದು ಹಾಸ್ಟೆಲ್ ಬಿಲ್ ಕ್ಲಿಯರ್ ಮಾಡಿಲ್ಲ. ಇನ್ನೂ ಹಣ ಬಂದಿಲ್ಲ).

ಈಗಾಗಲೆ ಒಂದು ಗಂಟೆ ಇಪ್ಪತ್ತು ನಿಮಿಷ. ಒಂದೂವರೆ ಗಂಟೆಯಾದರೆ ಗೊತ್ತಿದೆಯಲ್ಲ, ಮಿ॥ ರಾಮಯ್ಯರ್ಸ್ ಆನರಬಲ್ ಗೆಸ್ಟ್ ಆಗುವುದು. ಆದರೆ ಜೇಬಿನಲ್ಲಿ ಕಾಸೇ ಇಲ್ಲ. ಪ್ರಬಂಧವನ್ನು ಬರೆಯೋಣವೆಂದು ಪ್ರಾರಂಭ ಮಾಡುವುದಕ್ಕೆ ಹೋದರೆ, ಕಾಫಿಗೆ ದುಡ್ಡಿಲ್ಲವೆಂಬ ಯೋಚನೆ ಬಂದು ಪ್ರಬಂಧ ವನ್ನು ಬರೆಯಲಾಗಲೆ ಇಲ್ಲ. ಸರಿ, ಆಗಲೆ ಬೆಲ್ ಹೊಡೆದೇಬಿಟ್ಟರು!

ನಮ್ಮ ಉಪಾಧ್ಯಾಯರು ವಿದ್ಯಾರ್ಥಿಯಾಗಿ ಉಪಾಧ್ಯಾಯರಾಗಿದ್ದರೆ, ದುಡ್ಡಿನ ತೊಂದರೆ ಹುಡುಗರಿಗೆ ಆದರೆ ಯಾವ ಪರಿಣಾಮವಾಗುತ್ತದೆ ಎಂಬು ದನ್ನು ಅವರೇ ಯೋಚನೆ ಮಾಡಲಿ. ಹೀಗೆ ಬರೆದುದಕ್ಕೆ ನಮ್ಮ ಉಪಾ ಧ್ಯಾಯರು ನನ್ನನ್ನು ಕ್ಷಮಿಸುವರೆಂದು ನಂಬಿದ್ದೇನೆ.

—ಎಸ್. ಎನ್. ತೀರ್ಥಪ್ಪ.

## ೭. ವೇಷ ಅಳಿಸಿಕೊಳ್ಳೋ!

ಥೂ, ಪೆದ್ದೇ! ಒಂದು ಪುಟ ಬರೆಯೋ ಯೋಗ್ಯತೆ ನಿನಗಿಲ್ಲದೆ ಹೋಯ್ತೆ! ನಿನ್ನ ಮುಖಕ್ಕೆ ಮಂಗಳಾರತಿ ಎತ್ತ! ತಲೆಯೆಲ್ಲಾ ಮಾತಾಡ್ತೀ. ಕತ್ತೆ ಹೊರೆ ಹೊತ್ತ ಹಾಗೆ ದಪ್ಪ ದಪ್ಪ ಪುಸ್ತಕ ಹಿಡಿದುಕೊಂಡು ಕಾಲೇಜಿಂದ ಮನೇಗೆ ಮನೇಯಿಂದ ಕಾಲೇಜಿಗೆ ಲಾಟ್ರ ಹೊಡೀತಿ. ಅಷ್ಟು ಪುಸ್ತಕಗಳನ್ನು ಪೂರ್ತಿ ಓದ್ದೆ ಇದ್ರೂನೆ, ಪುಸ್ತಕದ ಸ್ವಲ್ಪ ಭಾಗ ಓದಿರುವ ವಿಷಯ ಜ್ಞಾಪ ಕಕ್ಕೆ ಬಂದದ್ದು—ಕಡೆಗೆ, ಪುಸ್ತಕದ ಹೆಸರು, ಪುಸ್ತಕ ಬರೆದವರ ಹೆಸರು, ಇವೆಲ್ಲಾ ಬರೆದರೂ ಒಂದು ಪೇಜಾಗೊಲ್ವೆ? ಅಥವಾ ಅದೂ ಜ್ಞಾಪಕಕ್ಕೆ ಬರದೆಯಿದ್ದರೆ, ಏನೋ ಒಂದು ಪುಸ್ತಕ, ಯಾವನೋ ತಿಮ್ಮಸೆಟ್ಟಿ ದಾಸಯ್ಯ ಬರೆದವನು ಎಂದು ಕಲ್ಪನೆ ಮಾಡುವುದಕ್ಕಾಗುವುದಿಲ್ಲವೆ?

ಈ ತರಹ ಪ್ರಶ್ನೆಗಳು ನನ್ನನ್ನು ಹೆದರಿಸುತ್ತಿದ್ದುವು. ಆದರೆ ಹೆದರ

ದವನಂತೆ ನಟಿಸುತ್ತಾ ಇದ್ದೆ, ಬಹಳ ಕಾಲದವರೆಗೆ. ಒಂದಾನೊಂದು ದಿನ ನಟನೆಯು ಸಮಾಪ್ತಿಯಾಗಲೆ ಬೇಕು. ನಾಟಕದಲ್ಲಿ ವೇಷಧಾರಿಯಾದವನು ಹೊರಗೆ ಬರಬೇಕಾದರೆ ಬಣ್ಣ ಅಳಿಸದೆ ಬರುತ್ತಾನೆಯೆ? ಅಂತೂ ಕಡೆಯ ತನಕ ವೇಷ ಹಾಕಿಕೊಂಡೇ ಇರುವುದಕ್ಕೆ ಆಗುವುದಿಲ್ಲ. ಹಾಗೆಯೇ ಪುಸ್ತಕ ಹೊತ್ತು ವಿದ್ಯಾವಂತರು ಅನ್ನಿಸಿಕೊಳ್ಳುವುದು ಬಿಟ್ಟು ಸರಸ್ವತಿಯ ಪ್ರಿಯಪುತ್ರ ರಾಗಬೇಕು. ನಾನೂ ಹಾಗೆ ಆಗಬೇಕೆಂಬ ಆಸೆ ಮಾತ್ರ ನನ್ನ ಶಕ್ತಿಗೆ ಮೀರಿರುವುದು.

ಈ ಆಸೆಯನ್ನು ಸಾಧಿಸಲು ಮಾಡಬೇಕಾದ ಪ್ರಯತ್ನಗಳು ಸುಲಭವಾಗಿ ಕಾಣದಿದ್ದರೂ ಕಷ್ಟವಲ್ಲವೆಂದು ಮನಸ್ಸು ಮಾಡಬಹುದಲ್ಲಾ. ಹಾಗೆ ಬರಿಯ ಮನಸ್ಸಿನಲ್ಲಿ ಮಂಡಿಗೆ ಮುರಿದೆ, ದಪ್ಪ ಪುಸ್ತಕ ತೆರೆದು ಓದಿದರೆ ಅರ್ಥವಾಗ ದಿದ್ದರೂ ಮುಂದಿನ ಸಾಲುಗಳು ಅರ್ಥವಾಗಬಹುದೆಂದು ಓದುವುದನ್ನು ಮುಂದು ವರಿಸಿದರೆ ಕಡೆಯಪಕ್ಷ ಎರಡು ಸಾಲಾದರೂ ಅರ್ಥವಾಗದೆ ಇದ್ದೀತೇ? ಯಾವುದು ಅರ್ಥವಾಗುತ್ತೋ, ಅದೇನು ಅರ್ಥವಾಗುತ್ತೋ, ಅದನ್ನು ಒಂದು ಪೇಜಿನಲ್ಲಿ ಗೀಚಿದರೆ ಆಯಿತು . . . .

—ಮುಖ್ಯಪ್ರಾಣರಾವ್.

## ೮. ಬಡಮಕ್ಕಳ ವಿದ್ಯಾಭ್ಯಾಸ

ಬಡವರ ಮಕ್ಕಳು ವಿದ್ಯಾಭ್ಯಾಸವನ್ನು ಮಾಡಲೇಬಾರದು. ಮಾಡಿ ದರೂ ಪ್ರೌಢ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಏನೋ ೧೫-೨೦ ರೂಪಾ ಯಿಗಳ ಕೆಲಸಕ್ಕೆ ಹೋಗಬೇಕೇ ಹೊರತು ಕಾಲೇಜು ವಿದ್ಯಾಭ್ಯಾಸಕ್ಕೆ ಎಂದಿಗೂ ಬರಬಾರದು. ಅದರಲ್ಲೂ ಹಳ್ಳಿಯ ಬಡವರ ಮಕ್ಕಳು ಮೇಲೆ ಹೇಳಿದ ವಿದ್ಯಾಭ್ಯಾಸ ಮುಗಿಸಿದರೆ, ಕಾಲೇಜಿಗೆ ಬರದೆ ಬಿಡುವುದಕ್ಕೆ ಅನೇಕ ತೊಂದರೆಗಳು. ಆ ಹಳ್ಳಿಯ ಜನಗಳು ಆ ವಿದ್ಯಾರ್ಥಿಗೆ ಬಹಳ ಉತ್ಸಾಹ ಕೊಡುತ್ತಾರೆ. ಆದರೆ, ದುಡ್ಡು ಗಿಡ್ಡು ಸಹಾಯ ಮಾಡುತ್ತೇನೆಂದು ಒಬ್ಬನೂ ಹೇಳುವುದಿಲ್ಲ. ಅವರು "ಅವನು ಬಹಳ ಚೆನ್ನಾಗಿ ಓದುತ್ತಾನೆ. ಅವನಿಗೆ ಅಮಲ್ದಾರರ ಕೆಲಸ ಬರುತ್ತೆ" ಎಂದು, ಹೀಗೆಲ್ಲಾ ಇನ್ನೂ ಅನೇಕ ಮಾತ ನಾಡುತ್ತಾರೆ.

ಅವರವರೆ ಮಾತನಾಡಿಕೊಂಡರೆ ವಿದ್ಯಾರ್ಥಿಗೆ ಅದರಿಂದೇನೂ ತೊಂದರೆಯಿಲ್ಲ. ಆ ವಿದ್ಯಾರ್ಥಿಯ ಎದುರಿಗೇ ಹೀಗೆಲ್ಲ ಮಾಡುತ್ತಾರೆ. ಅದರಲ್ಲೂ ಮುದುಕಿಯರೂ ಮುದುಕರೂ ವಿದ್ಯಾಭ್ಯಾಸದ ವಿಷಯವೆ ಗೊತ್ತಿಲ್ಲದವರೂ "ಈ ಹುಡುಗ ಇನ್ಸ್ಪೇಟ್ರಾಗ್ತಾನಂತೆ" ಹೀಗೆಲ್ಲಾ ಆಸೆಪಡುತ್ತಾರೆ. ಇದನ್ನೆಲ್ಲಾ ಕೇಳಿಬಿಟ್ಟು ಆ ವಿದ್ಯಾರ್ಥಿಗೆ ಹೇಗಾಗುತ್ತದೆ ಎಂದರೆ, ಏನಾದರೂ ಮಾಡಿ ಕಾಲೇಜಿಗೆ ಹೋಗಬೇಕು ಎನ್ನಿಸುತ್ತದೆ. ಆ ಕಾಲದಲ್ಲೇನೋ "ತಿರುಪೆಮಾಡಿಕೊಂಡಾದರೂ ಓದ್ಬಿಡ್ತೀನಿ" ಎನ್ನುತ್ತಾನೆ. ಅವನಿಗೆ ಸಣ್ಣ ಕೆಲಸಕ್ಕೆ ಹೋಗಲು ಇಷ್ಟವಿರುವುದಿಲ್ಲ. ಆಮೇಲೆ, B.A. ಪಾಸ್ ಮಾಡಿಕೊಂಡು ಹೋಟಲಿನಲ್ಲಿ ಲೋಟ ತೊಳೆದರೂ ಪರವಾಯಿಲ್ಲ! ಮುಖ್ಯವಾಗಿ ಜನಗಳ ಉತ್ಸಾಹ ಹಾಗೆ ಮಾಡುತ್ತದೆ.

ಆಮೇಲೆ ಏನೋ ಪುಣ್ಯವಶಾತ್—ಪುಣ್ಯ ಎಂದು ಹೇಳಬೇಕೋ ಕರ್ಮ ಎಂದು ಹೇಳಬೇಕೋ—ಬಂದು ಕಾಲೇಜು ವಿದ್ಯಾವ್ಯಾಸಂಗ ಮಾಡುತ್ತಾನೆ. ಇಂಥವನಿಗೆ ವಿದ್ಯಾರ್ಥಿವೇತನ ಸಿಕ್ಕಿಯೇ ಸಿಕ್ಕುತ್ತೆ. ಅದು ಸಿಕ್ಕಿದರೂ ನವೀನ ರೀತಿಯಂತೆ ವ್ಯಾಸಂಗಮಾಡುವುದು ಬಹಳ ಕಷ್ಟ. ಏನು ಕಷ್ಟಗಳು ಎನ್ನುವುದನ್ನು ವಿವರಿಸಬಹುದಾಗಿತ್ತು. ಆದರೆ ಉಪಾಧ್ಯಾಯರು "ಎರಡೇ ಪುಟ ಬರಿ" ಎಂದದ್ದರಿಂದ ಹೆಸರು ಕೂಡ ಬರೆಯಲು ಸ್ಥಳ ಇಲ್ಲದಹಾಗೆ ಇಷ್ಟನ್ನು ಬರೆದುದಾಯಿತು.

ಆದುದರಿಂದ ಬಡವರ ಮಕ್ಕಳಿಗೆ ವಿದ್ಯಾಭ್ಯಾಸವು ತರವೇ ಅಲ್ಲ. ಅಂತಹ ವಿದ್ಯಾರ್ಥಿಗಳನ್ನು ಯಾರೂ ಹತ್ತಿರ ಬಿಟ್ಟುಕೊಳ್ಳುವುದಿಲ್ಲ. ಸ್ನೇಹವನ್ನು ಬೆಳೆಸುವುದೇ ಇಲ್ಲ. ಈಗಿನ ಕಾಲದಲ್ಲಿ ನೀರುತುಂಬಿದ ಗದ್ದೆಗೆ ನೀರೊದಗಿಸಿ ಕೊಡುವವರೇ ಜಾಸ್ತಿ. ಆದರೆ, ಒಣಗಿ ಬಿರುಕುಬಿಟ್ಟಿರುವ ಗದ್ದೆಗೆ ನೀರೊದಗಿಸಿ ಕೊಡುವುದಿಲ್ಲ. ಆದ್ದರಿಂದ ಬಡವರ ಮಕ್ಕಳು ವಿದ್ಯಾಭ್ಯಾಸ ಮಾಡಲೇ ಕೂಡದು.

ನಾನು "ಎರಡೇ ಪುಟಗಳಲ್ಲಿ ಮುಗಿಸಿಬಿಟ್ಟೆ" ಎಂದು ಹೇಳಿದ್ದೇನೆ. ನಾನು ರಫ್ ನೋಟ್ ತಂದಿರಲಿಲ್ಲ. ಒಂದೇ ಹಾಳೆಯನ್ನು ನನ್ನ ಸ್ನೇಹಿತನಿಂದ ಕಡ ತೆಗೆದುಕೊಂಡಿದ್ದೆ. ಇನ್ನೊಂದನ್ನು ಬಹಳ ಕೇಳಿಕೊಂಡಮೇಲೆ ಕೊಟ್ಟ. ಅದರಲ್ಲಿ ಬರೇ ಹೆಸರು ಬರೆಯಬೇಕಾಗಿ ಬಂತು. ಅಷ್ಟು ಬೇಡಿ

ಇಸುಕೊಂಡ ಹಾಳೆಯನ್ನು ಬರೀ ಹೆಸರಿಗೋಸ್ಕರ ಕೊಡಲಾರದೆ ಇನ್ನೂ ಸ್ವಲ್ಪ ಬರೆದದ್ದಾಯಿತು.

— ಹೆಚ್. ಟಿ. ನಿಂಗಪ್ಪ.

## ೯. ಏನು ಬರೆಯಲಪ್ಪಾ? ನಾನು!

ಜನಸಾಗರದಲ್ಲಿ ಹೊರಟು ಜಾಲಾಡಿದರೆ ಸಿಗುವುದು ಅನೇಕ ವಿಷಯಗಳು: ಸಾಯುವವರ ಕೂಗು, ಸುಖಪಡುವವರ ರಾಗ; ರತ್ನ ಹಿಡಿದ ಕೈ, ರಕ್ತದ ಕೈ; ಸುಖ ದುಃಖ; ನಯ, ಭಯ; ಅಳು, ನಗು; ಧರ್ಮ, ಅಧರ್ಮ; ಹೇಳಲು ಹೊರಟರೆ ಮಾತು ಹೊರಡದಷ್ಟು ಉದ್ದದ ಪಟ್ಟಿಯಾಗುವುದು.

ಕವಿಗಳು, ರಸಿಕರು, ಆಳಮನದವರು, ವಿಚಾರಶೀಲರು, ಈ ಜನಜಂಗುಳಿಯ ಮೇಲುಕೆಳಗುಗಳನ್ನು ಕಂಡು, ನಕ್ಕು ನಲಿದು, ಸೊಕ್ಕಿ ಸೊರಗಿ, ಕೊನೆಯಲ್ಲಿ ತಮ್ಮ ತಾಳಲಾರದ ಉತ್ಸಾಹವನ್ನು ವಿಮರ್ಶೆ, ಕಾವ್ಯ ಅಥವಾ ಪ್ರಬಂಧದ ಮೂಲಕ ಹೊರಗೆಡಹುವರು. ಕವಿಯ ಶೈಲಿಯು ಅವನ ಮನಸ್ಸನ್ನು ಪ್ರತಿಬಿಂಬಿಸುವ ಕನ್ನಡಿ. "ನೀನೇಕೆ ನನ್ನನ್ನು ಹೊರಗೆಳೆದೆ?" ಎಂದು ಕಾವ್ಯವು ಕವಿಯನ್ನು ಕೇಳಿದರೆ "ನಾನಲ್ಲ ಹೊರಗೆಳೆದವನು. ನೀನೆ ಬಂದೆ" ಎನ್ನುವನು ಕವಿ.

ಇಂದು ನಾನು ಬರೆಯಹೊರಟ ವಿಷಯವು ವಿಮರ್ಶೆಯಲ್ಲ, ವಿಚಾರವಲ್ಲ, ವರ್ಣನೆಯಲ್ಲ, ಅದಲ್ಲ, ಇದಲ್ಲ. ನಾನೇನೂ ಕವಿಯಲ್ಲ. ನನ್ನ (ಪ್ರಪಂಚದ) ಅನುಭವ ತೀರ ಸ್ವಲ್ಪ. ಆದ್ದರಿಂದ ನಾನು ಏನು ಹೇಳಹೊರಟೆ ಎನ್ನುವುದೇ ಗೊತ್ತಿಲ್ಲವಾಗಿದೆ. ಇದೂ ಒಂದು ವಿದ್ಯೆ, ಬಂಡವಾಳವಿಲ್ಲದೇ ಭೂರಿ ಬಿಡುವುದು.

ರೈ—ರವರು ಎಡೆಬಿಡದೆ ೩-೪ ಗಂಟೆ ಮಾತನಾಡುವರಂತೆ. ಬಹುಶಃ ಅವರು ಹೇಳಿದ್ದನ್ನೇ ಹೇಳುತ್ತ ಹೋಗುತ್ತಿರಬೇಕು. ಇಲ್ಲದಿದ್ದರೆ ಅದು ಹೇಗೆ ಸಾಧ್ಯ? ಈಗ ನೋಡಿ, ಕಾಲೇಜಿನಲ್ಲಿ ಕಾಂಪೊಸಿಷನ್ ಕ್ಲಾಸಿನಲ್ಲಿ "ಎಪಿಟೊಮಿ" ಎಂದಿಡುವರು ಏನು ಗೊತ್ತೆ? ಬಂಡವಾಳ ಇಲ್ಲದೆ ಬರೀ ಬುರುಡೆಯನ್ನು ಉರುಡಿಸಿದ ೮-೧೦ ಪುಟಗಳ ಪ್ರಬಂಧವನ್ನು ಅರ್ಧ ಅಥವಾ ಒಂದು ಪುಟದಷ್ಟರಲ್ಲಿ ಸಂಕ್ಷೇಪವಾಗಿ ಬರೆಯುವುದು "ಎಪಿಟೊಮಿ". ನೋಡಿ!

ಅಷ್ಟು ದೊಡ್ಡ ಪ್ರಬಂಧವನ್ನು ಒಂದೇ ಪುಟದಲ್ಲಿ ಬರೆಯಲು ಸಾಧ್ಯ! ಹಾಗೆಂದ ಮೇಲೆ ಆ ಮೂಲಪ್ರಬಂಧ ಎಷ್ಟು ಜೊಳ್ಳಾಗಿರಬೇಕು!

"ಎರಡಕ್ಷರವ ಬರೆದು ಕವಿಗಳೆಂದು" ಹೊಗಳಿಸಿಕೊಳ್ಳಲು ಅಪೇಕ್ಷಿಸು ವವರೂ ಇದ್ದಾರೆ. ಆದರೆ ಇವರ ಎರಡಕ್ಷರಕ್ಕೆ ಬೆಲೆ ಇಲ್ಲ. ನಮ್ಮನ್ನು ಯಾವುದಾದರೂ ವಿಷಯವಾಗಿ ಮಾತನಾಡಿ ಎಂದರೆ ನಾವು ಮಾಡುವದಿಷ್ಟೆ: ತಿರುಗಿ ತಿರುಗಿ ದಾಸಯ್ಯನಂತೆ ಹಾಡಿದ್ದನ್ನೇ ಹಾಡುವುದು. ಇದಕ್ಕೆ ಕಾರಣ ವೇನು? ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯಾಗಿ ಬರೆಯಲು ಎರಡು ಮಾತು ಬಾರದು, ನುಡಿಯಲು ನಾಕು ಮಾತು ಬಾರದು—ಎಂದರೆ ಆಶ್ಚರ್ಯವೇ ಸರಿ. ಇದು ಉಪಾಧ್ಯಾಯರ ತಪ್ಪಲ್ಲ. ತಪ್ಪು ನಮ್ಮದು. ಇದ್ದ ಎರಡು Text book ಗಳನ್ನು ಓದಿ, ಉರುಹಚ್ಚಿ, ಹಿಸ್ ಮಾಸ್ಟರ್ಸ್ ವಾಯ್ಸ್ ಆಗಿ ಹಾಡಿ ದರೆ ಸಾಕೆನ್ನುವ ನಮ್ಮ ಮನೋಭಾವನೆಯು ನಮ್ಮನ್ನು ಈ ಅಧೋಗತಿ ಗಿಳಿಸಿದೆ. ಓದಬೇಕು, ವಿಸ್ತಾರ ವಿಶ್ವದ ವಿಚಿತ್ರಗಳನ್ನು ಅರಿಯಬೇಕು ಎನ್ನುವ ಆತುರ, ಹಸಿವು ನಮಗಿಲ್ಲ. ಇದರ ಪರಿಣಾಮ—ಪ್ರಪಂಚಾನುಭವ ಕಡಿಮೆ. ಆದ್ದರಿಂದಲೇ ನಮಗೆ ಯಾವ ವಿಷಯ ಕುರಿತು ಬರೆಯೆಂದರೂ ಬಾರದು. ಅಲ್ಲದೆ, ನಮ್ಮ ಕನ್ನಡ ಪ್ರಬಂಧಗಳನ್ನಂತೂ ಬರೆಯಲು ನಮಗೆ ಆಗುವ ಶ್ರಮ ವನ್ನು ನಾನೇಕೆ ಹೇಳಲಿ? ಕನ್ನಡ ಪದಗಳಿಲ್ಲ ತಲೆಯಲ್ಲಿ. ಶೈಲಿ, ಗೊತ್ತಿಲ್ಲ. ಹೀಗಾಗಿ ಹಿಂದುಳಿದಿದ್ದೇವೆ. ಈ ಒಂದು ಕೊಂಕನ್ನು ತಿದ್ದಿಕೊಳ್ಳುವುದು ನಮ್ಮೆಲ್ಲರ ಮುಖ್ಯ ಕರ್ತವ್ಯ.

—ಎಸ್. ಪ್ರಹ್ಲಾದರಾವ್.

## ೧೦. ಕಾಗೆ ಪುರಾಣ

ಮೇಷ್ಟ್ರೇನೋ "ಐದು ನಿಮಿಷ ತಲೆ ಬೆಚ್ಚಗೆ ಮಾಡಿಕೊಂಡರೆ ಏನಾದರೂ ವಿಷಯ ತಲೆಗೆ ಬರುತ್ತೆ. ಅದರಮೇಲೆ ಎರಡುಪುಟ ಬರೆದರೆ, ತೀರಿತು ಹೇಳಿದ ಕೆಲಸ" ಎಂದು ಸುಲಭವಾಗಿ ಅಂದುಬಿಟ್ಟರು. ಆದರೆ ಬರೆಯುವವರಿಗೆ ಗೊತ್ತಾ ಗುತ್ತೆ, ನಿಜವಾದ ಕಷ್ಟ. ನಾನೇನೋ ಇಪ್ಪತ್ತು ನಿಮಿಷ ತಲೆ ಕಾಯಿಸಿದೆ. ಆದರೆ ತಲೆ ಸಿಡಿಯಲು ಮೊದಲಿಟ್ಟಿತೇ ಹೊರತು ಬರೆಯಲು ಒಳ್ಳೆಯ ವಿಚಾರ ಹೊಳೆಯಲೇ ಇಲ್ಲ. ಕೊನೆಗೆ ಬೇಜಾರಾಯಿತು. ಏನೋ ಒಂದು ಪುರಾಣ

ಬರೆದು ಬಿಸಾಕಿದರೆ ಸಾಕೆನ್ನಿಸಿತು. ಆದರೆ ಯಾವ ಪುರಾಣ ಬರೆಯುವುದು? ವಿಷ್ಣುಪುರಾಣ, ಶಿವಪುರಾಣ, ಹನುಮಪುರಾಣ, ಇವುಗಳನ್ನು ಎಲ್ಲರೂ ಕೇಳಿದ್ದಾರೆ. ಪುನಃ ಅದನ್ನು ಬರೆದರೆ ಯಾರು ತಾನೇ ಓದುತ್ತಾರೆ. ಆದ್ದರಿಂದ ನಾನೇ ಒಂದು ಹೊಸಪುರಾಣ ಬರೆದಿದ್ದೇನೆ. ಅದರ ಹೆಸರು "ಕಾಗೆ ಪುರಾಣ". ಪುರಾಣ ಮೊದಲುಮಾಡುವುದಕ್ಕೆ ಮುಂಚೆ ಸ್ವಲ್ಪ ಕಾಗೆಪ್ರಶಂಸೆ ಮಾಡಿ ಮುಂದೆ ಹೋಗುತ್ತೇನೆ.

ಕಾಗೆಯ ಪ್ರಶಂಸೆಯೆಂದ ಒಡನೆಯೇ ಯಾರಿಗಾದರೂ ಆಶ್ಚರ್ಯವಾಗದಿರದು. ಕಾಗೆಯನ್ನು ಪ್ರಶಂಸಿಸಲು ಅದರಲ್ಲಿ ಏನಿದೆ? ಅದರ ಕಣ್ಣು ಕೋರೈಸುವ ಕರಿಯ ಬಣ್ಣವನ್ನು ವರ್ಣಿಸುವುದೆ? ಅಥವಾ ಅದರ ಕರ್ಣಕಠೋರವಾದ ಧ್ವನಿಯನ್ನು ಪ್ರಶಂಸಿಸುವುದೆ?—ಎಂದು ನೀವು ಕೇಳಬಹುದು. ಆದರೆ ಅದು ಕಪ್ಪಗಿದ್ದಮಾತ್ರಕ್ಕೆ, ಸುಂದರವಾಗಿಲ್ಲವೆ? ಸೌಂದರ್ಯವೆಂದರೇನು? ಆಧುನಿಕ ಕವಿಗಳು ಹೇಳುವುದನ್ನು ಕೇಳಿಲ್ಲವೆ? ಸೌಂದರ್ಯವೆಂದರೆ ಸತ್ಯ. ಮನುಷ್ಯನನ್ನು ಬರೆಯಹೋಗಿ ಮಂಗನನ್ನು ಬರೆದರೆ ಯಾರು ತಾನೆ ಅದನ್ನು ಸುಂದರವಾಗಿದೆ ಎನ್ನುತ್ತಾರೆ? ಮನುಷ್ಯನಲ್ಲಿ ಸೌಂದರ್ಯವನ್ನು ಕಾಣಬೇಕಾದರೆ ಮನುಷ್ಯನು ಮನುಷ್ಯನಂತೆಯೇ ಇರಬೇಕು. ಆದರೆ ಅನೇಕವೇಳೆ ತನ್ನ ಕೃತಕವೇಷಗಳಿಂದ ಮನುಷ್ಯನು ಮನುಷ್ಯನಾಗಿಯೇ ಇರುವುದಿಲ್ಲ. ಆದರೆ ಕಾಗೆಯು ಯಾವಾಗಲೂ ಕಾಗೆಯಾಗಿಯೇ ಇರುತ್ತದೆ. ಆದ್ದರಿಂದ ಅದರಲ್ಲಿ ಸೌಂದರ್ಯವು ತುಂಬಿ ತುಳುಕುತ್ತಿದೆ. ನಿಮ್ಮ ಕಣ್ಣಿಗೆ ಅದು ಕಾಣದಿದ್ದರೆ, ನಿಮ್ಮ ದೃಷ್ಟಿ ಎಲ್ಲಿಯೋ ವಕ್ರವಾಗಿರಬೇಕು. ಕಾಗೆಯು ಸುಂದರವಾಗಿರಬೇಕಾದರೆ ಅದು ಕಪ್ಪಾಗಿರಬೇಕೆಂದು ದೇವರು ನಿರ್ಧರಿಸಿದನು. ಹಾಗಿಲ್ಲದಿದ್ದರೆ, ಅದನ್ನು ಬೆಳ್ಳಗೆ ನಿರ್ಮಿಸಲು ಅವನಿಗೆ ಆಗುತ್ತಿರಲಿಲ್ಲವೆ?

ಇನ್ನು ಅದರ ಸ್ವರದ ವಿಚಾರ. ಅದರ ಬಣ್ಣದಂತೆಯೆ ಅದರ ಸ್ವರವನ್ನೂ ಜನರು ಕಪ್ಪಾಗಿಯೇ ಊಹಿಸಿದ್ದಾರೆ. ಬಹುಶಃ ಅವರೆಲ್ಲರೂ ಮಧ್ಯಾಹ್ನ ಹನ್ನೆರಡು ಗಂಟೆಗೆ ಹಾಸಿಗೆ ಬಿಟ್ಟು ಏಳುತ್ತಾರೇನೋ! ಬೆಳಗ್ಗೆ ೬ ಗಂಟೆಗೆ ಅದರ ಸ್ವರ ಕೇಳಿ. ಆಗ ಗೊತ್ತಾಗುತ್ತೆ, ಅದರ ಇಂಪು. ಕಾಗೆಯ ಸ್ವರದ ಮುಂದೆ ಕೋಗಿಲೆಯ ಸ್ವರವೂ ನಿಲ್ಲಲಾರದೆಂದು ನಿಮಗೇ ತಿಳಿಯುತ್ತದೆ.

ಹೀಗೆಯೇ ಕಾಗೆಯ ಪ್ರಶಂಸೆ ಹೇಳುತ್ತ ಹೋದರೆ ಹೊತ್ತೇ ತಿಳಿಯುವುದಿಲ್ಲ. ಆಗಲೇ ಮೂರೂ ಮುಕ್ಕಾಲು ಗಂಟೆ ಸಮಯವಾಯಿತು. ಬರೆಯಲು ಕೊಟ್ಟ ಅವಕಾಶ ಮುಗಿಯುತ್ತಾ ಬಂತು. ಈಗ ಹೇಳಿರುವ ವಿಷಯವೆಲ್ಲವೂ ಪೀಠಿಕಾಪ್ರಕರಣಕ್ಕೆ ಸೇರಿದ್ದು. ಮುಂದೆ ಎಂದಾದರೂ ಸಮಯ ದೊರಕಿದಾಗ ಕಾಗೆಪುರಾಣವನ್ನು ಷುರುಮಾಡುತ್ತೇನೆ.

—ರತ್ನಂ ಸಂಪತ್ತೈಯ್ಯಂಗಾರ್.

## ೧೧. ಕಾಲೇಜ್ ವಿದ್ಯಾರ್ಥಿ

ಅನೇಕರು ಕಾಲೇಜ್ ವಿದ್ಯಾರ್ಥಿಗಳ ಮೇಲೆ ಒಂದು ತರಹ ಗೌರವ, ಒಳ್ಳೆಯ ಅಭಿಪ್ರಾಯ ಇವುಗಳನ್ನು ಇಟ್ಟುಕೊಂಡಿರುತ್ತಾರೆ. ಆದರೆ ಅವರು ಮಾತ್ರ ಸ್ವಲ್ಪ ವಿವರವಾಗಿ ಅದರ ವಿಷಯವನ್ನು ತಿಳಿದರೆ ಆ ಅಭಿಪ್ರಾಯ ಅವರ ಮನಸ್ಸಿನಿಂದ ಹೊರಟುಹೋಗುತ್ತದೆ. ಏಕೆಂದರೆ, ಹೆಸರಿಗೆ ಮಾತ್ರ ಕಾಲೇಜ್ ವಿದ್ಯಾರ್ಥಿ; ಇವನು ಮಾಡುದು ತಾನೇ ಏನು?

ಬೆಳಗ್ಗೆ ೭ ಗಂಟೆಗೆ ಏಳುದು. ಮೊಖ ತೊಳದ, ಇಲ್ಲದಿದ್ದರೆ ಇಲ್ಲ. ಹಾಗೆ ಕಾಫಿ ಕುಡುದುಬಿಟ್ಟು, ಬಟ್ಟೆ ಹಾಕಿಕೊಂಡು ೮ ಗಂಟೆ ಸಮಯಕ್ಕೆ ಯೂನಿರ್ಯನ್‌ಗೆ ಬಂದು ಅಲ್ಲಿ ೯ ಗಂಟೆ ತನಕ ಕಾಲಹರಣ ಮಾಡಿಬಿಟ್ಟು, ಪುನಃ ಮನೆಗೆ ಹೋಗಿ, ಸ್ನಾನಮಾಡಿಕೊಂಡು, ಅನಂತರ ಊಟ ಮಾಡಿಕೊಂಡು ಕಾಲೇಜಿಗೆ ಬಂದುಬಿಡುದು.

ಮೊದಲನೇ ಪೀರಿಡಲ್ಲೇ ಗೊಣಗುಟ್ಟುದಕ್ಕೆ ಸುರು. ಹಾಗೂ ಹೀಗೂ ೧-೩೦ ಗಂಟೆವರೆಗೆ ಬಹಳ ಕಷ್ಟದಿಂದ ಇದ್ದುಬಿಡುದು. ಆಮೇಲೆ ಕಾಫಿ ಕುಡಿದನಂತರ ಯಾವ ಪೀರಿಡ್‌ಗೆ ಚಕರ್ ಹೊಡಿಲಿ ಅಂತ ಆಲೋಚನೆ ಸುರು. ಸಾಮಾನ್ಯವಾಗಿ ಕಡೆ ಪೀರಿಡ್‌ಗಂತೂ ಹೋಗು ಹಾಗೆ ಇಲ್ಲ. ಸಾಯಂಕಾಲವಾದನಂತರ ಯಾರಾದರೂ ಕಾಫಿ ಕೊಡಿಸುವ ಸ್ನೇಹಿತರನ್ನು ಹುಡುಕಿ ಅವರಿಂದ ದುಡ್ಡು ಖರ್ಚುಮಾಡಿಸಿ ಕಾಫಿ ಕುಡಿಯುವುದು. ಆ ಮೇಲೆ ೮ ಗಂಟೆ ತನಕ ಯೂನಿಯನ್ನಲ್ಲಿ—ಅಥವಾ ಯಾವುದಾದರೂ ಲೆಚ್ಚರ್ ಇದ್ದರೆ ಅಲ್ಲಿ—ಕಾಲ ಕಳೆದುಬಿಟ್ಟು ೮-೩೦ ಗಂಟೆ ಹೊತ್ತಿಗೆ ಮನೆಗೆ ಹೋಗುದು.

ಹೋಗತಿದ್ದ ಹಾಗೆನೇ ಮನೆಲಿ ಬೈಯುಕೆ ಸುರು. ಮಾತನಾಡದೆ

ಮನೆಗೆ ಹೋಗಿ ಊಟಮಾಡಿಬಿಡುದು. ಇಷ್ಟೆಲ್ಲಾ ಆಗುಹೊತ್ತಿಗೆ ೯ ಗಂಟೆ ಮೇಲೆ ಆಗಿಹೋಗಿರುತ್ತೆ. ಆಮೇಲೆ ಯಾವುದೋ ಒಂದು ಪುಸ್ತಕನ ಕೈಯಲ್ಲಿ ಹಿಡಿದು ಓದುವುದಕ್ಕೆ ಪ್ರಾರಂಭಿಸುವುದು. ಸ್ವಲ್ಪ ಹೊತ್ತಿನಲ್ಲೆ ತೂಕಡಿಸು ವುದಕ್ಕೆ ಸುರು. ಹಾಸಿಗೆ ಹಾಸಿಬಿಟ್ಟು ಮಲಗಿಕೊಂಡು ಓದೋಣ ಅಂತ ಹಾಸಿಗೆ ಮೇಲೆ ಮಲಗಿಕೊಂಡು ಓದುದಕ್ಕೆ ಸುರು. ನಿದ್ದೆ ಬಂದು ಪುಸ್ತಕ ಒಂದು ಕಡೆ ಬಿದ್ದಿರುತ್ತೆ, ದೀಪ ಒಂದು ಕಡೆ ಉರಿತಾ ಇರತ್ತೆ. ಯಾವಾಗಲೋ ಎಚ್ಚರ ಆದಾಗ ಎದ್ದು ದೀಪ ಆರಿಸಿಬಿಟ್ಟು ಮಲಗಿಕೊಳ್ಳುದು.

ಇದು ಕಾಲೇಜ್ ವಿದ್ಯಾರ್ಥಿಯ ಕೆಲಸ.

—ಒಬ್ಬ ಜೂನಿಯರ್ ಆರ್ಟ್ಸ್ರ್.

## ೧೨. ಕಾಲೇಜಿನ ವಿದ್ಯಾರ್ಥಿಗಳು

ಕಾಲೇಜಿಗೆ ಓದುವುದಕ್ಕೆ ಬಂದವರೆಲ್ಲಾ ಕಾಲೇಜು ವಿದ್ಯಾರ್ಥಿಗಳೆನ್ನಿಸಿ ಕೊಳ್ಳುತ್ತಾರೆ. ಹೀಗೆ ಬಂದವರಲ್ಲಿ ಕೆಲವರು ಉಪಾಧ್ಯಾಯರನ್ನು ನಿಂದಿಸು ವವರು, ಕೆಲವರು ಕ್ಲಾಸಿನಲ್ಲಿ ಕೂತುಕೊಂಡು ಆ ಮಾತು ಈ ಮಾತು ಆಡಿ ಕೊಂಡು ೫ ಗಂಟೆ ಆದನಂತರ ಮನೆಗೆ ಹೋಗುವವರು. ಮತ್ತೆ ಕೆಲವರು 'ರಜ ಬೇಕು ಸಾರ್' ಬಂದು ಕೇಳಿಕೊಂಡು ಹೋಗುವವರು. ಇನ್ನು ಕೆಲವರು ಹೇಳದೆ ಕೇಳದೆ ಚಕ್ಕರ್ ಕೊಡುವವರು. ಹೀಗೆಯೇ ಅನೇಕ ತರಹ ವಿದ್ಯಾರ್ಥಿ ಗಳು ಬರುವರು.

ಕೊನೆಗೆ, ಪರೀಕ್ಷೆಯ ದಿನ ಬಂದರೆ, ಮನೆಯಲ್ಲಿ ಹೆದರಿಸಿ ಬೆದರಿಸಿ ೯ ಗಂಟೆಗೇನೆ ಅಡಿಗೆ ಮಾಡಿಸಿ ಊಟಮಾಡಿಕೊಂಡು ಬರುವುದು. ಮನೆಯಲ್ಲಿ 'ಪಾಪ, ಹುಡುಗ ಏನೋ ದೊಡ್ಡ ಪ್ರೊಫೆಸರ್ ಆಗುತ್ತಾನೆ' ಎಂದು ತಿಳಿದು ಕೊಂಡಿರುವುದು. ಇವನನ್ನು ನೋಡಿದರೆ, ಪರೀಕ್ಷೆಯಲ್ಲಿ ಏನೂ ಬರೆಯದೆ, ಸಮಯ ಸಿಕ್ಕಿದಾಗ ಅವರಿವರನ್ನು ಕೇಳಿ ಬರೆಯುವುದು. ಸೂಪರ್‌ವೈಸರ್ ಆಕಡೆ ಹೋದಾಗ, ಸಣ್ಣ ಸಣ್ಣ ಚೀಟಿಗಳಲ್ಲಿ ಬರೆದುಕೊಂಡು ಬಂದುದನ್ನು ತೆಗೆದು ನೋಡಿಕೊಳ್ಳುವುದು. ಅವರು ಸ್ವಲ್ಪ ತಿರುಗಿದರೆ, ಪುಸಕ್ ಎಂತ ಜೇಬಿ ನೊಳಕ್ಕೆ ಹಾಕಿಕೊಳ್ಳುವುದು. ಇದು ಈಗಿನ ಸ್ಥಿತಿ.

ಹೀಗೆ ಹೇಳಿದೆನೆಂದು ಯಾರೂ ತಮಗೆ ಅನ್ವಯಿಸುತ್ತದೆಂದು ತಿಳಿದು ಕೊಳ್ಳಬಾರದು. ನಾನು ಮೊದಲೇ "ಕೆಲವರು" ಎಂದು ಹೇಳಿದ್ದೇನೆ.

—ಒಬ್ಬ ಕಾಲೇಜ್ ವಿದ್ಯಾರ್ಥಿ.

## ೧೩. ಹಣೇ ಬರಹ

"ಹಣೇ ಬರಹ" ಎಂದರೆ ಏನು? ಹಣೆಯ ಮೇಲೆ ಏನಾದರೂ ದೊಡ್ಡ ದಾಗಿ ಕಾಣುವ ಹಾಗೆ ಬರೆದಿರುತ್ತಾರೆಯೆ? ಇದ್ದರೂ ಇರಬಹುದು. ಇಲ್ಲ ದಿರಲೂ ಬಹುದು. ಪಾಪಿಗಳಿಗೆ ತಿಳಿಯುವುದಿಲ್ಲ. ಕೆಲವರಿಗೆ ಗೊತ್ತಾಗುತ್ತದೆ. "ಮನುಷ್ಯರು ಹುಟ್ಟುವಾಗಲೆ ಅವರ ಗತಿ ಹೀಗೇಂತ ಬ್ರಹ್ಮ ಬರೆದಿರುತ್ತಾನೆ" ಎಂದು ದೊಡ್ಡವರು ಹೇಳುತ್ತಾರೆ. ಏನೋಪ್ಪ, ಅದು ಯಾರಿಗೆ ಗೊತ್ತು? ದೇವರೇ ಬಲ್ಲ. ಬರೆದಿರುವುದು ನಿಜವೋ, ಸುಳ್ಳೋ! ದೊಡ್ಡವರು ಹೇಳಿಬಿಟ್ಟರೆ ನಂಬುವುದಕ್ಕೆ ಆಗುವುದಿಲ್ಲ. ಹಾಗಾದರೆ, ಎಲ್ಲರೂ ಪಾಪಿಗಳು, ಹೇಳುವವರು ಮಾತ್ರ ಪುಣ್ಯವಂತರೇನೊ! ಅವರು ಹೇಳುವುದನ್ನು ನಾವುಗಳು ನಂಬಿದರು ಕೂಡ, ಕೆಲವು ಸಲ "ಅಯ್ಯೋ, ಯಾರ್ತಾನೆ ಏನು ಮಾಡೋಕಾಗುತ್ತೆ? ಅದೆಲ್ಲಾ ನನ್ನ ಹಣೆಬರಹ" ಎಂದು ಹೇಳುತ್ತಾರೆ.

ಅವನು, ನಮ್ಮ ಪಕ್ಕದ ಮನೆ ರಾಮು, ಪಾಪ, ಕಟ್ಟಿದ್ದ ಮೂವತ್ತು ರೂಪಾಯಿನ ಪರೀಕ್ಷೆಗೆ. ಪಾಪ, ಬಹಳ ಓದುತಾ ಇದ್ದ. ಅವನು ಖಂಡಿತ ಫಸ್ಟ್ ಕ್ಲಾಸಿನಲ್ಲೆ ಪಾಸಾಗುತ್ತಾನೆ ಎಂದು ಎಲ್ಲರೂ ತಿಳಿದುಕೊಂಡಿದ್ದರು. ಅವನೇನೋ ಓದಿದಾ, ಓದಿದಾ. ಆದರೂ, ಅವನ ಹಣೆಬರಹ ಇತ್ತಲ್ಲ, ಮೊದಲೇ ಬ್ರಹ್ಮ ಬರೆದದ್ದು, ಅದು ಅವನನ್ನು ಬೀಳಿಸಿಯೆಬಿಟ್ಟಿತು. ಪಾಪ, ಫೇಲ್ ಆಗಿಹೋದ. ಯಾರೂ ಏನೂ ಮಾಡುವುದಕ್ಕೆ ಆಗಲಿಲ್ಲ. ಆ ಹಣೆ ಬರಹವನ್ನ ಅಳಿಸುವುದಕ್ಕೆ ಆಗುವುದಿಲ್ಲವಂತೆ. ಮೊದಲೇ ಓದಿಕೊಂಡು, ಪಾಪ, ಆ ಹುಡುಗ, ಫೇಲಾದ ಹುಡುಗ, ಆ ವರ್ಷ ಕಟ್ಟದೆ ಮುಂದಿನ ವರ್ಷ ಕಟ್ಟಿದ್ದರೆ ಅವರ ತಂದೆಗೆ ದುಡ್ಡು ಉಳಿಯುತ್ತಿತ್ತು. ನೋಡಿ, ಆ ಹಣೆಬರಹ ದಲ್ಲಿ ತಂದೆಗೆ ಬರೆದಿದ್ದಕ್ಕೂ ಮಗನಿಗೆ ಬರೆದಿದ್ದಕ್ಕೂ ಬಹಳ ಹತ್ತಿರದ ಸಂಬಂಧ ಇತ್ತು ಎಂದು ಕಾಣುತ್ತೆ. ಪಾಪ, ಆ ಹುಡುಗನ ತಂದೆಗೆ ದುಡ್ಡು ಹಾಳಾಯ್ತು.

ಆ ಹುಡುಗ, ಅಷ್ಟು ಓದಿದರೂ ಪಾಸಾಗಲಿಲ್ಲವಲ್ಲಾ ಎಂದು ಪೇಚಾಡಿ ಆಡಿ ನಶಿಸಿಹೋದ.

ಆ ಹಣೆಬರಹ ಬರೆಯೋ ಬ್ರಹ್ಮನಿಗೆ ಸ್ವಲ್ಪವೂ ಬುದ್ಧಿಯಿಲ್ಲವೆಂದು ಕಾಣುತ್ತದೆ. ಭೂಮಿಯ ಮೇಲೆ ಇರುವ ಜನ ತಾವು ಹಿಡಿದ ಕೆಲಸವು ಆಗದೆ ಹೋದರೆ ಎಷ್ಟು ಪೇಚಾಡುತ್ತಾರೆ ಎಂದು ಅವನು ಯೋಚಿಸುವುದೇ ಇಲ್ಲವೇನೊ! ಅವನಿಗೆ ಹಣದ ಬೆಲೆಯೇ ತಿಳಿಯದೇನೋ! ಇನ್ನು ಮೇಲಾದರೂ ಈಗಿನವರು, ನೊಂದವರು, ಬ್ರಹ್ಮನ ಮುಖ ತಿವಿದು, ಬಣ್ಣ ಬ್ರಷ್ ಕೊಟ್ಟು, ದಪ್ಪನಾಗಿ ಎಲ್ಲರಿಗೂ ಕಾಣುವಂತೆ ಬರೆಯುವಂತೆ ಹೇಳಿರಿ.

ಬ್ರಹ್ಮನಿಗೆ ನಿಜವಾಗಿಯೂ ಬುದ್ಧಿಯಿಲ್ಲ.

—ಕೆ. ಎಸ್. ವಾಸುದೇವರಾವ್.

## ೧೪. ಪರೀಕ್ಷೆ ಯೂಗ

ಏನೇ ಆಗಲಿ, ನೋಡಿ, ಪರೀಕ್ಷೆ ಪಾಸ್ ಮಾಡಿದರೇನೆ ಮುಖ ತೋರಿಸುವುದು ಮತ್ತೊಬ್ಬರಿಗೆ. ನಮ್ಮವರೊ, ಏನು ಹೇಳೋಣಾಪ್ಪ, ಪರೀಕ್ಷೆ ಹೊಡೆದ ಎಂದರೆ ಸಾಕು.—ಬುದ್ಧಿವಂತ ಎಂದು ತಿಳಿದುಕೊಂಡುಬಿಡುವರು. ಫೇಲಾದವರೇನು ಬುದ್ಧಿವಂತರಲ್ಲವೆಂದೊ! ಓದಿದ್ದೇ ಓದೋದು ಪುಗಸಟ್ಟೇನೆ? "ಮನೆಯಲ್ಲಿ ಅಮ್ಮನ ಕಾಟ, ಹೊರಗೆ ಗುಮ್ಮನ ಕಾಟ" ಎಂದ ಹಾಗೆ ಹೊರಗೆ ಬಂದರೆ ಸ್ನೇಹಿತರು ಹಾಸ್ಯಮಾಡುವುದು, ಮನೆಯಲ್ಲಿದ್ದರೆ ಅಪ್ಪ ಅಮ್ಮಂದಿರು ಬೈದಾಡುವುದು.

ಏನೋ ಹೋಗಲಿ, ಒಂದು ವರ್ಷ ಫೇಲಾಯಿತು. ಎರಡನೆಯ ವರ್ಷವೂ ಢುಂ ಎನ್ನಬೇಕೆ! ಅದೂ ಮೂರು ಸಬ್ಜೆಕ್ಟಿನಲ್ಲಿ! "ಈ ವರ್ಷ ಆದದ್ದು ಆಗಲಿ, ಎಫ್.ಎ. ಕಟ್ಟಿಯೇ ಬಿಡುತ್ತೇನೆ" ಎಂದುಕೊಂಡೆ. ಆದರೆ ಮನೆಯವರು "ಏನೋಪ್ಪಾ, ಬಿಟ್ಟುಬಿಡು. ಓದಿದಷ್ಟೆ ಸಾಕು. ಎಲ್ಲಾದರೂ ಚಾಕರಿ ಗೀಕರಿ ಇದ್ದರೆ ನೋಡಿಕೊಂಡು ಸುಖವಾಗಿರು" ಎಂದರು. ನನಗೂ ಅದೆ ಇಷ್ಟವೆ. ಆದರೆ ಓದದೆ ಬಿಡುವುದಕ್ಕೆ ಮನಸ್ಸಿಲ್ಲ. ಪಾಸುಮಾಡಿಬಿಟ್ಟೇ ಬಿಡುವುದು—ಎಂದೆನಿಸಿತು. ಹಾಗೂ ಹೀಗೂ ಮಾಡಿ ಮೂವತ್ತು ಕಟ್ಟಿದೆ.

ಎಫ್.ಎ. ಪರೀಕ್ಷೆ ಬಿ.ಎ.ಗಿಂತಲೂ—ಅದೇಕೆ ಎಂ. ಸಿ. ಎಸ್. ಕಾಂಪಿಟಿಟಿವ್ ಪರೀಕ್ಷೆಗಿಂತಲೂ—ಕಷ್ಟವೆಂದು ದೊಡ್ಡ ದೊಡ್ಡ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವರೂ ಹೇಳುವರು.

ಜನವರಿ ಬಂತು. ಯಾಗಕ್ಕೆ ಮೊದಲು. ಪರೀಕ್ಷೆಯಾಗದ ಯೂಪ ಸ್ತಂಭಕ್ಕೆ ಯಾವ ಪುಸ್ತಕ ಕಟ್ಟಬೇಕು? ಕನ್ನಡ ಪುಸ್ತಕವನ್ನು ಕಟ್ಟಲೆ? ಬೇಡ, ಪಾಪ, ಕನ್ನಡ ನಮ್ಮದು! ನಮ್ಮ ತಾಯಿಯ ಹಾಗೆ ಪವಿತ್ರ. ಇಂಗ್ಲಿಷ್ ಪುಸ್ತಕಗಳೆ ಸರಿ! ಏಕೆಂದರೆ, ಅವರು ನಮ್ಮವರಲ್ಲ. ನಮ್ಮದು ಅಲ್ಲದಿರುವುದನ್ನು ಬೆಂಕಿಯಲ್ಲಿ ಹಾಕಿಬಿಡಬೇಕು—ಎಂದುಕೊಂಡು ರಾತ್ರೆ ಯೆಲ್ಲಾ ಓದಿದ್ದಾಯಿತು.

ಮಾರ್ಚಿ ಹತ್ತಿರ ಬಂದಹಾಗೆಲ್ಲಾ ಯಾಗದ ಕಾಟವೂ ಬಲವಾಯಿತು. ಯಾಗ ಏನೂ ಕೆಲಸಕ್ಕೆ ಬಾರದ್ದು ಎಂದುಕೊಂಡಿದ್ದೆ. ಏನೂ ಇಲ್ಲ; ಯಾಗ ಮಾಡಿದ್ದಕ್ಕೂ ಸಂಕಲ್ಪ ಈಡೇರಿದ್ದಕ್ಕೂ ಸರಿಹೋಯಿತು. ನನಗೂ ಪಾಸಾಯಿತು.

—ಎಚ್. ಸುಬ್ಬರಾವ್.

## ೧೫. ಎರಡು ಕಾಸಿನ ದೋಸೆ

ಎಲ್ಲಿ ಹೋಯಿತು ಎರಡು ಕಾಸಿನ ದೋಸೆಯ ಕಾಲ? ಆ ರುಚಿ, ಆ ಮೃದು, ಆ ಪದಾರ್ಥ ಇವೆಲ್ಲಾ ಎಲ್ಲಿ ಹೋಯಿತು?

ಈಗ ಯಾವ ಹೋಟಲಿಗೆ ಹೋದರೂ (ಸಾದಾ) ದೋಸೆಗೆ ೩ ಕಾಸು. ಕೆಲವು ಹೋಟಲುಗಳಲ್ಲಿ ಆರುಕಾಸು. ಈಗ ಕೊಡುವುದು ೩ ಕಾಸಿಗೆ ದೋಸೆಯಲ್ಲ; ದಕಲ್ಪಟ್ಟಿ! ಮೋಸ! ಮೋಸ!

ಆದರೆ ಎಲ್ಲಾ ಹೋಟಲುಗಳನ್ನೂ ಬಯ್ಯಲು ಸಾಧ್ಯವಿಲ್ಲ. ಎಲ್ಲೋ ಸಂದಿಗಳಲ್ಲಿ ಮಾತ್ರ ಒಂದೆರಡು ಎರಡು ಕಾಸಿನ ದೋಸೆಯ ಹೋಟಲುಗಳಿವೆ. ಅವರುಗಳಿಗೂ ಸ್ವಲ್ಪ ತಲೆ ಏರಿದೆ ಎಂದು ಕಾಣುತ್ತೆ. ಏತಕ್ಕೆಂದರೆ, ಎರಡು ಕಾಸಿಗೆ ದೋಸೆಯಾದರೂ ಪಲ್ಯ ಬೆಣ್ಣೆಗೆ ಮಾಮೂಲಿನಂತೆ ಮೂರು ಮೂರು ಕಾಸು. ಅವರು ಕೂಡ ಸ್ವಲ್ಪ ಆಟ ಕಟ್ಟುತ್ತಾರೆ. ಈಗಿನ ಕಾಲದ ಕೆಲವು ಹೋಟಲುಗಳಲ್ಲಿ ನಾಜೋಕು ತೋರಿಸಿಕೊಳ್ಳುವುದಕ್ಕೆ ಒಂದಾಣೆಗೆ ಒಂದು

ದೋಸೆ. ಯಾರಪ್ಪನ ಮನೆ ದುಡ್ಡು ಹೋಗಬೇಕು? ಅವನಿಗೇನು? ಮೂರು ಕಾಸು ಬಾಳುವ ದೋಸೆ ಕೊಟ್ಟು "ಒಂದೂಕಾಲಾಣೆ ಕೊಡು, ತಮ್ಮಯ್ಯಾ" ಎನ್ನುತ್ತಾನೆ. ದೋಸೆ ಹಿಂದಿನ ಕಾಲದ ಪದ್ಧತಿಯಂತೆ ಎರಡು ಕಾಸಿಗೆ ಇಳಿಯಲೆಬೇಕು, ನಮ್ಮ ಜನ ಬದುಕಬೇಕು.

ಕೆಲವರಿಗೆ ಎರಡು ಕಾಸಿನ ದೋಸೆ ತಿನ್ನಲು ಅವಮಾನ. ಪಾಪ, ಏನು ಮಾಡುತ್ತಾರೆ, ಅವರು ಅಂತಹ ಡಬ್ಬಲ್ ಡಕಾಯಿತಿ ಮನುಷ್ಯರು. ಸೂಟು ಹಾಕಿಕೊಂಡಮಾತ್ರಕ್ಕೇ ಒಂದಾಣೆ ದೋಸೆ ತಿನ್ನಬೇಕೆ? ವಿಧಿಯಿಲ್ಲ, ತಿನ್ನಬೇಕಾಗಿ ಬಂದಿದೆ. ಈ ಪದ್ಧತಿ ಯಾವತ್ತು ಹೋಗುತ್ತೋ ಕಾಣೆ. ನನ್ನ ಜೀವಮಾನದಲ್ಲಿ ಪುನಃ ಎರಡು ಕಾಸಿನ ದೋಸೆ ಯಾವತ್ತು ಷುರುವಾಗುತ್ತೋ ನೋಡಿಯೇಬಿಡುತ್ತೇನೆ.

—ಬಿ. ಎಲ್. ರಾಮರಾವ್.

## ೧೬. ಅದೇ ಕಾಫಿ, ಕಡಿಮೆ ಬೆಲೆ

ಸುಮಾರು ಹದಿನೈದು ದಿವಸಗಳ ಹಿಂದೆ, ಒಂದು ದಿನ, ನಾನು Economics ಎಂದರೆ ಅರ್ಥಶಾಸ್ತ್ರದ ಕ್ಲಾಸಿನಲ್ಲಿ ಕೂತಿರುವಾಗ ನನ್ನ ಬಲಗಡೆಯಿಂದ ಯಾರೋ ಒಂದು ಕಾಗದವನ್ನು ನನ್ನ ಮುಂದಿಟ್ಟರು. ಯಾರು ಕೊಟ್ಟರೆಂಬುದು ತಿಳಿಯಲಿಲ್ಲ. ಅದರಲ್ಲಿ ಸುಮಾರು ಮೂವತ್ತು ಪಂಕ್ತಿಗಳಷ್ಟು ಇಂಗ್ಲಿಷು ಬರೆವಣಿಗೆ ಬರೆದಿತ್ತು. ಅದರ ಅಭಿಪ್ರಾಯವೇನೆಂದರೆ: ಯೂನಿಯನ್ ರೆಸ್ಟೋರೆಂಟಿನಲ್ಲಿ ಕಾಫಿಗೆ ೯ ಕಾಸು ಮಾಡಿದ್ದಾರೆ. ಅದು ಅನೇಕರಿಗೆ ಅನಾನುಕೂಲವಾಗಿರುವುದರಿಂದ ೬ ಕಾಸಿಗೆ ಇಳಿಸಬೇಕೆಂದೂ ಅದಕ್ಕೆ ಒಪ್ಪಿದರೆ ಆ ಕೆಳಗೆ ನನ್ನ ರುಜು ಮಾಡಬೇಕೆಂದೂ ನಮೂದಿಸಿತ್ತು. ಹಾಗೆಯೇ ಅನೇಕರು ತಮ್ಮ ನಾಮಾಂಕಿತಗಳನ್ನೂ ಅದರಲ್ಲಿ ಕೆತ್ತಿದ್ದರು.

ನಾನು ಈ ಸಂಭ್ರಮದಲ್ಲಿರುವಾಗ, ನನ್ನ ಮುಂದೆ ಏನೋ ಕೆಲಸ ಮಾಡುತ್ತಿದ್ದವನು ಹತ್ತಿರಕ್ಕೆ ಬಂದು, "ರೀ, ಬೇಡ್ರಿ. ಹೆಸರ್ಬರಿಬೇಡಿ. ೯ ಕಾಸೇ ಇದ್ಕೊಂಡ್ಹೋಗ್ಲಿ ಬಿಡ್ರಿ" ಎಂದು ಗಟ್ಟಿಯಾಗಿ ಕೂಗಿದನು. ಇನ್ಯಾರೋ ಒಬ್ಬರು ಮಹಾತ್ಮರು ಇನ್ನೊಂದು ಕಡೆಯಿಂದ ಬಂದು "ಹಾಕ್ರಿ, ಸುಮ್ನೆ. ಅವರ ಮಾತೆಲ್ಲ ಕೇಳ್ಬೇಡಿ" ಎಂದರು. ನಾನು ಏನೂ ಮಾಡಲಾರದೆ

ಆ ಕಡೆಗೊಂದುಸಾರಿ ಈ ಕಡೆಗೊಂದುಸಾರಿ ನೋಡುತ್ತ ಪೆಚ್ಚಾಗಿ ಕುಳಿತು ಬಿಟ್ಟೆ. ಅಂತೂ ಇಂತೂ ಕಡೆಯಲ್ಲಿ ಮಾತಾಡಿದವರ ಹಠವೇ ಗೆದ್ದು ಹೋಯಿತು. ಎಂದರೆ, ನನ್ನ ಹೆಸರನ್ನು ಅದರಲ್ಲಿ ಬರೆದೆ.

ಇದೇ ಮೊದಲಾಗಿ ಹದಿನೈದು ದಿವಸದಿಂದಲೂ ಎಲ್ಲಿ ಇಬ್ಬರು ಸೇರಿದರೂ ಗುಸಗುಸನೆ ಮಾತು. ಹತ್ತಿರಕ್ಕೆ ಹೋದ ತಕ್ಷಣವೇ "ಓಟ್‌ಮಾಡಿ, ಅಪ್ಪಾ. ಮೂರು ಕಾಸು ಉಳಿಯುತ್ತೆ. ಹಾಗೇ ಎರಡು ದಿವಸ ಉಳಿಸಿದರೆ ಮೂರನೆಯ ದಿವಸ ಬಿಟ್ಟಿ ಸಿಕ್ಕಿದ ಹಾಗಾಗುತ್ತೆ" ಎನ್ನುವರು. ಇಲ್ಲದಿದ್ದರೆ, "ರೀ, ಬೆಲೆ ೬ ಕಾಸಿಗೆ ಇಳಿಸಿದ ತಕ್ಷಣ ಬಚ್ಚಲು ನೀರಿನ ಹಾಗೆ ಆಗಿಬಿಡುತ್ತೆ ಕಾಣ್ರಿ, ಕಾಫಿ. ಇದಂತೂ ಖಂಡಿತ" ಎನ್ನುವರು.

ಇದನ್ನೆಲ್ಲಾ ಕೇಳಿ ನನಗೆ ಬಹಳ ವ್ಯಾಕುಲವುಂಟಾಯಿತು. ಇಷ್ಟೊಂದು ಸಣ್ಣ ವಿಷಯಕ್ಕಾಗಿ ಹುಡುಗರು ತಮ್ಮ ಒಗ್ಗಟ್ಟನ್ನು ಬಿಟ್ಟು ಎರಡು ಪಂಗಡ ಗಳಾಗಿ, ಒಬ್ಬರಲ್ಲಿ ಮತ್ತೊಬ್ಬರು ವೈರವನ್ನು ಕಟ್ಟಿಕೊಳ್ಳುತ್ತಿದ್ದಾರೆ. ಅದು ಹೇಗೋ, ಏನೋ, ನಾನು ಯಾವ ಕಡೆ ಓಟುಮಾಡಲೂ ದಿಗಿಲು.

ಇದರ ನಡುವೆ, ಈ ದಿವಸ ಕೈಗೊಂದು ಚೀಟಿಯನ್ನು ಕೊಟ್ಟು ಜೂನಿಯರ್ ಬಿ.ಎ. ಹಾಲಿಗೆ ಬರಬೇಕೆಂದೂ, ಬಂದು ಮೂರು ಕಾಸು ಕಡಿಮೆ ಮಾಡುವುದರ ಪರವಾಗಿ ಓಟುಕೊಡಬೇಕೆಂದೂ ಬಲವಾಗಿ ಹೇಳಿದ್ದಾರೆ. ಅದರ ಪ್ರಕಾರ, ಏನಾದರೂ ಆಗಲಿ ಎಂದು ಹೋಗಿ ಓಟು ಮಾಡಿಯೇ ಮಾಡುತ್ತೇನೆ. ಇದು ಮುಖ್ಯ. ಏಕೆಂದರೆ, ಕಡಿಮೆ ಬೆಲೆಯಲ್ಲಿ ಅದೇ ಕಾಫಿ ಸಿಕ್ಕುವುದಾದರೆ ಯಾರಿಗೆ ತಾನೆ ಆಸೆಯಿಲ್ಲ!

—**ಟಿ. ಎಲ್. ಚಿಕ್ಕಲಿಂಗಯ್ಯ.**

## ೧೭. ನನ್ನ ಗೆಳೆಯರು

ನನ್ನ ಗೆಳೆಯರು ಬಹಳ ಮಂದಿ. ಒಬ್ಬರು ಇನ್ನೊಬ್ಬರನ್ನು ಹೋಲುವುದಿಲ್ಲ. ಒಬ್ಬೊಬ್ಬರು ಒಂದೊಂದಕ್ಕೆ ಮುಖ್ಯಸ್ಥರ ಹಾಗೆ ಕಾಣುತ್ತಾರೆ.

ರಂಗನಾಥ ಐಯಂಗಾರ್‍ಯ ಎಂಬೊಬ್ಬ ಸ್ನೇಹಿತ. ಬಹಳ ತಮಾಷೆ ಮನುಷ್ಯ. ಒಂದು ಸಲ ಕ್ಲಾಸಿಗೆ ಲೇಟಾಗಿ ಬಂದ. ಮೇಷ್ಟ್ರು "ಯಾಕೊ,

ಲೇಟಾಗಿ ಬಂದೆ?" ಎಂದರು. ಅದಕ್ಕೆ ಅವನು "ಸ್ವತ್ತಾಯ್ತು, ಸಾರ್" ಎಂದ. ಬಹಳ ಗಾಬರಿ ಮನುಷ್ಯ. "ಹೊತ್ತಾಯ್ತು" ಎನ್ನುವುದಕ್ಕೆ "ಸ" ಸೇರಿಸಿ "ಸ್ವತ್ತಾಯ್ತು" ಎಂದ. ಅವತ್ತಿನಿಂದ ಷುರು, ಎಲ್ಲವನ್ನೂ ಸಕಾರದಿಂದ ಮೊದಲು ಮಾಡುವನು. 'ನಮಸ್ಕಾರ' ಎನ್ನುವುದಕ್ಕೆ 'ಸ್ನಮಸ್ಕಾರ' ಇವೇ ಮೊದಲಾದುವು.

ಇನ್ನೊಬ್ಬ ಬಹಳ ಬುದ್ಧಿವಂತ. ಆದರೆ ಬಹಳ ಸೋಮಾರಿ, ಮಾರು ನಡೆಯಲು ಆರು ನಿಮಿಷ ತೆಗೆದುಕೊಳ್ಳುವ ಮನುಷ್ಯ. ಕೊಳಕ ಅಂದರೆ ಕೊಳಕ. ಕಾಲೇಜಿಗೆ ಬಂದಿದ್ದರೂ ಕೊಳಕಾಗುವುದು ಬಿಟ್ಟಿಲ್ಲ. ಒಂದು ದಿನ ಏಳುವುದು ಹೊತ್ತಾಯಿತು. ಆದ್ದರಿಂದ ಮುಖ ತೊಳೆದುಕೊಳ್ಳದೆ ಬಂದಿದ್ದ.

ಇನ್ನೊಬ್ಬ ಸ್ನೇಹಿತ ಇದ್ದಾನೆ. ಯಾರ ಜೊತೆಯಾದರೂ ಸೇರಬಹುದು. ಆದರೆ ಮಾತ್ರ, ಅವನ ಜೊತೆ ಸೇರಿದರೆ, ಅವತ್ತು, ಅರೆಪಾವು ಅನ್ನ ಹೆಚ್ಚಾಗಿ ತಿನ್ನಬಹುದು. ದಪ್ಪಗಿರುವವರನ್ನೂ ಸಣ್ಣಗೆ ಮಾಡುವ ಶಕ್ತಿ ಅವನಲ್ಲಿದೆ. ನೀವೂ ಅವನ ಸ್ನೇಹ ಮಾಡಿದರೆ ಗೊತ್ತಾಗುತ್ತೆ. ಮನುಷ್ಯ, ಜೊತೇಲಿ ಹೋಗುತ್ತಾ ಇದ್ದರೆ, ಸುಮ್ಮನಿರದೆ ರಟ್ಟೆ ಹಿಡಿದು ಅಲ್ಲಾಡಿಸಿಬಿಡುತ್ತಾನೆ. ಮಾತನಾಡುವಾಗ, ಸುಮ್ಮನೆ ಹೇಳಿದರೆ ಕೇಳುವುದಿಲ್ಲವೆ? ಅಲ್ಲಾಡಿಸಿಯೇ ಮಾತನಾಡಿಸುವುದು ಯಾವಾಗಲೂ.

—ಟಿ. ಎನ್. ರಾಮಚಂದ್ರನ್.

## ೧೮. ನನ್ನ ಗೆಳೆಯ

ನನ್ನ ಗೆಳೆಯ, ಅಂದರೆ, ಪ್ರತಿ ತಿಂಗಳೂ ನನ್ನ ಗೋಳುಹುಯ್ಯುತ್ತಾ ನಲ್ಲ ದುಡ್ಡಿಗೆ, ಅವನು. ಅವನೀಗ ನನ್ನ ಜೊತೇಲೇ ನಮ್ಮ ಹಾಸ್ಟೆಲಿನಲ್ಲೇ ಇದ್ದಾನೆ. ಸದ್ಯಃ ದೇವರ ದಯದಿಂದ ನಾನೂ ಅವನೂ "ರೂಮ್‌ಮೇಟ್ಸ್" ಅಲ್ಲ.

ಅವನಿಗೂ ನನಗೂ ಸ್ನೇಹ ಆದದ್ದು "ಗಿಡಾ ಬೆಳೆದ ಹಾಗೆ ಬೆಳೀ ಬೇಕೂ" ಅಂತ ಜಾರ್ಜ್ ವಾಷಿಂಗ್‌ಟನ್ ಹೇಳಿದ್ದಾನಲ್ಲ, ಹಾಗೆ. ಹಾಸ್ಟೆಲಿಗೆ ಬರುವುದಕ್ಕೆ ಮೊದಲು ನಾನವನನ್ನು ನೋಡಿರಲಿಲ್ಲ, ಅವನು ನನ್ನನ್ನು ನೋಡಿರಲಿಲ್ಲ. ಬಂದಮೇಲೆ ಬಳ್ಳಿ ಬೆಳೆದ ಹಾಗೆ ಬೆಳೆದುಹೋಯಿತು ಸ್ನೇಹ

ಎನ್ನುವುದು. ಮೊದಲು, "ಏನ್ರಿ, ಬನ್ರಿ" ಎನ್ನುತ್ತಿದ್ದವರು ಆಮೇಲೆ "ಏನಯ್ಯ, ಬಾರಯ್ಯ" ಎನ್ನುವುದು ಶುರುವಾಗಿ, ಮಧ್ಯೆ ಮಧ್ಯೆ ಬಾಯಿತಪ್ಪಿ "ಏನೋ" ಎಂದುಬಿಟ್ಟು ನಾಲಿಗೆ ಕಚ್ಚಿಕೊಳ್ಳುವುದು ನಡೆಯುತ್ತಿತ್ತು. ಆಮೇಲೆ, ಗೊತ್ತಿದೆಯಲ್ಲ, "ಏನೋ" ಎನ್ನುವುದು ಬಹಳ ಚೆನ್ನಾಗಿ ಕಾಣುತ್ತದೆ ಎಂದು ಅದೇ ಬಳಕೆಯಾಯಿತು.

ಹೀಗೇ ನಡೆಯುತ್ತಾ, ನಡೆಯುತ್ತಾ, ಮೊದಲು ಮೊದಲು ಗೌರವದಿಂದ ದುಡ್ಡು ಕೇಳುತ್ತಿದ್ದು ಆಮೇಲೆ ಬಲಾತ್ಕಾರಕ್ಕೆ ಪ್ರಾರಂಭವಾಯಿತು. ಈಗೀಗಂತೂ ನಾನು 'ಬೇಡ' ಎಂದರೂ ಕೇಳದೆ 'ಟ್ರಂಕ್' ತೆಗೆದು ದುಡ್ಡಿದ್ದರೆ—ಇರುವುದು ಅಪರೂಪ—ತೆಗೆದುಕೊಂಡು ಹೋಗುತ್ತಾನೆ. ಟವಲ್ ಗಿವಲ್ ಆಗ ತಾನೆ ಏನಾದರೂ ಮಡಿಯಾಗಿ ಬಂದಿದ್ದರೆ ಅದನ್ನು ಒಂದೇ ನಿಮಿಷದಲ್ಲಿ ಪಡಚಮಾಡಿಬಿಡುತ್ತಾನೆ. ಅವನ ಬಟ್ಟೆ ಬಂದಾಗ ನಾನು ಮುಯ್ಯಿ ತೀರಿಸಿಕೊಳ್ಳುವುದು, ನನ್ನ ಬಟ್ಟೆ ಬಂದಾಗ ಅವನ ಸರದಿ—ಹೀಗಾಗಿ, ಮಡಿಯ ಬಟ್ಟೆ ಬಂದರೂ ಒಬ್ಬರ ಹತ್ತಿರವೂ ಒಂದು ಸರಿಯಾದ ಬಟ್ಟೆಯಿರುವುದಿಲ್ಲ.

ಇಷ್ಟಾದರೂ ಒಬ್ಬರಿಗೊಬ್ಬರು ಬಹಳ ಸಹಾಯಮಾಡುತ್ತೇವೆ. ಕೈಯಲ್ಲಿ ಕಾಸು ಗೀಸು ಇಲ್ಲದಾಗ ಒಬ್ಬರಿಗೊಬ್ಬರು ಕೊಡುತ್ತೇವೆ. ಇಬ್ಬರೂ "ಮುಳುಗೋನ್ ಬೆನ್ನಿಗ್ಬೆಂಡಿದ್ದಾಗೆ" ಒಬ್ಬರಿಗೊಬ್ಬರು.

—ಆರ್. ಕೆ. ಪಾಣಿ.

## ೧೯. ನಾನು ಅನಂತನಿಗೆ ಬರೆದ ಕಾಗದ

ಮೈಸೂರು
೫—೧೨—೩೮.

ಅನಂತ,

ನೀನು ಬರೆದ ಕಾಗದ ಬಂತು. ಅಲ್ಲಾ ಕಣೊ, ನಿನಗೆ ಕಾಗದ ಬರೆಯೋಕೇ ಬರೊಲ್ವಲ್ಲಾ, ನೀನು S.S.L.C. ಪಾಸು ಮಾಡೋದು ನಿಜವೇನೆ? ನಿನ್ನ ಹ್ಯಾಂಡ್‌ರೈಟಿಂಗೋ ಬ್ರಹ್ಮನಿಗೂ ಅರ್ಥವಾಗೊಲ್ಲ. ಕಾಗದ ಶುರು ಮಾಡೋದು ಹೇಗೆ ಅನ್ನೋದೇ ನಿನಗೆ ಬರದು. ದೊಡ್ಡವರಿಗೆ ಕಾಗದ ಬರಿಯೋವಾಗ ಚಿರಂಜೀವಿ ಅಂತ ಬರೀತಾರ್ಯೆ? ಕಾರ್ಡು ತುಂಬ ಮಸಿ ಚೆಲ್ಲಿದೀಯ.

ಯಾರು ಸತ್ತುಹೋದರೋ ಏನೋ ಅಂತ ನಾನು ಹೆದರಿಕೊಂಡಿದ್ದೆ. ಇನ್ನು ಮೇಲೆ ಕವರಿನಲ್ಲಿ ಬರಿ. ಲೆಕ್ಕದಲ್ಲಿ ೪೦ ನಂಬರೂಂತ ಬರಿದಿದಿ. ಸುಳ್ಳೋ ನಿಜವೋ ದೇವರೇ ಬಲ್ಲ. ಮಿಕ್ಕ subjectಗಳಲ್ಲಿ ಎಷ್ಟೆಷ್ಟು ನಂಬರು, ಎಲ್ಲಾ ಬರಿ. ಸುಳ್ಳುಗಿಳ್ಳು ಬೊಗಳಬೇಡ. ಅಪ್ಪನಿಗೆ ೨೦ ರೂಪಾಯಿ ಕಳಿಸೂಂತ ಬರಿದಿದಿ. ೪ ರೂಪಾಯಿ ಫೀಸು, ೨ ರೂಪಾಯಿ ರೂಂಬಾಡಿಗೆ, ಹೋಟ್ಲಿಗೆ ೮, ಒಟ್ಟು ೧೪ ಆಯ್ತು. ೨೦ ಯಾಕೆ? ಷೋಕಿ ಮಾಡ್ಕೊಂಡು ಬೀದ್ಬೀದಿ ಅಲೀತಿದ್ದೀಯಾಂತ ಕಾಣುತ್ತೆ. ನೀನು ಈ ತರ ಇದ್ದರೆ ನಿನಗೆ ಖಂಡಿತ ಪಾಸಾಗೊಲ್ಲ. General Books ಯಾವ್ಯಾವುದು ಓತ್ತಿದಿ? ನೀನು Fountain Pen ತಗೋಬೇಕೂ ಅಂತ ಬರೆದಿದ್ದೀಯ. Fountain Pen ಉಪಯೋಗಿಸಿದರೆ ಅಕ್ಷರ ಕುದುರೋಲ್ಲ. ಲೇಖನಿಯಲ್ಲೇ ಬರಿ. ನೀನು ಖಂಡಿತ Leaving Certificate ತಗೊಂಡು ಬಂದ್ಬಿಡು. ಹಾಗೇ ಬರೋವಾಗ ಮರೀದೆ, ಒಂದಷ್ಟು ಹಣ್ಣು ಹೂವು ತಗೊಂಡುಬಾ. ಅಮ್ಮಂಗೆ ಮೈಯಲ್ಲಿ ಸರಿಯಿಲ್ಲ. ಮುಂದಿನ ಕಾಗದ ಬರೆಯೋವೇಳೆಗೆ ನೀನು ಇಲ್ಲಿಗೆ ಬಂದ್ಬಿಡೂ.

—ವಿ. ಸುಬ್ರಹ್ಮಣ್ಯಂ.

## ೨೦. ಹೆಗ್ಗಣ ಹೊಡೆದದ್ದು

ಈಗ ಎರಡು ವರ್ಷಗಳ ಕೆಳಗೆ ನಮ್ಮ ಮನೆಯಲ್ಲಿ ಒಂದು ದೊಡ್ಡ ಹೆಗ್ಗಣ ಸೇರಿಕೊಂಡಿತ್ತು. ಅದು ಬಹಳ ಹಾವಳಿ ಮಾಡಿ, ಒಂದು ವರ್ಷ ಆದ ಮೇಲೆ ನಮ್ಮ ಕೈಗೆ ಸಿಕ್ಕಿಬಿದ್ದಿತು. ಅದರ ಕಥೆ ಸ್ವಲ್ಪ ಸ್ವಾರಸ್ಯವಾಗಿದೆ.

ಒಂದು ದಿನ ಬೆಳಗಿನ ಜಾವದಲ್ಲಿ ತೋಟದ ಹತ್ತಿರ ನಾನು ಹೋಗಿದ್ದಾಗ ಹುರುಳಿ ಮೊಳಕೆಗಳೆಲ್ಲ ನೆಲದಿಂದ ಕಿತ್ತು ಬಿದ್ದಿದ್ದುವು. ಒಂದೆರಡನ್ನು ಯಾರೋ ಕಡಿದು ಹಾಕಿದ ಹಾಗಿತ್ತು. ನಾನು ಅಲ್ಲೆಲ್ಲ ಹುಡುಕಿದರೂ ಯಾರ ಹೆಜ್ಜೆಗುರುತೂ ಸಿಕ್ಕಲಿಲ್ಲ. ಸಿದ್ದ "ಇಲ್ಯಾವ್ದೊ ಸುಂಡ ಸೇರ್ಕೊಂಡಿರ್ಬೇಕು" ಅಂದ.

ಹೀಗೆಯೇ ಅನೇಕ ದಿನಗಳವರೆಗೆ ನಡೆದು ತೋಟದಲ್ಲಿದ್ದ ಮೊಳಕೆಗಳು, ಸಸಿಗಳು—ಇವೆಲ್ಲ ಕತ್ತರಿಸಿ ಹೋದವು. ಸಣ್ಣ ಬೋನಿನಿಂದ ಹಿಡಿದು ಹಂದಿ

ಬೋನಿನವರೆಗೂ ಇಟ್ಟಿದ್ದಾಯ್ತು. 'ಸುಂಡ' ಮಾತ್ರ ಸಿಕ್ಕಲಿಲ್ಲ. ಕೊಬ್ಬರಿ, ವಡೆ ಮುಂತಾದ ತಿಂಡಿಗಳೆಲ್ಲವೂ ವ್ಯರ್ಥವಾದುವು.

ಕುದುರೆ ನೋಡಿಕೊಳ್ಳುವ ಜವಾನ ಹೇಳಿದ: "ಇಲ್ನೋಡಪ್ಪಾ. ಮೀನ್ಗೆ ಇಲ್ಲ, ಅದು ಹಾಕ್ಬಿಟ್ಟೆ, ಮೊಳ್ಕೆ ಹತ್ರ ಮಡಗ್ಬಿಟ್ಟೆ, ಹೆಗ್ಣಾ ಅಲ್ಲ, ಅದ್ರಪ್ಪ ಆದ್ರು ಸಿಕ್ಬಿಡ್ತಾದೆ. ಸುಮ್ಕೆ ಬಿಟ್ಬಿಟ್ರೆ ಭಾಳ ತಕಲೀಫ್ ಕೊಡ್ತಾದೆ."

ಆ ಪುಣ್ಯಾತ್ಮ ಮೀನು, ಮಾಂಸ, ಇನ್ನೂ ಏನೇನೋ ತಿಂಡಿ ತಂದಿಟ್ಟ. ಅದಾವುದಕ್ಕೂ ಆ ಹೆಗ್ಗಣ ಮಾತ್ರ ಸಿಕ್ಕಲಿಲ್ಲ. ಅದು ಹೆಗ್ಗಣ ಎಂದು ಹೇಗೆ ಗೊತ್ತಾಯಿತೆಂದರೆ—ಪಾತಿಯಲ್ಲೆಲ್ಲಾ ಅದರ ಹೆಜ್ಜೆ ಗುರುತುಗಳು ತುಂಬಿದ್ದುವು.

ಹೆಗ್ಗಣಕ್ಕೆ ಧೈರ್ಯ ಬಂದಿರಬೇಕು. ಮೆಲ್ಲಗೆ ಮನೆಯ ಒಳಗೂ ಬರಲು 'ಷುರು'ವಾಯಿತು. ಪಾರಿವಾಳದ ಗೂಡಿನಲ್ಲಿ ಗೌಜಲಹಕ್ಕಿ ಮೊಟ್ಟೆಯೊಂದನ್ನು ಪಾರಿವಾಳ ಮರಿಮಾಡಿತ್ತು. ಆ ಮರಿ ಸಣ್ಣ ನಿಂಬೆಕಾಯಿಯ ಗಾತ್ರವಿದ್ದು ಬಹಳ ಮುದ್ದಾಗಿತ್ತು. ಪಾರಿವಾಳ ಮರಿಗಳಿಗೆ ಗುಟುಕು ಕೊಡುವಾಗ ಮರಿಯು ಕೊಕ್ಕನ್ನ ತನ್ನ ಬಾಯಲ್ಲಿಟ್ಟು ತಿಂಡಿ ತುಂಬಿಸುತ್ತದೆ. ಆದರೆ ಈ ಮರಿ ಹುಟ್ಟಿದ ಐದು ನಿಮಿಷಕ್ಕೆಲ್ಲ ಗೂಡೆಲ್ಲಾ ಓಡಾಡುತ್ತ "ಚೀಪ್ ಚೀಪ್" ಎಂದು ಕೂಗುತ್ತಿತ್ತು. ಅದು "ಚೀಪ್, ಚೀಪ್" ಎಂದಾಗಲೆಲ್ಲ, 'ಯಾವುದಾದರೂ ಬಾತು ಇದ್ದಿದ್ದರೆ ಅದು "ಕ್ವ್ಯಾಕ್, ಕ್ವ್ಯಾಕ್" ಅಂತಿತ್ತೇನೊ' ಎನ್ನಿಸುತ್ತದೆ. ಏಕೆಂದರೆ ಅದೊಂದು ಸಣ್ಣ ಕತೆಯ ಸಾರಾಂಶ.

ಒಬ್ಬ ಡಾಕ್ಟರ್ ಮಗ, ಒಬ್ಬ ಲಾಯರ್ ಮಗ ಜಗಳವಾಡುತ್ತಿದ್ದಾಗ ಡಾಕ್ಟರ್ ಮಗ "ಲೋ, ನಿಮ್ಮಪ್ಪ ಏನೂಂತ ಒಂದು ಹಕ್ಕಿಮರಿ ಹೇಳ್ತು ಕಣೋ!" ಎಂದ. "ಏನಂತೊ?" ಎಂದ ಲಾಯರ್ ಮಗ. "Cheap! Cheap! ಅಂತು" ಎಂದ ಅವನು. ಅದಕ್ಕೆ ಇವನು ಹೇಳಿದ: "ನಿಮ್ಮಪ್ಪ ಏನೂಂತ ಒಂದು ಬಾತು ಹೇಳ್ತು ನಂಗೆ" ಎಂದ. "ಏನಂತೊ?" ಎಂದು ಕೇಳಿದ್ದಕ್ಕೆ "'Quack! Quack!' ಅಂತು ಕಾಣೋ" ಎಂದ. ಈ ಕಥೆ ಜ್ಞಾಪಕಕ್ಕೆ ಬಂತು.

ಒಂದು ದಿನ ಆ ಗೌಜಲಹಕ್ಕಿ ಮರಿಯನ್ನು ಹೆಗ್ಗಣ ತಿಂದುಹಾಕಿತು. ಮಾರನೆಯ ದಿನ ಒಂದು ಪಾರಿವಾಳದ ಮರಿ ಮಂಗಮಾಯವಾಗಿತ್ತು.

ನಮಗೆಲ್ಲ ಬಹಳ ಕೋಪ ಬಂತು. ಆದರೇನು? ನಾವೇನು ಮಾಡಿದರೂ ಆ ಹಾಳು ಹೆಗ್ಗಣ ಸಿಕ್ಕಲಿಲ್ಲ.

ಪಟಾಕಿ ಹಬ್ಬದ ದಿನ ಪಾರಿವಾಳದ ಗೂಡಿನ ಬಾಗಿಲು ತೆರೆದಾಗ ನೋಡಿದರೆ, ಆ ಹೆಗ್ಗಣ ಇದ್ದ ಆರು ಹಕ್ಕಿಗಳ ಕತ್ತನ್ನೂ ಮುರಿದು ರಕ್ತಹೀರಿ ಕೊಂದುಹಾಕಿದ್ದು ಗೊತ್ತಾಯಿತು. ಆ ಹೆಗ್ಗಣಕ್ಕೆ ಪ್ರಾಣಹೋಗುವ ಕಾಲ ಬಂದಿತು ಎಂದು ತಿಳಿದು ನಾವೆಲ್ಲ ಬಹಳ ಉಪಾಯದ ಕೆಲಸಗಳನ್ನು ಮಾಡಿದೆವು. ಅದು ಬರುತ್ತಿದ್ದ ರೂಮಿನಲ್ಲಿ ತಿಂಡಿಗೆ ವಿಷ ಸೇರಿಸಿಟ್ಟೆವು. ಅದಕ್ಕೂ ಸಿಕ್ಕಲಿಲ್ಲ. ನಾನು ಒಂದು ದಿನ ಬೇಸರಿಕೆಯಿಂದ ಖಾಲಿ ಬೋನನ್ನು ಹುರುಳಿ ಪಾತೆಯ ಹತ್ತಿರ ಇಟ್ಟಿದ್ದೆನು.

ಬೆಳಗ್ಗೆ ಎದ್ದು ಹೋಗಿ ನೋಡಿದರೆ, ಮೀನು ಮಾಂಸಗಳಿಗೆ ಬೀಳದ ಹೆಗ್ಗಣ ಖಾಲಿ ಬೋನಿಗೆ ಸಿಕ್ಕಿಕೊಂಡಿತ್ತು. ಅದರ ಕೋಪವನ್ನು ನೋಡಿ ನಮಗಿನ್ನೂ ಕೋಪ ಹೆಚ್ಚಿತು. ಬೋನಿನ ಹತ್ತಿರ ಯಾರಾದರೂ ಹೋದರೆ "ಬುರ್, ಗುರ್, ಬುರ್, ಗುರ್!" ಎಂದು ಕೂಗುತ್ತಿತ್ತು. ಜವಾನ ಅದನ್ನು ಹೊಡೆದು ಹಾಕಲು ಬೋನನ್ನು ಎತ್ತಿದಾಗ ಅವನನ್ನೇ ಹೆದರಿಸಿತು.

"ಅರೆ ಇಸ್ಕಿ, ನನ್ಗೆ ಕಚ್ಬುಡ್ತಿ ನೀನು? ನಿನ್ಗೆ ಕುತ್ಗೆ ಅಮಾಗ್ಬುಡ್ತೀನಿ ನೋಡು!" ಎಂದು ಮುಂತಾಗಿ ಬಯ್ಯುತ್ತ ಅದನ್ನು ತೊಟ್ಟಿಯ ನೀರಲ್ಲಿ ಮುಳುಗಿಸಿ ಕೊಂದ. ಆ ಹೆಗ್ಗಣದ ಹೆಣಕ್ಕೆ ದೊಡ್ಡ ಕೋಲಿನಿಂದ ಹೊಡೆದು ಹೊರಕ್ಕೆ ಹಾಕಿದ. ಅಂತೂ ಹುರುಳಿ ಮೊಳಕೆಗಳು, ಅನೇಕ ಸಸಿಗಳು, ತಿಂಡಿಗಳು, ಹಕ್ಕಿಮರಿ, ಹಕ್ಕಿ ರಕ್ತ—ಇವುಗಳನ್ನು ತಿಂದು ಕುಡಿದ ಹೆಗ್ಗಣಕ್ಕೆ ನೀರಿನಲ್ಲಿ ದುರ್ಮರಣ ಪ್ರಾಪ್ತವಾಯಿತು.

ಸಿದ್ದ ಮಾತ್ರ "ಸುಂಡ ಅಂತಿಳ್ಕೊಂಡಿದ್ನಲ್ಲ!" ಎಂದ.

—ಎಂ. ವಿ. ಆನಂದರಾವ್.

## ೨೧. ನಮ್ಮ "ಜೂಲುನಾಯಿ"

ನಾನು ನಮ್ಮ ಅಜ್ಜನವರ ಸಂಗಡ ಅಮರ ಹೇಳಿಸಿಕೊಳ್ಳುವ ಪದ್ಧತಿಯಿತ್ತು, ಈಗ್ಗೆ ಒಂಬತ್ತು ವರ್ಷಗಳ ಕೆಳಗೆ. ನಮ್ಮ ಅಜ್ಜನವರು ಬಹಳ ಮಡಿ.

ಅವರಿಗೆ ಕಾಫಿ ಕುಡಿಯುವ ಪದ್ಧತಿ ಸಹ ಇರಲಿಲ್ಲ. ಯಾವಾಗಲೂ ಮಂತ್ರಗಳನ್ನು ಹೇಳುತ್ತಾ ಮನೆಯಲ್ಲಿಯೇ ಇರುತ್ತಿದ್ದರು. ನನಗೆ ಅವರ ನಡತೆ ಸರಿಬೀಳುತ್ತಿರಲಿಲ್ಲ, ಅವರಿಗೆ ನನ್ನ ನಡತೆ ಸರಿಬೀಳುತ್ತಿರಲಿಲ್ಲ. ಕಾರಣ, ನಾನು ಕ್ಲಾಸಿಗೆ ಹೋದಾಗ ಯಾರಾರನ್ನೋ ಮುಟ್ಟಿಕೊಂಡು ಬಂದು, ಆ ಮೈಲಿಗೆ ಬಟ್ಟೆಯನ್ನೂ ಬಿಚ್ಚದೆ, ಪಾತ್ರೆಗಳನ್ನೆಲ್ಲಾ ಮುಟ್ಟುತ್ತಿದ್ದೆನೆಂದು. ಅದೂ ಅಲ್ಲದೆ ಮನೆಯಲ್ಲಿ ನಾವು ಕೆಲವರು ಕಾಫಿ ಕುಡಿಯುತ್ತಿದ್ದೆವು.

ಒಂದು ದಿವಸ ನಾನು ನಮ್ಮ ಅಜ್ಜನವರ ಸಂಗಡ ಅಮರ ಹೇಳಿಸಿಕೊಳ್ಳುತ್ತಿದ್ದೆ. ಅಷ್ಟರಲ್ಲಿ ಹೊರಗಡೆಯಿಂದ ಯಾರೋ ನನ್ನನ್ನು ಕೂಗಿದಂತಾಯಿತು. ನಾನು 'ಅಮರ' ಎಷ್ಟು ಹೊತ್ತಿಗೆ ಮುಗಿಯುವುದೋ ಎಂದು ಆತುರದಿಂದ, ಅದು ಮುಗಿದನಂತರ ಹೊರಗೆ ಬಂದು ನೋಡಿದೆ. ಶಾಮಣ್ಣ ಹೊರಗಡೆ ಕಾದಿದ್ದ. ನಾನೂ ಅವನೂ ಕೆಲವು ವಿಷಯಗಳನ್ನು ಚರ್ಚಿಸಿದೆವು. ಅವು ಯಾವುವೆಂದರೆ: ನಮ್ಮ ಹತ್ತಿರ ಒಂದು ನಾಯಿಯಿತ್ತು. ಅದು ಜೂಲು ನಾಯಿಯಲ್ಲ. ನಾವು ಅದನ್ನು ನಮ್ಮ ಅಜ್ಜನವರಿಗೆ ಗೊತ್ತಾಗದಂತೆ ಮುಟ್ಟುತ್ತಲೂ ಸಾಕುತ್ತಲೂ ಇದ್ದೆವು. ನಮಗೆ ಒಂದು ಜೂಲುನಾಯಿ ಮರಿಯನ್ನು ಸಾಕಬೇಕೆಂದು ಇಷ್ಟ. ಆದರೆ ನಮ್ಮ ಹಳ್ಳಿಯಲ್ಲಿ ಅದು ಸಿಕ್ಕುವ ಹಾಗಿರಲಿಲ್ಲ. ಒಬ್ಬ ರೈತನು "ನಾಯಿಯ ಕಿವಿಯನ್ನು ಕತ್ತರಿಸಿದರೆ, ಅದು ಹುಲುಸಾಗಿ ಜೂಲುನಾಯಿಯ ಮರಿಯಂತೆ ಆಗುವುದು" ಎಂದು ಹೇಳಿದ್ದನು. ಅದಕ್ಕೋಸ್ಕರ ನಾವು ಅದರ ಕಿವಿಯನ್ನು ಕತ್ತರಿಸುವ ಉಪಾಯವನ್ನು ಚರ್ಚಿಸಿದೆವು. ಅದರ ಕಿವಿಯನ್ನು ಕತ್ತರಿಸುವುದಕ್ಕೂ ಒಪ್ಪಿಕೊಂಡೆವು. ಇದು ನಮ್ಮ ಅಜ್ಜನವರಿಗೆ ತಿಳಿದರೆ, ಅವರು ನನ್ನನ್ನು ಮನೆಬಿಟ್ಟು ಓಡಿಸುತ್ತಾರೆಂದೂ, ಆದ್ದರಿಂದ ಈ ವಿಚಾರವೆಲ್ಲ ಗುಟ್ಟಾಗಿ ನಡೆಯಬೇಕೆಂದೂ ತೀರ್ಮಾನವಾಯಿತು.

ನಾಯಿಯ ಕಿವಿಯನ್ನು ಕತ್ತರಿಸುವುದಕ್ಕೆ ಆಯುಧ ಯಾವುದೂ ಸಿಕ್ಕಲಿಲ್ಲ. ಒಂದು ಹರಿತವಿಲ್ಲದ ಕುಡುಗೋಲು ಸಿಕ್ಕಿತು. ಅದರಲ್ಲೇ ಕತ್ತರಿಸಬೇಕೆಂದು ತೀರ್ಮಾನವಾಯಿತು.

ಅದೇ ದಿನ, ಮಧ್ಯಾಹ್ನ, ನಾಯಿಯು ಜಗಲಿಯ ಹತ್ತಿರ ಮಲಗಿಕೊಂಡು ನಿದ್ರಿಸುತ್ತಿತ್ತು. ನಾವು ಅದಕ್ಕೆ ಬೆಲ್ಲದ ಆಸೆಯನ್ನು ತೋರಿಸುತ್ತಾ ನಮ್ಮ ಪಾಳುಹಿತ್ತಿಲಿಗೆ ಕರೆದುಕೊಂಡು ಬಂದೆವು. ಇದೇನೋ ಇರಬೇಕೆಂದು

"ನರಾರಿ"ಯು ನಮ್ಮನ್ನು ಹಿಂಬಾಲಿಸಿದನು. ಇವನ ಹೆಸರು 'ನರಹರಿ'. ಇವನನ್ನು ಸಣ್ಣ ಸಣ್ಣ ಹುಡುಗರು "ನರಾರಿ" ಎಂದು ಕರೆಯುತ್ತಿದ್ದರು.

ನಾಯಿಯು ಹಿತ್ತಿಲಿಗೆ ಬಂದನಂತರ ಅದರ ನಾಲ್ಕು ಕಾಲುಗಳನ್ನೂ ನರಾರಿಯು ಒಂದು ನಾರಿನಿಂದ ಬಿಗಿದನು. ಶಾಮಣ್ಣನು ನಾಯಿಯನ್ನು ಭದ್ರವಾಗಿ ಹಿಡಿದುಕೊಂಡನು. ಅನಂತರ, ನಾನು ಅದರ ಕಿವಿಗಳನ್ನು ಕತ್ತರಿಸತೊಡಗಿದೆ. ಅದು ಹರಿತವಿಲ್ಲದ ಕುಡುಗೋಲಾದ್ದರಿಂದ ಎಷ್ಟು ಕೊಯ್ದರೂ ಅದರ ಕಿವಿಯನ್ನು ಕತ್ತರಿಸಲಾಗಲಿಲ್ಲ. ಹಾಗೂ ಹೀಗೂ ಮಾಡಿ ಒಂದು ಕಿವಿಯನ್ನು ಕತ್ತರಿಸಿದ್ದಾಯಿತು. ಇನ್ನೊಂದನ್ನು ಕತ್ತರಿಸ ಬೇಕಾಗಿತ್ತು.

ಅಷ್ಟರಲ್ಲಿ ನಾಯಿಯು ಗಟ್ಟಿಯಾಗಿ ಕೂಗಿಕೊಳ್ಳಲಿಕ್ಕೆ ಪ್ರಾರಂಭ ಮಾಡಿತು. ಒಂದು ಕಿವಿಯಲ್ಲಿ ರಕ್ತ ಸೋರುತ್ತಿತ್ತು. ನಾವು ಅದರ ಕಾಲುಗಳಿಗೆ ಕಟ್ಟಿದ್ದ ನಾರು ಒಣಗಿ ಹೋಗಿದ್ದರಿಂದ ನಾಯಿಯ ಒದ್ದಾಟದಲ್ಲಿ ಅದು ಕಿತ್ತು ಹೋಯಿತು. ಅದರ ಶಬ್ದವನ್ನು ಬೀದಿಯಲ್ಲಿ ಗೋಲಿ ಆಡುತ್ತಿದ್ದ ಹುಡಗ ರೆಲ್ಲ ಕೇಳಿ ನಮ್ಮ ಹಿತ್ತಿಲಿನ ಕಡೆ ಓಡಿಬಂದರು. ನಮ್ಮ ಅಜ್ಜನವರು ಜನಿ ವಾರ ಮಾಡುತ್ತಿದ್ದದನ್ನು ನಿಲ್ಲಿಸಿ, ಕದುರನ್ನು ಅಲ್ಲಿಯೇ ಇಟ್ಟು ಓಡಿಬಂದರು. ನಾನು ಮೊದಲು ನಮ್ಮ ಅಜ್ಜನವರ ಕಣ್ಣಿಗೆ ಬಿದ್ದೆ.

ಅವರು "ಅಯ್ಯೋ, ಪಿಶಾಚಿ. ನಾಯಿಯ ಕಿವಿಯನ್ನು ಯಾರಾದರೂ ಕತ್ತರಿಸುತ್ತಾರೆಯೆ! ನಾಯನ್ನು ಬ್ರಾಹ್ಮಣನಾದವನು ಮುಟ್ಟುವುದುಂಟೇ! ಬಟ್ಟೆ ಬಿಚ್ಚಿಹಾಕಿ ಇಲ್ಲಿ ಬಾ, ನಿನಗೆ ಮಾಡುತ್ತೇನೆ" ಎಂದು ಕೂಗಾಡಿ ದರು. ಹುಡುಗರೆಲ್ಲರೂ ಓಡಿಹೋದರು. ಶಾಮಣ್ಣನೂ ನರಾರಿಯೂ ಓಡಿ ಹೋದರು.

ನಾನು ಮನೆಗೆ ಹೋದನಂತರ ಪ್ರಹಾರಗಳ ಸುರಿಮಳೆ. ಇನ್ನುಮೇಲೆ ನಾಯಿಯ ತಂಟೆಗೆ ಹೋಗುವುದಿಲ್ಲವೆಂದು ಪ್ರತಿಜ್ಞೆಮಾಡಿದೆ. ಅಂತೂ ಇದು ವರೆಗೂ ಆ ನಾಯಿಯ ಸುಳಿವೇ ಇಲ್ಲ. ಅದು ಎಲ್ಲಿ ಹೋಯಿತೋ ತಿಳಿಯದು.

—ಕೆ. ಆರ್. ಸುಬ್ಬರಾಯ.

## ೨೨. ತೊಡಪಕಟ್ಟೆಯ ಸಾಹಸ

ತೊಡಪಕಟ್ಟೆ ಎಂಬುದು ಒಂದು ತಮಿಳು ಪದ. ಅದರ ಅರ್ಥ ಕೇಳಿದರೇ ಗೊತ್ತಾಗುತ್ತದೆ. ಅದರ ಬೆಲೆ ಎಷ್ಟೇ ಕಡಿಮೆ ಇದ್ದರೂ ಕೆಲಸಕ್ಕೆ ಮಾತ್ರ ಅದಿಲ್ಲದೆ ಆಗುವುದಿಲ್ಲ. ಅದರ ಪ್ರಯೋಜನವನ್ನು ಚಿಕ್ಕವರು, ದೊಡ್ಡವರು, ಹೆಂಗಸರು, ಗಂಡಸರೆನ್ನದೆ ಎಲ್ಲರೂ ಬಲ್ಲರು. ಅದರ ಕೆಲವು ಸಾಹಸಗಳನ್ನು—ಸಾಹಸಗಳೆಂದು ಹೇಳಬಹುದಾದರೆ—ಹೇಳುತ್ತೇನೆ.

ನಾನು ಹೇಳುವ ತೊಡಪಕಟ್ಟೆ ಮೈಸೂರಿನ ಹತ್ತಿರ ಒಂದು ಹಳ್ಳಿಯಲ್ಲಿ ಬೆಳೆದು ಹಲವರ ಮನೆಗಳನ್ನು ಚೊಕ್ಕಟವಾಗಿಡುವುದಕ್ಕೆ ಉಪಯೋಗವಾಗುತ್ತಿತ್ತು. ಶ್ರೀರಂಗಪಟ್ಟಣದ ತಾಲ್ಲೂಕಿನ ಗಂಜಾಂ ಎಂಬ ಒಂದು ಹಳ್ಳಿಯ ಬಂಜರುಪ್ರದೇಶದಲ್ಲಿ ನೀರಿನ ವಸತಿಯಿಲ್ಲದೆ ಅದು ಹುಲುಸಾಗಿ ಬೆಳೆದಿದ್ದಿತು. ಅದನ್ನು ತಿಮ್ಮನ ಹೆಂಡತಿ ತಿಮ್ಮಿಯು ಕೊಯಿದು ತಂದು ಒಣಗಿಸಿದಳು. ತಿಮ್ಮಿ ಒಕ್ಕಲಿಗರವಳು. ಗಂಡನ ಆರಂಬಕೆಲಸಗಳಲ್ಲಿ ಬಹಳ ಸಹಾಯ ಮಾಡುತ್ತಿದ್ದಳು. ಅವಳು ಸ್ವಲ್ಪ ಒರಟೇ ಎಂದು ಹೇಳಬಹುದು. ಅವಳಿಗೆ ಕಡ್ಡಿಗಳನ್ನು—ಎಂದರೆ ತೊಡಪಕಟ್ಟೆಯ ಅಂಶಗಳನ್ನು—ಕೊಯ್ಯುವಾಗ ಯಾವ ತೆರದ ಬಾಧೆಯೂ ಆಗಲಿಲ್ಲ. ಕಡ್ಡಿಯನ್ನು ಒಣಗಿಸಿ ಸಣ್ಣ ಸಣ್ಣ ಕಂತೆಗಳನ್ನು ಕಟ್ಟಿ ತಲೆಯಮೇಲೆ ಹೊತ್ತುಕೊಂಡು ಬೆಳಗಿನ ಜಾವದಲ್ಲಿಯೇ ಮೈಸೂರಿನ ಮುಖವಾಗಿ ಹೊರಟಳು. ಹಳ್ಳಿಯಿಂದ ಮೈಸೂರಿಗೆ ಮೂರು ನಾಲ್ಕು ಹರಿದಾರಿಗಳಿರಬಹುದು. ತಿಮ್ಮಿ ಮೈಸೂರಿಗೆ ಬರುವ ಹೊತ್ತಿಗೆ ೯—೧೦ ಗಂಟೆಗಳಾಗಿತ್ತು. ಬಿಸಿಲು ಬಹಳ ವೇಗವಾಗಿತ್ತು. ತಿಮ್ಮಿ ಅದನ್ನು ಕಾಸಿಗೆ ಮಾರಿದರೆ ಅವಳಿಗೆ ದುಡ್ಡು ಸಿಕ್ಕುತ್ತಿತ್ತು. ಆದರೆ ತಿಮ್ಮಿಗೆ ಹಣವಂತರು ಉಡುವ ಸೀರೆಯ ಮೇಲೆ ಆಸೆ. ಅವರು ಉಟ್ಟು ಹಳೆಯದಾದ ಸೀರೆಯನ್ನಾದರೂ ಉಡೋಣವೆಂದು ಮೈಸೂರಿನ ದೊಡ್ಡ ದೊಡ್ಡ ಬೀದಿಗಳಲ್ಲಿ ತಿರುಗಿದಳು. ಯಾರೂ ಕರೆಯಲಿಲ್ಲ. ಪಾಪ, ಏನು ಮಾಡಿಯಾಳು ? ಎಲ್ಲರೂ ಕಾಸಿಗೇ ಕೇಳುವರು; ಅದೂ ದುಡ್ಡಿಗೆ ೧೨—೧೬ ಕಂತೆಗಳು. ಹೇಗೋ ತಂದದ್ದರಲ್ಲಿ ಅರ್ಧವನ್ನು ಕಾಸಿಗೂ ಮಿಕ್ಕುದನ್ನು ಹಳೆಯ ಬಟ್ಟೆಗಳಿಗೂ ಮಾರಿ ಹೊರಟುಹೋದಳು.

ನಮ್ಮ ರಾಜನ ತಾಯಿಯು ಒಂದು ಹಳೆಯ ಸೀರೆಯನ್ನು ತನ್ನ ಅಜ್ಜಿಯ ಕಾಲದ್ದೆಂದು ಭದ್ರವಾಗಿ ಹುಷಾರಿನಿಂದ ಕಾಪಾಡಿದ್ದಳು. ಆ ಸೀರೆ ತಿಮ್ಮಿಯ ಪಾಲಾಗಿ, ರಾಜನ ಮನೆಗೆ ತೊಡಪಕಟ್ಟೆ ಬಂತು; ಅದರಲ್ಲೂ ಹೊಸದು. ರಾಜನ ತಾಯಿ ಬಹು ಚತುರಳು. ಕಡ್ಡಿಗಳು ಒಂದು ದೊಡ್ಡದು, ಒಂದು ಚಿಕ್ಕದು; ಒಂದರ ತುದಿಯಲ್ಲಿ ಬ್ರಷ್ಷಿನಂತಿರುವ ಗರಿಗಳು, ಮತ್ತೆ ಕೆಲವಕ್ಕೆ ಇಲ್ಲ. ಆಕೆ ಅವನ್ನು ಸೈಜುವಾರಾಗಿ ಆರಿಸಿ ಅನೇಕ ಕಂತೆಗಳನ್ನು ಅಣಿಯಾಗಿ ಮಾಡಿದಳು. ಚೆನ್ನಾಗಿ ಬಲಿತು ದಪ್ಪನಾಗಿದ್ದ ಕಡ್ಡಿಗಳನ್ನು ಎಲೆ ಹಚ್ಚಲು ಎಂದು ತೆಗೆದು, ಅವುಗಳ ತುದಿಯನ್ನು ಮುರಿದು ತನ್ನ ಸಣ್ಣ ಮಗಳಿಗೆ ಆಡಲು ಕೊಟ್ಟಳು. ಮತ್ತೆ ಕೆಲವನ್ನು ಅರಳು ಹುರಿಯಲೆಂದು ಇಟ್ಟಳು. ಮೂರು ಅಡಿ ಉದ್ದವುಳ್ಳ ಕೆಲವನ್ನು ಜೊತೆಮಾಡಿ ಸೇರಿಸಿ ಕಟ್ಟಿದಳು. ಅವಕ್ಕೆ ತುದಿಯಲ್ಲಿ ಬ್ರಷ್ ಚೆನ್ನಾಗಿದ್ದುವು, ಗುಡಿಸಲು ಸೊಗಸಾಗಿದ್ದುವು.

ರಾಜನ ತಾಯಿ ಅದರಲ್ಲಿ ರಾಜನ ಕೊಠಡಿಯನ್ನು ಗುಡಿಸಿದಳು. ಅವರು ಬಡವರು, ಪಾಪ. ಜಮಖಾನೆ, ಚಾಪೆ ಇವೆಲ್ಲಾ ಅವರಿಗಿರಲಿಲ್ಲ. ರಾಜನ ಸ್ನೇಹಿತರು ಬಂದು ಚೊಕ್ಕಟವಾದ ನೆಲದ ಮೇಲೆ ಕುಳಿತು ಮಾತನಾಡಿಹೋದರು. ತೊಡಪಕಟ್ಟೆಯ ತುದಿಯಲ್ಲಿದ್ದ ಬ್ರಷ್ಷಿನ ಮುಳ್ಳುಗಳು ಗುಡಿಸುವಾಗ ನೆಲದ ಮೇಲೆ ಬಿದ್ದಿದ್ದುವು. ಕೂತೇಳುವಾಗ ಅವೆಲ್ಲಾ ರಾಜನ ಸ್ನೇಹಿತರ ಬಟ್ಟೆಗೆ ಅಂಟಿದವು.

ತೊಡಪಕಟ್ಟೆ ಗುಡಿಸಿ ಗುಡಿಸಿ ಮೊಂಡಾಗಿಬಿಟ್ಟಿತು. ಆಗಲೂ ಅದಕ್ಕೆ ರಿಟೈರ್ ಆಗಲಿಲ್ಲ. ಅದನ್ನು ಮನೆಯ ನಲ್ಲಿ ಅಡಿಯಲ್ಲಿರುವ ಪಾಚಿ ತೊಳೆಯಲು ಹಾಕಿದರು. ಅಲ್ಲಿಯೂ ಅದು ಸರಿಯಾಗಿ ಕೆಲಸಮಾಡಿತು. ಅಲ್ಲಿಂದ ಅದಕ್ಕೆ ಬಚ್ಚಲುಮನೆಯ ಒಲೆಗೆ ಟ್ರಾನ್ಸ್‌ಫರ್ ಆಯಿತು. ಅಲ್ಲಿ ಅದರ ಗತಿ ಏನಾಯಿತು?

ರಾಜನ ಮನೆಯಲ್ಲಿ ಅದರ ಉಪಯೋಗವಾದಷ್ಟು ಹಳೆಯಸೀರೆ ತಿಮ್ಮಿಗೆ ಉಪಯೋಗವಾಯಿತೋ ಇಲ್ಲವೋ ತಿಳಿಯದು.

**—ಸಿ. ಎಸ್. ವಿಜಯರಾಘವಾಚಾರ್.**

## ೨೩. ದೇವಿ! ನಾನು ನಿನ್ನವ, ನಿನ್ನ ಭಕ್ತ

[ಮೇಲೆ "ಏನು ಬರೆಯಲಪ್ಪಾ? ನಾನು!" (ನಂ. ೯) ಎಂಬುದನ್ನು ಬರೆದ ಶ್ರೀ ಎಃ. ಪ್ರಹ್ಲಾದರಾವ್ ಆವರು ಮನೆಯಲ್ಲಿ ಬರೆದು ತಂದ ಲೇಖನ.]

ಹೌದು. ಮದಿರಾದೇವಿ, ನೀನು ಮಾನ್ಯಳು. ಅಶಕ್ತರಿಗೆ ನೀನು ಅಗೋಚರಳು. ಮಹಾತಾಯಿ, ನಿನ್ನ ಮಹತ್ವವನ್ನು ಅರಿಯದವರೂ ಅನೇಕರಿದ್ದಾರೆ. ಹು! ಕವಿಗಳಂತೆ ಕವಿಗಳು! ಅವರಿಗೆ, ಬರೆಯಲು ಬೇರೆ ವಿಷಯಗಳಿವೆಯಂತೆ! ಈ ಕವಿಗಳೆನ್ನಿಸಿಕೊಂಡಿರುವವರ ಕಣ್ಣಿಗೆ ನೀನು ಕಾರ್ಮುಗಿಲಿನಲ್ಲಿ ಅಡಗಿರುವ ಕೋಗಿಲೆ. ಅವರಿಗೆಲ್ಲಿದೆ ನಿನ್ನನ್ನು ಅರಿಯುವಷ್ಟು ಶಕ್ತಿ!

ದೇವಿ! ನಿನ್ನ ಮಹಿಮೆಯ ವಿಷಯವಾಗಿ ಅನೇಕ ರಾತ್ರಿಗಳು ಯೋಚಿಸಿದ್ದೇನೆ. "ಕುಡಿತ ತಪ್ಪು" ಎಂದು ಕೂಗುವವರ ಕೂಗನ್ನೂ ಕೇಳಿದ್ದೇನೆ. "ಕುಡಿತ ಕೆಟ್ಟದ್ದು. ಕುಡಿಕುಡಿದು ಅನೇಕರು ಕೆಟ್ಟರು. ಮದಿರೆ ಮನೆ ಹಾಳು ಮಾಡುವ ಶತ್ರು" ಎಂದು ಸಾರುವ ಪುಸ್ತಕಗಳನ್ನು ಅನೇಕವಾಗಿ ಓದಿದ್ದೇನೆ. ಆದರೆ, ಸುರಾದೇವಿ, ನಿನ್ನಲ್ಲಿ ನನಗಿರುವ ಭಕ್ತಿ ವಿಶ್ವಾಸಗಳು ಸ್ವಲ್ಪವೂ ಕಡಿಮೆಯಾಗಿಲ್ಲ. ನಾನು ಸತ್ಯಾಭಿಮಾನಿ, ವಿಮರ್ಶಕ. ತಪ್ಪಾವುದು? ಸರಿಯಾವುದು? ಎಂದು ತೂಗಿ ತಿಳಿಯುವ ತಕ್ಕಡಿ ನನ್ನಲ್ಲಿದೆ. ನಿನ್ನ ವಿಷಯದಲ್ಲಿ ಪರರಾಡುವ ನಿಂದೆಗಳನ್ನು ಕೇಳಿದರೂ ನನ್ನ ಮನಸ್ಸು ನಿನ್ನನ್ನು ವಿರೋಧಿಸುವುದಿಲ್ಲ.

ದೇವೀ, ನಿನ್ನ ವ್ಯಾಪ್ತಿ ಶಕ್ತಿಗಳ ವರ್ಣನೆಯನ್ನು ಮಾಡಲು ನನಗೆಲ್ಲಿಯದು ಸಾಮರ್ಥ್ಯ!

ಏ! ಮಂಕುಜನಗಳೇ! ಸುರಾದೇವಿಯನ್ನು ಸದೆಬಡೆಯಲು ಹಗಲಿರುಳೂ ಹೆಣಗುವ ಹುರಿಯಾಳುಗಳೇ! ಇತ್ತ ಲಾಲಿಸಿ. ಸವೆದು ಹೋದ ನಿಮ್ಮ ಬುದ್ಧಿಗೆ ನನ್ನ ವೀರವಾಕ್ಕುಗಳು ಸಾಣೆಗಲ್ಲಾಗಲಿ.

ನಾನು ಮದಿರಾಮಾತೆಯ ಪುತ್ರ. ವರ್ಷಾನೇಕಗಳಿಂದ ತಾಯಿಗೆ ಸೇವೆ ಸಲ್ಲಿಸಿದ್ದೇನೆ. ನನ್ನ ಅನುಭವವನ್ನು ಉಸಿರುವೆನು. ಕೇಳಿ ಕಿವಿಗೊಡಿ.

"ಸುರಾಪಾನವು ಶಕ್ತಿಯನ್ನು ಕುಗ್ಗಿಸುತ್ತದೆ, ಮತಿಯನ್ನು ಮಂದ ಮಾಡುತ್ತದೆ" ಎಂದು ಹೇಳುವ ಮಾತುಗಾರರೇ, ನಿಮಗೆ ದೃಷ್ಟಿಯಿದ್ದೂ

ದಂಡ. ಸ್ವಲ್ಪ ನಿಮ್ಮ ನೋಟವನ್ನು ಆದಷ್ಟು ಹಿಂದೆ ಓಡಿಸಿರಿ. ಅಗೋ, ಅಲ್ಲಿ ನೋಡಿ! ದೂರದ ನೀಲಾಕಾಶದ ಮಧ್ಯದಲ್ಲಿ! ಕವಿ ಉಮರ್ ಖಯಾಂನ ದಿವ್ಯತೇಜೋಮೂರ್ತಿ! ಉಮರನು ಒಸೆದ ಉಸಿರು ಉತ್ತಮಕಾವ್ಯ ಎನ್ನಿಸಿ ಕೊಂಡಿತಲ್ಲವೆ! ಅವನ ನುಡಿಗಳನ್ನು ಚಿನ್ನದಿಂದ ಚಿತ್ರಿಸಿ ಕನ್ನಡಿಯ ಕಿರು ಮಾಡಗಳಲ್ಲಿ ನೀವು ಇರಿಸಿಲ್ಲವೆ? ಆದರೆ ನೀವು "ಉಮರನಿಗೆ ಈ ಮಹತ್ವದ ಕಾವ್ಯವನ್ನು ಬರೆಯಲು ಶಕ್ತಿ ಎಲ್ಲಿಂದ ಬಂತು?" ಎಂದು ಒಂದು ಗಳಿಗೆ ಯಾದರೂ ಯೋಚಿಸಿದ್ದೀರಾ?

ಉಮರನು ಮದಿರೆಯ ಭಕ್ತ. ಸುರಾದೇವಿಯು ಒಲಿದಳೆಂದರೆ ಉಮ ರನು ಉಜ್ವಲನಾಗುತ್ತಿದ್ದನು, ಅವನ ಬಾಯಿಂದ ಆಣಿಮುತ್ತುಗಳು ಸುರಿಯು ತ್ತಿದ್ದುವು. ಅವನ ಕಾವ್ಯವನ್ನು ಓದಿದವರಿಗೆ ಗೊತ್ತಾಗುತ್ತದೆ—ಅವನ ಕಾವ್ಯ ದಲ್ಲಿ ಪ್ರಥಮ ಸ್ಥಾನಮಾನಗಳು 'ಸುರೆ'ಗೆ ಎಂದು. ಉಮರನ ವಾಕ್ಯ ವೊಂದನ್ನು ಹೇಳುತ್ತೇನೆ, ಕೇಳಿ.

Comrades, I pray you, physic me with wine.
Make this wan amber face like rubies shine
And if I die use wine to wash my corpse
And frame my coffin out of planks of vine.

ಅದಂತಿರಲಿ. ಇತ್ತ ತಿರುಗಿ, ಮಾನ್ಯರೇ, ಇತ್ತ ನೋಡಿ. 'ಎಂಡ! ಎಂಡ!' ಎಂಬ ಕೂಗು ಕೇಳಿಬರುತ್ತಿದೆ. ಇದಾರಿದು?

"ಎಂಗೀಸ್ಗ ಎಂಗೆ ಅರಸ್ನ ಕುಂಕ್ಮ
ಗಂಡೀಸ್ಗ ಅಂಗೆ ಎಂಡ."
"ರವೀ ಕಾಣದ್ ಕವೀ ಕಂಡ—
ಅಂದ್ರೆ ಕವಿಗಳ್ ತತ್ವ,
ಕವೀ ಕಾಣದ್ ಕುಡಕ ಕಂಡ—
ಅನ್ನೋದ್ ಕುಡಕರ್ ಮಾತ್ವ."

ಕೇಳಿದಿರಾ, ಈ ವೀರವಾಣಿಯನ್ನು! 'ರತ್ನ'ನಿಗೂ ಸುರೆಯಲ್ಲಿ ಭಕ್ತಿ. 'ರತ್ನ' ಕುಡಿದಾಗ ಕವಿ, ಎಚ್ಚೆತ್ತಾಗ ಎಳೆಮಗು. ಕುಡಿದಾಗ ರತ್ನನ ತತ್ವ "ಮಾತತ್ವ". ಇವನಿಗೆ ಸ್ಫೂರ್ತಿದಾತರು ಯಾರೆಂದು ಪುನಃ ಹೇಳಬೇಕೆ?

ಮಿತ್ರರೆ, ನಿಮ್ಮ ಗಮನವು ಪಾಶ್ಚಾತ್ಯರ ಕಡೆಗೆ ತಿರುಗಲಿ. ಪಾಶ್ಚಾತ್ಯರು ಪ್ರಬಲರು, ಪ್ರಭಾವಶಾಲಿಗಳು, ಪ್ರವೀಣರು, ಪ್ರಸಿದ್ಧರು ಎಂದೆನ್ನಿಸಿಕೊಂಡಿರುವುದು ಕೂಡ "ವೈನ್" ಆರಾಧನೆಯಿಂದ. ಸ್ನೇಹಿತರೇ, ನಿಮ್ಮ ಹಿತಚಿಂತಕನ ಮಾತುಗಳಿಗೆ ಬೆಲೆಕೊಡಿ. ಅಧ್ಯಾಪಕರುಗಳ ಮಾತುಗಳಿಗೆ ಮರುಳಾಗಿ ವಿದ್ಯಾನಿಲಯದ ಮಧ್ಯದಲ್ಲಿ ಕುಳಿತು ಎಷ್ಟು ಓದಿದರೂ ಮನಸ್ಸು ವಿಕಾಸವಾಗುವುದಿಲ್ಲ. ನಿಮ್ಮಲ್ಲಿ ಅನೇಕರಿಗೆ "ನಾನು ಸಾಹಿತಿಯಾಗಬೇಕು, ನಾನು ವಿಜ್ಞಾನಿಯಾಗಬೇಕು, ನಾನು ಕಲೋಪಾಸಕನಾಗಬೇಕು" ಎಂಬ ಆಕಾಂಕ್ಷೆ ಇದೆ. ಇದ್ದರೆ, ಇಂದೇ ದೀಕ್ಷೆಯನ್ನು ಕೈಕೊಳ್ಳಿ. ಸುರಾದೇವಿಯ ಸೇವೆಮಾಡಿ. ಸಕಲಾರ್ಥಸಿದ್ಧಿಯಾಗುವುದು.

ಮದಿರಾದೇವಿಯ ಮಹತ್ವವು ಬೆಳೆದು ಬೆಳುದಿಂಗಳಿನಂತೆ ಬೆಳಗಲಿ, ಹೂಗಂಧದಂತೆ ಹಬ್ಬಿ ಹರಿಯಲಿ.

—ಎನ್. ಪ್ರಹ್ಲಾದರಾವ್

# ಎರಡನೆಯ ಗೊಂಚಲು

## ೧. ನನ್ನ ತೀರ್ಮಾನ

ರಾಯರ ಕುದುರೆ ಬರಬರುತ್ತಾ ಕತ್ತೆಯಾಯಿತಂತೆ. ಅದರ ಹಾಗೆಯೇ ನನ್ನ ಚುರುಕುಬುದ್ಧಿಯೂ ಕ್ರಮೇಣ ಮಂಕಾಗಿಬಿಟ್ಟಿದೆಯಲ್ಲ. ಅಲ್ಲ, ನಾನಿನ್ನೂ ಹುಡುಗ. ಅದರಲ್ಲೂ ಕಾಲೇಜು ವಿದ್ಯಾರ್ಥಿ. ಇಷ್ಟರಲ್ಲೇ ನನಗೆ ನೆನಪಿನ ನೆಲವೇ ಇಲ್ಲವಲ್ಲ! ನಾನು ನೋಡಿದ ಎಷ್ಟೋ ಜನ, ಅಜ್ಜ ಮುತ್ತಜ್ಜಂದಿರು ಕೂಡ, ತಮ್ಮ ಹಳೆಹಳೆಯ ನೆನಪುಗಳನ್ನು ನಲಿದಾಡುತ್ತಾ ಹೇಳುತ್ತಾರೆ.

ಥೂ! ಎಷ್ಟು ನೆನೆಸಿಕೊಂಡರೂ ನೆನಪಿಗೆ ಏನೂ ಬರುವುದಿಲ್ಲ. ಯೋಚಿಸಿದೆ. ಕೆಲವರು, ಯೋಚನೆ ಮಾಡುವಾಗ ತಮ್ಮ ಕುಡಿ ಮೀಸೆಗಳನ್ನು ಬಾಯೊಳಕ್ಕೆ ತುಟಿಗಳಿಂದ ಎಳೆದುಕೊಳ್ಳುತ್ತಾರಂತೆ. ಅವರಿಗೆ, ಹಾಗೆ ಮಾಡಿದರೆ, ಭಾವನಾತರಂಗಗಳು ರಭಸದಲ್ಲಿ ನುಗ್ಗುವುವಂತೆ. ನಾನೂ ಆ ರೀತಿ ವರ್ತಿಸೋಣವೆಂದು ತುಟಿಗಳನ್ನು ಚಪ್ಪರಿಸಿದೆ. ಆದರೆ ತುಟಿಗೆ ಏನೂ ಸಿಕ್ಕಲಿಲ್ಲ. ಮೀಸೆ ಹುಟ್ಟಿದ್ದರೆ ತಾನೆ ಯೋಚನೆ ಹೊಳೆಯುವುದು! ಏನೂ ಹೊಳೆಯಲಿಲ್ಲ.

ಓಹೋ! ಈಗ ಗೊತ್ತಾಯಿತು. ನಾನು ಒಂದು ಸಲ ಒಬ್ಬ ಕನ್ನಡ ಉಪನ್ಯಾಸಕರ ಉಪನ್ಯಾಸವನ್ನು ಕೇಳಲು ಕಾಲೇಜ್ ಅಂಗಳಕ್ಕೆ ಬಂದಿದ್ದೆ. ಅವರಿಗೆ ಉಪನ್ಯಾಸಮಾಡುತ್ತಿರುವ ಮಧ್ಯದಲ್ಲಿ ಯೋಚನೆಗಳು ಮರೆತು ಹೋಗುತ್ತಿತ್ತೆಂದು ತೋರುತ್ತದೆ. ಆ ಸಂದರ್ಭದಲ್ಲಿ ಅವರು ವೇದಿಕೆಯ ಮುಂಗಡೆಗೆ ಬಂದು ಸ್ವಲ್ಪ ಬಗ್ಗಿ ತಮ್ಮ ಕೈಯ ಒಂದು ಬೆರಳಿನಿಂದ ಹಣೆಯ ಮುಂಭಾಗವನ್ನು ಮೂರು ಸಲ ಕುಟ್ಟುತ್ತಿದ್ದರು. ಹಾಗೆ ಕುಟ್ಟಿದರೆ ಅವರ ಬುದ್ಧಿ ಕುದುರುತ್ತಿತ್ತಂತೆ. ನಾನೂ ಆ ರೀತಿ ಕುಟ್ಟಿಕೊಂಡೆ. ನನ್ನ ಹಣೆಗೆ ಪೆಟ್ಟಾಯಿತೇ ಹೊರತು ನನ್ನ ಮರವೆಗೆ ಪೆಟ್ಟು ಬೀಳಲಿಲ್ಲ.

ನಮ್ಮ ಉಪಾಧ್ಯಾಯರೊಬ್ಬರು ಮಾಡುವಂತೆ ಕೈಯಲ್ಲಿ ಸೀಮೆಯ ಸುಣ್ಣವನ್ನು ಹಿಡಿದುಕೊಂಡು ಕೆಳಗೂ ಮೇಲೂ ಹಣೆಯ ಹತ್ತಿರ ಆಡಿಸೋಣವೆಂದು ಎನ್ನಿಸಿತು. ಆದರೆ ಜೇಬಿನಲ್ಲಿ ಹುಡುಕಿದರೂ ಸೀಮೆಯ ಸುಣ್ಣ

ಸಿಕ್ಕಲಿಲ್ಲ. ಅದು ಸೀಮೆಗೇ ಹೊರಟುಹೋಗಿತ್ತು. ಕಡೆಗೆ ಹುಡುಕಿ, ದೇಶ್ಯದ ಸುಣ್ಣವನ್ನೇ ತೆಗೆದು ಕೈಯಾಡಿಸಿದೆ.

ಉಹುಂ! ಬುರುಡೆಗೇನೂ ಹೊಳೆಯಲಿಲ್ಲ. ಅದರೊಳಗೆ ಏನಾದರೂ ಇದ್ದರೆ ತಾನೆ, ಈಚೆಗೆ ಹೊರಬೀಳುವುದು! ಅದು ಹೊರಬೀಳುವ ಬದಲು, ಹಣೆಗೆ ಸುಣ್ಣದ ಬರೆಗಳು ಹೊಲಸಾಗಿ ಬಿದ್ದಿದ್ದುವು. ಅದನ್ನು ನೋಡಿ ನನ್ನ ಅಕ್ಕಪಕ್ಕದ ಹುಡುಗರು ನಿಶ್ಶಬ್ದವಾಗಿ ನಗುತ್ತಿದ್ದರು. ಮೊದಲು ಅವರು ಏಕೆ ನಗುವರೆಂದು ತಿಳಿಯಲಿಲ್ಲ. ಸ್ನೇಹಿತರೆಲ್ಲರೂ ತಮ್ಮ ತಮ್ಮ ಹಣೆಗಳನ್ನು ಮುಟ್ಟಿಕೊಳ್ಳತೊಡಗಿದರು. ನಾನೂ ನನ್ನ ಹಣೆಯನ್ನು ಮುಟ್ಟಿಕೊಂಡೆ. ಆಗ ಗೊತ್ತಾಯಿತು, ನನ್ನ ಬಾಬಯ್ಯನ ವೇಷ. ಹಣೆಯನ್ನು ಒರೆಸಿಕೊಂಡೆ. ಏನೇನು ಮಾಡಿದರೂ ಯಾವ ಭಾವನೆಯೂ ನನ್ನಲ್ಲಿ ಮೂಡಲಿಲ್ಲ.

ಯಾವ ನೆನಪೂ ಆಗದ ಮೇಲೆ ಬರೆಯುವುದೇನು? "ಮೊಟ್ಟಮೊದಲಿನ ನೆನಪನ್ನು ಬರೆ" ಎಂದು ಕಟ್ಟಪ್ಪಣೆ ಬೇರೆ. ನನಗೆ ನೆನಪು ಅಡಗಿಹೋಗಿದೆ. ಎಂದಮೇಲೆ, ನನ್ನ ಮೊಟ್ಟಮೊದಲ ನೆನಪು ನನಗೆ ಕಟ್ಟಕಡೆಗೂ ಬರಲೊಲ್ಲದು ಎಂದು ತಿಣ್ಣನೆ ತೀರ್ಮಾನಮಾಡಿದ್ದೇನೆ.

—ಕೆ. ಅನಂತನಾರಾಯಣರಾವ್.

## ೨. ಮೊಗ್ಗಿನ ಜಡೆ

ನನ್ನ ತಂದೆ ತಾಯಿಯವರಿಗೆ ಹೆಣ್ಣುಮಕ್ಕಳೆಂದರೆ ಬಹಳ ಇಷ್ಟ. ಆದರೆ ಅವರಿಗೆ ನಾನೆ ಜ್ಯೇಷ್ಠಪುತ್ರ.

ನನಗೆ ಆಗ ಸುಮಾರು ಐದು ವರುಷವಾಗಿದ್ದಿರಬಹುದು. ಒಂದು ದಿನ ನಮ್ಮ ತಾಯಿಯವರೊಂದಿಗೆ ಮಧ್ಯಾಹ್ನ ಊಟಮಾಡಿ ಹೊರಗೆ ಜಗುಲಿಯ ಮೇಲೆ ಕಡಲೆಕಾಯಿ ತಿನ್ನುತ್ತ ಕುಳಿತಿದ್ದೆನು. ನಮ್ಮ ತಂದೆ ಮನೆಗೆ ಬರುವಾಗ ಸುಮಾರು ಒಂದು ಒಂದೂವರೆ ಸೇರಿನಷ್ಟು ಮಲ್ಲಿಗೆಯ ಹಣ್ಣುಮೊಗ್ಗನ್ನು ತಂದರು. ಆಗ ನಮ್ಮ ಮನೆಯಲ್ಲಿ ನಮ್ಮ ತಾಯಿ ಹೊರತು ಯಾರೂ ಹೂ ಮುಡಿದುಕೊಳ್ಳುವ ಹೆಂಗಸರಿಲ್ಲದೆ ಇದ್ದದ್ದರಿಂದ ಅಷ್ಟೊಂದು ಮೊಗ್ಗನ್ನು ನೋಡಿ ನನಗೆ ಬಹಳ ಆಶ್ಚರ್ಯವಾಯಿತು.

ಮಧ್ಯಾಹ್ನ ಸುಮಾರು ಎರಡು ಗಂಟೆಯ ಹೊತ್ತಿನಲ್ಲಿ ನಮ್ಮ ತಾಯಿ ನನ್ನನ್ನು ಎದುರಿಗೆ ಕೂರಿಸಿಕೊಂಡು ಮೊಗ್ಗನ್ನು ಎದುರಿಗೆ ಹರಡಿಕೊಂಡು ಕುಳಿತರು. ಆಗ ನನಗೆ ಬಹಳ ಆಶ್ಚರ್ಯವಾಯಿತು. ಅಂದು ನನ್ನ ಚೌಲಕ್ಕೆ ಹಿಂದಿನ ದಿವಸ. ನನಗೆ ಮೊಗ್ಗಿನ ಜಡೆ ಹಾಕಿ, ಎದುರು ಮನೆಯ ಹುಡುಗಿಯ ಸೀರೆ ಒಡವೆಗಳನ್ನು ತಂದು ತೊಡಿಸಿ ಆನಂದಪಡುತ್ತಿದ್ದರು. ಸಾಯಂಕಾಲ ಸುಮಾರು ನಾಲ್ಕೂವರೆ ಗಂಟೆಯ ಹೊತ್ತಿಗೆ ಒಂದು ಫೋಟೋ ತೆಗೆಯುವ ಅಂಗಡಿಗೆ ಹೋಗಿ ಫೋಟೊ ಹಾಕಿಸಿದರು. ಆ ಫೋಟೊವನ್ನು ಈಗ ನೋಡಿದರೂ ತಮಾಷೆಯಾಗಿದೆ.

ಮಾರನೇ ದಿವಸವೇ ನನ್ನ ತಲೆಯ ಜುಟ್ಟೆಲ್ಲಾ ಎಗರಿಹೋಯಿತು.

—ಬಿ. ಆರ್. ಗರುಡಾಚಾರ್.

## ೩. ನನ್ನ ತಾಯಿ

ಆಗ ನನಗೆ ಐದು ವರ್ಷ. ಚಾಮರಾಜನಗರದಲ್ಲಿದ್ದೆ. ಒಂದು ದಿನ ಸ್ಕೂಲಿನಲ್ಲಿ ಕೂತಿದ್ದೆ. ಯಾರೋ ಬಂದು ಮನೆಗೆ ಕರೆದುಕೊಂಡುಹೋದರು. 'ಏತಕ್ಕೆ?' ಎಂದು ಕೇಳಿದೆ. 'ನಿಮ್ಮ ತಾಯಿ ಹೋಗಿಬಿಟ್ಟರು' ಎಂದು ಹೇಳಿದರು. 'ಎಲ್ಲಿಗೆ?' ಎಂದು ಕೇಳಿ ಮೌನದಿಂದ ಅವರನ್ನು ಹಿಂಬಾಲಿಸಿದೆ.

ಮನೆಯಲ್ಲಿ ಎಲ್ಲಿ ನೋಡಿದರೂ ನಿಶ್ಶಬ್ದ. ಹಿಂದೆ ಎಂದೂ ಹಾಗೆ ಇದ್ದುದನ್ನು ನಾನು ಕಂಡಿರಲಿಲ್ಲ. ಅವತ್ತು ಕಂಡೆ. ಆಗ ತಿಳಿಯಿತು, ನಮ್ಮ ತಾಯಿ ಸತ್ತುಹೋಗಿದ್ದರೆಂದು.

ನನ್ನನ್ನು ಯಾರೋ ಭುಜದ ಮೇಲೆ ಕೂರಿಸಿಕೊಂಡು ಹೋದರು. ಎಲ್ಲಿಗೋ ನನಗೆ ತಿಳಿಯಲಿಲ್ಲ. ಶ್ಮಶಾನಕ್ಕೆ ಎಂದು ಈಗ ತಿಳಿಯುತ್ತದೆ. ಅಲ್ಲಿ ಏನಾಯಿತೋ ಯಾವುದೂ ನನಗೆ ನೆನಪಿಲ್ಲ. ಅಂತೂ ಇಂತೂ ಗಗನಕ್ಕೆ ಮುಟ್ಟು ವಂತೆ ಏರುತ್ತಿದ್ದ ಉರಿಯನ್ನು ಕಂಡೆ, ನನ್ನನ್ನು ಅಲ್ಲಿಯೇ ಇದ್ದ ಕೊಳದಲ್ಲಿ ಮುಳುಗಿಸಿದುದು ಜ್ಞಾಪಕವಿದೆ.

ಆ ದಿನದಿಂದ ಈಚೆಗೆ ನಡೆದ ಎಷ್ಟೋ ವಿಷಯಗಳು ಜ್ಞಾಪಕದಲ್ಲಿವೆ. ಆ ದಿನದ ವಿಷಯ ಜ್ಞಾಪಕಕ್ಕೆ ಬಹಳ ದಿವಸ ಬಂದಿದೆ. ಆದರೆ ನಮ್ಮ

ತಾಯಿಯ ಜೊತೆಯಲ್ಲಿ ನಾನು ಇದ್ದ ದಿನಗಳು ಸ್ವಲ್ಪವೂ ಜ್ಞಾಪಕವಿಲ್ಲ. ಅದು ಏಕೋ ತಿಳಿಯದು. ಆ ದಿವಸ ನಾನೂ ನಮ್ಮ ತಂದೆಯೂ ಸಂಜೆ ಹೊತ್ತಿನಲ್ಲಿ ಮನೆಗೆ ಬಂದು ಊಟಮಾಡಿದೆವು. ಬಹಳ ಜನ ಬಂದು ನನ್ನನ್ನು ನೋಡಿ ನೋಡಿ ಅತ್ತರು. ಏಕೆ ಅಳುತ್ತಿದ್ದರೋ ನನಗೆ ಗೊತ್ತಾಗಲೇ ಇಲ್ಲ.

ನಮ್ಮ ತಾಯಿಯವರು ಹೇಗೆ ಇದ್ದರೊ ಅದೂ ನನಗೆ ತಿಳಿದಿಲ್ಲ. ಅಂದಿನಿಂದ ಈಚೆಗೆ ನಡೆದ ಸಂಗತಿಗಳು ಚೆನ್ನಾಗಿ ಜ್ಞಾಪಕದಲ್ಲಿವೆ. ಅದರ ಹಿಂದಿನದು ಸ್ವಲ್ಪವೂ ಅರಿವಿಲ್ಲ.

—ಎನ್. **ನಂಜುಂಡಶಾಸ್ತ್ರಿ.**

## ೪. ಜಡೆ ಹೆಣೆದ ನೆನಪು

ನಾನು ಸುಮಾರು ೪—೫ ವರ್ಷದ ಹುಡುಗನಾಗಿದ್ದಾಗ ಇನ್ನೂ ಆಧುನಿಕ ಸಮಾಜದ ನಡೆನುಡಿಗಳು ಅಷ್ಟು ಪ್ರಚಾರವಾಗಿರಲಿಲ್ಲ. ಆದ್ದರಿಂದ ನನಗೆ ನನ್ನ ತಂದೆತಾಯಿಗಳು ಕ್ರಾಪ್ ಗೀಪ್ ಏನೂ ಬಿಡಿಸದೆ ತುಂಬಾ ಜುಟ್ಟು ಬಿಡಿಸಿ, ದಿನವೂ ಜಡೆ ಹೆಣೆಯುತ್ತಿದ್ದರು.

ನನಗೆ ಜಡೆ ಹೆಣೆಸಿಕೊಳ್ಳಬೇಕೆಂದರೆ ಬೇಜಾರು. ಎಷ್ಟುವಿಧವಾಗಿ ಅಮ್ಮನು ತಿಂಡಿಕೊಟ್ಟು "ನನ್ನ ಚಿನ್ನ, ಬಾಪ್ಪ, ಜಡೆ ಹೆಣೆಸಿಕೊ" ಎಂದರೂ ಹೋಗುತ್ತಿರಲಿಲ್ಲ. ಕಡೆಗೆ ಅವಳು ಕಣ್ಣು ಮುಚ್ಚಿಕೊಂಡು "ನೋಡು ಕಣ್ಣು ಮುಚ್ಚಿಕೊಂಡಿದ್ದೇನೆ. ಬಂದೆಯಾ, ಬಂದೆಯಾ, ಓ ಬಂದುಬಿಟ್ಟೆ ಜಾಣ!" ಎಂದು ಹೇಳಿದ ಮೇಲೆ ಹೋಗಿ ಜಡೆ ಹೆಣೆಸಿಕೊಳ್ಳಲು ಕುಳಿತುಕೊಳ್ಳುತ್ತಿದ್ದೆ. ಜಡೆಗೆ ಒಪ್ಪಿಸುವುದಕ್ಕೇ ಇಷ್ಟು ಕಷ್ಟ ಪಡುತ್ತಿದ್ದರು. ಸಿಕ್ಕು ಬಿಡಿಸುವಾಗಲಂತೂ ನಾನು ಏಳು ಎಂಟುಬಾರಿ ಎದ್ದು ಓಡಿಹೋಗದವನೇ ಅಲ್ಲ. ಅವರು ಏನೇನೋ ಉಪಾಯಮಾಡಿ, ಮುಂಜಡೆಯ ತುದಿಗೆ ಕಟ್ಟುವ ನಾರನ್ನು ಬಹಳ ಉದ್ದವಾಗಿ ಕಟ್ಟಿ ನನ್ನ ಕೈಗೆ ಕೊಟ್ಟು, ನನ್ನ ಮುಂದೆ ಒಂದು ಕೊಳದಪ್ಪಲೆಯಲ್ಲಿ ನೀರನ್ನು ಇಟ್ಟು, "ತೊಗೋ, ನಿನ್ನ ಕುದುರೆಗೆ ನೀರು ಕುಡಿಸು" ಎಂದು ಹೇಳಿ ಜಡೆ ಹೆಣೆಯುತ್ತಿದ್ದರು. ನಾನು ಆ ನಾರನ್ನು ಹಿಡಿದುಕೊಂಡು "ಕುರ್ರಿ, ಕುರ್ರಿ, ನೀರುಕುಡಿ. ಕುರ್ರಿ, ಕುರ್ರಿ, ನೀರುಕುಡಿ" ಎಂದು ಪಠನ ಮಾಡುತ್ತಾ ಜಡೆ ಹೆಣೆಸಿಕೊಳ್ಳುತ್ತಿದ್ದೆ.

ಒಂದು ದಿನ ಇದೇ ರೀತಿಯಾಗಿ ಜಡೆ ಹೆಣಿಸಿಕೊಳ್ಳುತ್ತಿರಲು ನಾನು ಓಡಿಹೋದೆ. ಅಮ್ಮನು ಎರಡು ಪೆಟ್ಟು ಕೊಟ್ಟು, ಜುಟ್ಟು ಹಿಡಿದು ಜುಂಗಿಸಿ ಎಳೆದುಕೊಂಡು ಬಂದು ಜಡೆಹೆಣೆಯುವುದಕ್ಕೆ ಕೂರಿಸಿದಳು. ನಾನು ಪೆಟ್ಟು ತಿಂದು ಕುಪಿತನಾಗಿ 'ವೆ!' ಎಂದು ನಾಲಿಗೆಯನ್ನು ನೀಡಿ ಪ್ರಾಣಬಿಟ್ಟವನಂತೆ ನಟಿಸುತ್ತಾ ಮಲಗಿಕೊಂಡುಬಿಟ್ಟೆ. ಎಷ್ಟೇ ಉಪಚಾರ ಮಾಡಿದರೂ ಏಳಲೇ ಇಲ್ಲ. ಕಡೆಗೆ ಅಮ್ಮನು "ದ್ರಾಕ್ಷಿ ಹಣ್ಣು ಅಂಗಡಿಯಿಂದ ತರಿಸಿಕೊಡುತ್ತೇನೆ, ಏಳಪ್ಪ" ಎಂದು ಹೇಳಿದ ಮೇಲೆ ದ್ರಾಕ್ಷಿ ಹಣ್ಣಿನ ಆಸೆಗೋಸ್ಕರ ಎದ್ದೆ. ದ್ರಾಕ್ಷಿ ಹಣ್ಣನ್ನೂ ತಿಂದೆ.

'ಸಾವಿನ ಸಮಸ್ಯೆ'ಯ ತೆನ್ನಾಲಿ ರಾಮಕೃಷ್ಣನ ಪಾತ್ರವನ್ನು ನಾನು ಬಾಲ್ಯದಲ್ಲಿಯೇ ಪಾತ್ರಿಸಿದ್ದೆನು.

—ಕೆ. ಶ್ರೀಕಂಠಯ್ಯ.

## ೫. ಹಾಲೆರೆಯುವ ಬಟ್ಟಲು ಹರಳೆಣ್ಣೆ

ನನ್ನ ಮೊದಲ ನೆನಪು ಒಂದು ಪಾತ್ರೆ, ಹಾಲೆರೆಯುವ ವಿಚಿತ್ರವಾದ ಒಂದು ಬಟ್ಟಲು. ನಮ್ಮ ತಾಯಿಯವರು ಅದರಲ್ಲಿ ನನಗೆ ಬಲವಂತವಾಗಿ ಹಾಲು ಕುಡಿಸುತ್ತಿದ್ದರು.

ಒಂದು ದಿನ ಬೆಳಗ್ಗೆ ನಾನು ಹಾಸಿಗೆಯಿಂದ ಎದ್ದ ಕೂಡಲೆ ನಮ್ಮ ತಾಯಿ ನನ್ನನ್ನು ಅಡಿಗೆಮನೆಗೆ ಕರೆದರು. ಪಕ್ಕದ ಮನೆ ಮುದುಕಮ್ಮನವರೊಬ್ಬರು ಮತ್ತು ನಮ್ಮ ಚಿಕ್ಕಮ್ಮ ಅಡಿಗೆಮನೆಯಲ್ಲಿಯೇ ಇದ್ದರು. ಅಡಿಗೆ ಮನೆಯ ತುಂಬ ಕಾಯಿಸಿದ ಹರಳೆಣ್ಣೆಯ ನಾತ ಹೊಡೀತಿತ್ತು. ನಮ್ಮ ತಾಯಿ ನನ್ನನ್ನು ತೊಡೆಮೇಲೆ ಮಲಗಿಸಿಕೊಂಡು ನಮ್ಮ ಚಿಕ್ಕಮ್ಮನಿಗೆ ನನ್ನ ಕೈಕಾಲುಗಳನ್ನು ಬಿಗಿಯಾಗಿ ಹಿಡಿದುಕೊಳ್ಳುವಂತೆ ಹೇಳಿದರು. ನಮ್ಮ ಚಿಕ್ಕಮ್ಮ ಮತ್ತು ನೆರೆಮನೆಯ ಮುದುಕಿ ಇಬ್ಬರೂ ನನ್ನ ಕೈ ಕಾಲುಗಳನ್ನು ಅಲುಗಾಡದ ಹಾಗೆ ಬಂಧಿಸಿದರು.

ನಮ್ಮ ತಾಯಿ, ನಾನು ಮೊದಲೇ ಹೇಳಿದ ವಿಚಿತ್ರವಾದ ಹಾಲುಬಟ್ಟಲಿಗೆ ಹರಳೆಣ್ಣೆ ತುಂಬಿ ನನ್ನ ಬಾಯ ಬಳಿಗೆ ತಂದರು. ನನ್ನ ಅವಸ್ಥೆ, ಬೇಡ. 'ನಾನಿನ್ನೂ ಹಲ್ಲೇ ಉಜ್ಜಿಲ್ಲ' ಎಂದೆ. ನನ್ನ ಮಾತು ಯಾರಿಗೂ ಕೇಳಿಸಲಿಲ್ಲ.

ಎರಡು ದವಡೆಗಳನ್ನೂ ಬಿಗಿಯಾಗಿ ಅದುಮಿಕೊಂಡೆ. ನಮ್ಮ ತಾಯಿ ಆ ಬಟ್ಟಲಿನ ಚೂಪಾದ ಬಾಯನ್ನು ನನ್ನ ಹಲ್ಲುಗಳ ಮಧ್ಯೆ ಇರುಕಿ ಬಹುಪ್ರಯಾಸದಿಂದ ಎಣ್ಣೆ ಕುಡಿಸಿಯೇಬಿಟ್ಟರು. ೪-೫ ಬಟ್ಟಲು ತುಂಬ ಎಣ್ಣೆ ಕುಡಿದುದಾಯಿತು. ನನ್ನ ಮೂಗನ್ನು ಐದು ನಿಮಿಷ, ಎಣ್ಣೆ ಕುಡಿಸಿ ಆದ ಮೇಲೂ, ಹಿಡಿದುಕೊಂಡೇ ಇದ್ದರು; ನನ್ನ ಕೈ ಕಾಲುಗಳನ್ನು ಮಾತ್ರ ಅಲುಗಾಡಿಸಲು ಬಿಟ್ಟಿದ್ದರು.

ಮುಂದಿನದನ್ನು ಹೇಳಬೇಕಾಗಿಲ್ಲ.

—ವಿ. ಸುಬ್ರಹ್ಮಣ್ಯಂ.

## ೬. ನನ್ನ ನಾಯಿಮರಿ

ನನಗೆ ಆಗ ಐದಾರು ವರ್ಷ ವಯಸ್ಸು. ನಾಯಿಮರಿ ಕಂಡರೆ ಬಹಳ ಆಸೆ. ಒಂದು ದಿನ ನನ್ನ ಆಸೆಗೆ ತಕ್ಕಂತೆ ಒಂದು ಸಣ್ಣ ನಾಯಿಮರಿಯನ್ನು ತಂದರು.

ನಾಯಿಯನ್ನು ತಂದಮೇಲೆ ಅದನ್ನು ಒಂದು ಗಳಿಗೆಯೂ ಬಿಡದೆ ಸಾಕುತ್ತಿದ್ದೆ. ಮನೆಯೊಳಕ್ಕೆ ನಾಯಿ ತಂದರೆ ದೊಡ್ಡವರು ಅಸಹ್ಯಪಟ್ಟುಕೊಳ್ಳುತ್ತಿದ್ದರು. ಆದುದರಿಂದ ಅದನ್ನು ಬೇರೆಡೆಯಲ್ಲಿ ಕಟ್ಟಬೇಕಾಗಿದ್ದಿತು.

ದನದ ಕೊಟ್ಟಿಗೆಯಲ್ಲಿ ಕಟ್ಟಿದರೆ, ಹಸು ಎಲ್ಲಿ ತುಳಿದುಬಿಡುವುದೋ ಎಂಬ ಭಯದಿಂದ ಅದಕ್ಕೆ ಮೋಟಾರ್ ಲಾಯದಲ್ಲಿ ಒಂದು ಸ್ಥಳವನ್ನು ಏರ್ಪಡಿಸಿದೆವು. ನಾಯಿಯು ಮೋಟಾರಿನ ಚಕ್ರಕ್ಕೆ ಬಲಿಯಾಗುವುದನ್ನು ತಪ್ಪಿಸಲು ಪ್ರತಿದಿನವೂ ನಾಯಿಯ ಮೇಲೆ ಒಂದು ಡಬ್ಬವನ್ನೋ ಬುಟ್ಟಿಯನ್ನೋ ಮುಚ್ಚುತ್ತಿದ್ದೆವು.

ಹೀಗೆಯೇ ಇರುವಾಗ, ಒಂದು ದಿನ ಮೋಟಾರನ್ನು 'ರಿಪೇರಿ' ಮಾಡಲು ಲಾಯದಲ್ಲಿದ್ದ 'ಪಿಟ್ಟ'ನ ಮೇಲೆ ಮುಚ್ಚಿದ್ದ ಹಲಗೆಯನ್ನು ತೆಗೆದಿದ್ದರು. ಮೋಟಾರಿನ 'ರಿಪೇರಿ'ಯಾಯಿತು. ಅದನ್ನು 'ಟ್ರಯಲ್' ನೋಡಲು ಕೊಂಡುಹೋದರು. ನನಗೂ ಆಸೆಯಾದುದರಿಂದ ಕಟ್ಟಿದ್ದ ನಾಯಿಯನ್ನು ಹಾಗೆಯೇ ಬಿಟ್ಟು ಮೋಟಾರಿನಲ್ಲಿ ಕುಳಿತು ಹೊರಟುಹೋದೆ.

ದೊಡ್ಡ 'ಟ್ರಯಲ್ ರೌಂಡು' ಆದನಂತರ ಲಾಯಕ್ಕೆ ಹಿಂದಿರುಗಿದೆವು.

ಅಲ್ಲಿ ನೋಡಲು, ನಾಯಿಯು 'ಪಿಟ್ಟ' ನಲ್ಲಿ ಬಿದ್ದು ನೇಣು ಹಾಕಿಕೊಂಡಿತ್ತು. ನನಗೆ ಬಹಳ ದುಃಖವಾಯಿತು.

ಇದು ನನ್ನ ಮೊದಲ ನೆನಪು.

—ವೈ. ಆರ್. ಪೂರ್ಣಯ್ಯ.

## ೭. ಶನಿವಾರಶೆಟ್ಟಿ

ನಾನು ಹುಟ್ಟಿದ್ದು ಮೈಸೂರಿನಲ್ಲಿ ಆದರೂ ಶೈಶವ ಕಳೆದದ್ದು ಹಳ್ಳಿಯಲ್ಲಿ. ನನ್ನ ಈ ನೆನಪು ಆದಾಗ ಸುಮಾರು ನಾಲ್ಕು ವರ್ಷವಿರಬಹುದು. ನಮ್ಮ ಹಳ್ಳಿಯಲ್ಲಿ ಇನ್ನೂ ಅನೇಕರು ಬ್ರಾಹ್ಮಣ ಹುಡುಗರಿದ್ದರು ಕೂಡ, ಅವರೆಲ್ಲರೂ ಶೋಂಭೇರಿಗಳು, ಮೂಗಿನಲ್ಲಿ ಶಿಂಬಳ. ಪಟ್ಟಣ ವಾಸದವರೇನಾದರು ಅವರನ್ನು ನೋಡಿದ್ದರೆ "ಇದೇನು, ಬ್ರಾಹ್ಮಣ ಹುಡುಗರ ಹಾಗಿಲ್ಲವಲ್ಲ!" ಎನ್ನುತ್ತಿದ್ದರು.

ನಾನು ನಮ್ಮ ತಂದೆಗೆ ಮೊದಲನೆಯ ಮಗ. ನನ್ನನ್ನು ಮೈಸೂರಿನಿಂದ ಕರೆದುಕೊಂಡು ಹೋಗುವಾಗ ಬಟ್ಟೆಬರೆ ಮೊದಲಾದುವನ್ನು ಹೊಲಿಸಿ, "ಐನೋರ ಮಗಾವರು" ಎಂದು ಗೊತ್ತಾಗಲೆಂದು ಕ್ಲೀನಾಗಿ ಡ್ರೆಸ್ಸು ಮಾಡಿದರು. ಬಸ್ಸಿನಲ್ಲಿ ಹೊರಟುದಾಯಿತು. ನಮ್ಮ ಮನೆಯ ಗಾಡಿ ರಸ್ತೆಯ ಹತ್ತಿರಕ್ಕೆ ಬಂದಿತ್ತು. ಹಳ್ಳಿಯನ್ನು ಸೇರಿದೆವು. ಸುಮಾರು ಎಂಟು ದಿನಗಳೊಳಗಾಗಿ ನನಗೆ ಕೊಂಚ ಕೊಂಚ ಊರಿನವರ ಪರಿಚಯವಾಯಿತು. ಎಲ್ಲರೂ ನನ್ನ ಬಟ್ಟೆ ಬರೆ ನೋಡಿ, ನನ್ನನ್ನು ಎತ್ತಿಕೊಂಡು ಹೋಗುತ್ತಿದ್ದರು.

ನಮ್ಮೂರಿನಲ್ಲಿ ಇದ್ದದ್ದು ಒಂದೇ ಅಂಗಡಿ. ಅದರ ಮಾಲೀಕನ ಹೆಸರು ಶನಿವಾರಶೆಟ್ಟಿ. ನಾನು ಅವನನ್ನು "ಶನಿವಾರ! ಲೋ! ಭಾನುವಾರ!" ಎಂದು ಕೂಗಿ ರೇಗಿಸುತ್ತಿದ್ದೆ. ಅವನು ಕೋಪಮಾಡಿಕೊಂಡರೂ ತನ್ನ ಅಂಗಡಿಗೆ ದಿನವೂ ನನ್ನನ್ನು ಎತ್ತಿಕೊಂಡು ಹೋಗಿ ಹಳೆಯ ಕೊಬರಿಮಿಠಾಯಿ ಮುಂತಾದುವನ್ನು ಕೊಡುತ್ತಾ ಇದ್ದ. ನನಗೆ ಅವನ ಪರಿಚಯ ತುಂಬ ಇತ್ತು.

ಒಂದು ದಿನ ನಮ್ಮ ತಂದೆ ತೋಟಕ್ಕೆ ಹೋಗಿದ್ದರು. ನಮ್ಮ ತಾಯಿ ಅಡುಗೆ ಮಾಡುತ್ತಿದ್ದರು. ನಾನು ದನದ ಕೊಟ್ಟಗೆಯಲ್ಲಿ ಕರುಗಳ ಕೈಲಿ ಆಟವಾಡುತ್ತಿದ್ದೆ. ಶನಿವಾರಶೆಟ್ಟಿ ಮನೆಗೆ ಬಂದು, ದನದ ಕೊಟ್ಟಗೆಯಲ್ಲಿದ್ದ

ನನ್ನನ್ನು ಎತ್ತಿಕೊಂಡು ಅಂಗಡಿಗೆ ಹೋಗಿ, ಮಿಠಾಯಿ ಕಡಲೆಪುರಿ ಕೊಟ್ಟ. ಮಧ್ಯಾಹ್ನವಾಗಿತ್ತು. ಮಗು ಎಲ್ಲಿಗೆ ಹೋಯ್ತೋ ಎಂದು ನಮ್ಮ ತಾಯಿ ಮನೆಮನೆಗೂ ಹುಡುಕಿಕೊಂಡು ಹೊರಟರು. ಕಡೆಗೆ ಅಂಗಡಿ ಇದ್ದ ಬೀದಿಗೆ ಬಂದರು. ಶನಿವಾರ ಅವರನ್ನು ನೋಡಿದೇಟಿಗೆ ನನ್ನನ್ನು ಕೋಳಿ ಕೂಡು ಹಾಕುತ್ತಿದ್ದ ದಪ್ಪ ಬುಟ್ಟಿಯಲ್ಲಿ ಕೂಡಿಸಿಬಿಟ್ಟ. ನಾನು ಬೆಪ್ಪುಬೆಪ್ಪಾಗಿ ಕೂತಿದ್ದೆ. ನಮ್ಮ ತಾಯಿ ಶನಿವಾರನನ್ನು "ಶನಿವಾರ, ನಿನ್ನ ಅಂಗಡಿಗೆ ನಮ್ಮ ಹುಡುಗ ಬಂದಿದ್ದನೆ?" ಎಂದು ಕೇಳಿದರು. ಅವನು "ಇಲ್ಲ" ಎಂದುಬಿಟ್ಟ.

ಅಷ್ಟು ಹೊತ್ತಿಗೆ ನಮ್ಮ ತಂದೆ ತೋಟದಿಂದ ಮನೆಗೆ ಬಂದರೆಂದು ಕಾಣುತ್ತೆ. ನಮ್ಮ ತಾಯಿ ಮನೆಯಲ್ಲಿರಲಿಲ್ಲ. ನಮ್ಮ ತಾಯಿ ಪುತ್ರಾನ್ವೇಷಣಕ್ಕೆ ಹೊರಟಿದ್ದರೆ, ನಮ್ಮ ತಂದೆ ಭಾರ್ಯಾನ್ವೇಷಣ ಮತ್ತು ಪುತ್ರಾನ್ವೇಷಣವೆಂಬ ಎರಡು ಕೆಲಸಕ್ಕೂ ಹೊರಟರು.

ನಮ್ಮ ತಾಯಿ ಹಿಂದಕ್ಕೆ ಕೊಂಚ ದೂರ ಹೋಗಿದ್ದರು. ಶನಿವಾರ ನನ್ನನ್ನು ನೋಡಿ "ಸ್ವಾಮಿ, ಏನೋರು ಬರ್‍ತಾ ಅವ್ರೆ. ಅವ್ರು ಬಂದ್ರೆ, ನಾನು 'ಬಂದಿಲ್ಲ' ಅಂತ ಹೇಳ್ತೀನಿ. ನೀವು ಅಷ್ಟು ಹೊತ್ತಿಗೆ ಕೋಳಿ ತರ ಕೂಗಿ" ಎಂದ. ನಮ್ಮ ತಾಯಿ ನಮ್ಮ ತಂದೆ ಕೈಲಿ "ಹುಡುಗ ಎಲ್ಲೋ ತಪ್ಪಿಸಿಕೊಂಡುಬಿಟ್ಟ" ಎಂದರು. ನಮ್ಮ ತಂದೆ "ಶನಿವಾರ, ಇಲ್ಲಿಗೆ ನಮ್ಮ ಹುಡುಗ ಬಂದಿದ್ದಾನೆಯೆ?" ಎಂದರು. ಅವನು "ಇಲ್ಲ" ಎಂದ. ನಾನು ಅಷ್ಟುಹೊತ್ತಿಗೆ "ಕೋ! ಕೋ! ಕೋ!" ಎಂದೆ. ನಮ್ಮ ತಂದೆಗೆ ಊಟ ಆಗಿರಲಿಲ್ಲ. ಕೋಪದಿಂದ ಬಂದು ಬುಟ್ಟಿ ತೆಗೆದಿದ್ದೇ, ಬೆನ್ನಿನ ಮೇಲೆ ಒಂದೇ ಒಂದು ಏಟು ಕೊಟ್ಟರು.

ನಾನು ಕೋಳಿಸ್ವರದ ಜೊತೆಗೆ ಗಾರ್ದಭಸ್ವರವನ್ನೂ ಜೋಡಿಸಬೇಕಾಯಿತು. ಹಾಗಿತ್ತು ಆ ಏಟು!

—ಎಸ್. ಲಕ್ಷ್ಮೀನಾರಾಯಣ.

## ೮. ಕಡೇ ಕಾರ್ತಿಕ ಸೋಮವಾರ

ಸುಮಾರು ನಾಲ್ಕು ವರ್ಷ ಆಗಿತ್ತೋ ಇಲ್ಲವೋ ಗೊತ್ತಿಲ್ಲ. ಮನೇಲಿ ಎಲ್ಲರೂ ಸೋಮೇಶ್ವರನ ದೇವಸ್ಥಾನಕ್ಕೆ ಹೊರಟುಹೋಗಿದ್ದರು. ಅವತ್ತು ಕಡೇ ಕಾರ್ತಿಕ ಸೋಮವಾರ. ಸ್ಕೂಲಿನಿಂದ ಐದು ಗಂಟೆಗೆ ಬಂದೆ. ಬಾಗಿಲು

ಚಿಲಕ ಹಾಕಿತ್ತು. ಕೂಡಲೆ ಒಳಗೆ ಹೋಗಿ ಸ್ಲೇಟು ಪುಸ್ತಕ ತೆಗೆದಿಟ್ಟು, ಅಡುಗೆಮನೆಗೆ ಹೋಗಿ ಸ್ವಲ್ಪ ಕಡಲೆ ಉಸ್ಲಿ ರುಚಿ ನೋಡಿ ಹೊರಕ್ಕೆ ಬಂದೆ.

ಮರಿಗುಂಡ ಬಂದು ಬಾಗಿಲಲ್ಲಿ ನಿಂತಿದ್ದ. ಕೂಗಿದೆ. 'ಬಂದೆ' ಅಂತ ಬಂದ ಒಳಕ್ಕೆ. ಕದ ಹಾಕಲು ಇಬ್ಬರೂ ಪ್ರಯತ್ನಪಟ್ಟು ಕೊನೆಗೆ ಒಳಗಿನ ಅಗಣಿ ಹಾಕಿಬಿಟ್ಟೆವು. ಅದನ್ನು ತೆಗೆಯುವ ಯೋಚನೆ ಮಾತ್ರ ನಮಗಾಗ ಲಿಲ್ಲ. ಒಳಕ್ಕೆ ಹೋಗಿ ಅಡಿಗೆಮನೇಲಿ ಜಾಡೀಲಿದ್ದ ಉಪ್ಪಿನಕಾಯಲ್ಲಿ ನಾನು ೮ ಅವನು ೮ ಹಂಚಿಕೊಂಡು ತೊಳೆದು ತಿಂದೆವು. ಹಲ್ಲಿಗೆ ಉಪ್ಪಿನಕಾಯಿ ರುಚಿ ಹಿಡಿಯಿತು. ಸಣ್ಣ ಜಾಡಿಯಲ್ಲಿದ್ದದ್ದೆಲ್ಲಾ ನಮ್ಮ ಹೊಟ್ಟೆಯೊಳಕ್ಕಾಗಲೇ ಹೊರಟುಹೋಗಿತ್ತು. ಆಮೇಲೆ ಇಬ್ಬರೂ ಪ್ರಯಾಸಮಾಡಿ ದೊಡ್ಡ ಜಾಡಿ ಇಳಿಸಿಕೊಂಡು, ಇನ್ನೊಂದು ಅಷ್ಟಷ್ಟು ಉಪ್ಪಿನಕಾಯನ್ನು ತಿಂದಮೇಲೆ, ಉಪ್ಪಿನಕಾಯಿ ಮಡಿ ಅನ್ನೋದು ಜ್ಞಾಪಕಕ್ಕೆ ಬಂದು, ಬೇಗ ಅದನ್ನು ಅದರ ಸ್ಥಾನಕ್ಕೆ ಸೇರಿಸಿಬಿಡಬೇಕೆಂದು ಮಾಡಿದೆವು. ಉಸ್ಲಿ ತಿನ್ನಬಹು ದಾಗಿತ್ತು. ಆದರೆ ಕಳ್ಳತನ ಅವತ್ತಿನ ರಾತ್ರಿ ಮಂಗಳಾರತಿ ಹೊತ್ತಿಗೆ ಎಲ್ಲಾ ಗೊತ್ತಾಗಿ ಒದೆ ಬೀಳುತ್ತಿತ್ತು. ಅದೂ ಅಲ್ಲದೆ, ತೊಳೆದ ಉಪ್ಪಿನಕಾಯಿ— ಅದರಲ್ಲೂ ನೆಲ್ಲಿಕಾಯಿ ಉಪ್ಪಿನಕಾಯಿ—ಉಸ್ಲಿಗಿಂತ ರುಚಿ.

ಆಮೇಲೆ ಗೋವರ್ಧನಪರ್ವತ ಎತ್ತಿದಂತೆ ಇಬ್ಬರೂ ಉಪ್ಪಿನಕಾಯಿ ಪರ್ವತ ಎತ್ತಿ ಬದುವಿನ ಮೇಲಿಡುವಷ್ಟರಲ್ಲೇ ಮರಿಗುಂಡ ಕೈಬಿಟ್ಟ. ಧಡುಂನೆ ಜಾಡಿ ಬಿದ್ದು ಒಡೆದುಹೋಯಿತು. ಜಾಡಿ ಒಡೆದುಹೋದರೆ ಹೋಗಲಿ, ಉಪ್ಪಿನಕಾಯೆಲ್ಲಾ ಕೆಳಗಡೆ ಇದ್ದ ಕಲಗಚ್ಚಿನ ಡಬ್ಬಕ್ಕಷ್ಟೂ ಉಸಲಿ ಚಿಟ್ಟೆ ಗಷ್ಟೂ ಬಿದ್ದುಹೋಯಿತು. ಉಸ್ಲಿಗೇನೋ ಅವರು ಹೋಗುವಾಗ ಮುಚ್ಚಿಟ್ಟಿ ದ್ದರು. ನಾನು ಬಂದವನೇ ಕೈಕಾಲ್ಲೂ ತೊಳೀದೇಲೇ ಅದರ ರುಚೀನ ದೇವರಿ ಗಿಂತ ಮೊದಲೇ ನೋಡುವಾಗ ದೇವರಿಗೆ ಸಿಟ್ಟು ಬಂದು ಪುನಃ ಮುಚ್ಚೋ ಬುದ್ಧಿ ನನಗೆ ಕೊಡಲಿಲ್ಲ.

ನನಗೆ ಜಾಡಿ ಒಡೆದುದಕ್ಕೆ ಅಷ್ಟು ಹೆದರಿಕೆಯಾಗಲಿಲ್ಲ. ನಾನು "ಸದ್ಯ, ಉಸ್ಲೀಗೇನು ಮಾಡೋದು? ರಾತ್ರಿ, ಮಂಗಳಾರತೀಗೆ ಎಲ್ಲರೂ ಬರುತ್ತಾರಲ್ಲ; ಗೊತ್ತಾದರೆ ಅಮ್ಮನ ಕೈಲಿ ಎಷ್ಟು ಒದೆ! ಅಯ್ಯೋ!" ಎಂದು ಸುಮ್ಮನೆ ತಡಬಡಿಸುತ್ತಿದ್ದರೆ, ಮರಿಗುಂಡ ಏನೋ ಮಹಾ ಸಹಾಯ ಮಾಡುವವನ

ಹಾಗೆ ಸುತ್ತಲೂ ಇದ್ದ ಸಾಮಾನುಗಳನ್ನೆಲ್ಲಾ ತೆಗೆದು ಬದುವಿನ ಮೇಲೆ ಇಡಲಾರಂಭಿಸಿದ. "ಏನೊ, ಮರಿಗುಂಡ! ಈಗೇನು ಮಾಡೋದೊ?" ಅಂತ ನಾನು ಸುಮ್ಮನೆ ಕೊರಗುತಿದ್ದರೆ, ಮರಿಗುಂಡ "ತಡಿಯೊ. ಏನೂ ಹೆದರಿಕೆ ಬೇಡ. ಹ್ಯಾಗಿದ್ರೂ ಉಸ್ಲಿ ಖಾರ, ಉಪ್ಪಿನಕಾಯಿ ಖಾರ, ಸ್ವಲ್ಪ ಖಾರ ಆಗುತ್ತೆ ಅಷ್ಟೆ! ಉಸ್ಲಿ ಚಟ್ಟೀಲಿರೊ ಹೋಳುಗಳನ್ನೆಲ್ಲ ಆರಿಸು" ಎಂತ ಹೇಳಿದ.

ನಾನು ಹಾಗೇ ಮಾಡುತ್ತಿದ್ದೆ. ಗಸಗಸೆ ಪಟ್ಣ ತಂದ ಮರಿಗುಂಡ. ಅದು ಸ್ವಲ್ಪ ಉಪ್ಪಿನಕಾಯಿ ರಸದಿಂದ ನೆನೆದಿತ್ತು. ಪಾಪಿ, ತಂದೋನು ಮೇಲಕ್ಕೆ ಇಡೋವಾಗ ಜ್ಞಾನವಿಲ್ಲದೆಲೆ ಇಟ್ಟ; ಅದು ಉರುಳಿ ಬಂದು ಉಸುಲಿ ಚಟ್ಟಿಗೆ ಬಿತ್ತು. ಗಸಗಸೆಯೆಲ್ಲಾ ಹೊರಕ್ಕೆ ಬಂದು ಉಸ್ಲಿಕಾಳಿಗೆ ಹತ್ತಿಕೊಂಡುಬಿಟ್ಟಿತು. ನನಗೇನೂ ತೋಚಲಿಲ್ಲ. "ಅದು ಹೇಗಾದರೂ ಇರಲಿ, ಈ ಉಪ್ಪಿನಕಾಯಿ ರಸಾನೆಲ್ಲ ನೆಲದ ಮೇಲಿಂದ ಎತ್ತಿ ಬೇಗ ಸಾರಿಸಿಬಿಡೋಣ. ಆಮೇಲೆ ಹರಹರ ಮಹಾದೇವನೆ ಗತಿ!" ಎಂದು ಆರಂಭಮಾಡಿದೆವು.

"ಬಾಗಿಲು ತೆಗೆಯೊ, ಪಾಪ!" ಎಂದರು ಆಚೇಲಿ. ನನಗೆ ಹೇಗಾಯ್ತು ಅಂತ! "ಅಯ್ಯೋ, ಪಾಪಾನೋ! ಫಜೀತೀನೋ!" ಅಂತ ಬಂದು ಬಾಗಿಲು ತೆಗೆಯೋಣ ಅಂದರೆ, ಬಂದರೆ ತಾನೆ! ಆವಾಗ ಜ್ಞಾಪಕಕ್ಕೆ ಬಂತು, ಕದ ಹಾಕಿದವನು ನಾನೊಬ್ಬನೇ ಅಲ್ಲ—ಅಂತ. ಅವನೂ ಬಂದ. ಏನೇನು ಮಾಡಿದರೂ ಬರಲಿಲ್ಲ, ಕದ. ಕಡೆಗೆ ಏನೇನೋ ಮಾಡಿ ತೆಗೆದುದಾಯಿತು. ಅಮ್ಮ ಅಕ್ಕ ಎಲ್ಲಾ ಬಂದರು.

ನಾನು "ಅಮ್ಮ! ನೋಡು, ಬೆಕ್ಕು . . ." ಅನ್ನೋದರಲ್ಲಿ ಅವರೇ ಒಳಕ್ಕೆ ಹೋಗಿ ಎಲ್ಲವನ್ನೂ ಪರಾಂಬರಿಸಿದರು. "ಎಲ್ಲಿತ್ತೋ ಬೆಕ್ಕು?" ಅಂತ ಬಂದಿದ್ದೇ ಒಳಶುಂಠಿ ಹಿಡಿದರು. ಮರಿಗುಂಡನ ಕಡೆ ನೋಡುವಲ್ಲಿ ಅವನು ಪರಾರಿ! ಅಕ್ಕ ನನ್ನ ಕಡೆ ವಹಿಸಿಕೊಂಡು "ಅಮ್ಮ, ಕಡೇ ಕಾರ್ತಿಕ ಸೋಮವಾರ. ಹೋಗಲಿ ಬಿಡಮ್ಮ" ಅನ್ನುವ ಹೊತ್ತಿಗೆ ನಾನು ಬದುಕಿದೆ.

ಬೇರೆ ಉಸ್ಲೀನೇನೋ ಮಾಡಿದರು ಮಂಗಳಾರತಿ ಹೊತ್ತಿಗೆ. ಆದರೆ ಅವತ್ತಿಂದ ಇವತ್ತಿನವರೆಗೂ ಕೈಕಾಲು ತೊಳೀದೇಲೇ ಅಡಿಗೇಮನೇಗಾಗಲಿ ದೇವರ ಮನೇಗಾಗಲಿ ನಾನು ಬೇರೆ ಹೋಗೊಲ್ಲ.

—ಎಚ್. ಎಸ್. ವೆಂಕಟರಾಮಯ್ಯ.

## ೯. ಅಪ್ಪನ ಕೈಗುಲಾಬಿ

ಅದು ಹುಡುಗಾಟದ ಹುಚ್ಚುತನದ ದಿನಗಳು. ಅಮ್ಮ ಕಾಗೆ ತೋರಿಸುತ್ತಾ ತುಪ್ಪ ಅನ್ನ ಉಣಿಸಿದರೆ ಉಗುಳುವ ವಯಸ್ಸು. ನನಗೆ ಇತರರು ಆಡಿದ ಮಾತೆಲ್ಲ ತಿಳಿಯುತ್ತಿತ್ತು. ಆದರೆ ಆಡಲು ಬರುತ್ತಿದ್ದುದು ಅತ್ಯಲ್ಪ.

ನನ್ನನ್ನು ಶ್ರೀರಂಗದ ಒನಕೆಯಂತೆ ಸಲಹುತ್ತಿದ್ದರು, ನನ್ನ ತಂದೆ ತಾಯಿಗಳು. [ಶ್ರೀರಂಗದ ಒನಕೆಯನ್ನು ನೆಲದ ಮೇಲೆ ಇಡುವುದಿಲ್ಲ. ನೆಲಕ್ಕೆ ತಗುಲಿದರೆ ಪಾಪ ಬರುತ್ತಂತೆ. ಅದರ ಪವಿತ್ರತೆ ಹಾಳಾಗುತ್ತಂತೆ. ಹಾಗೆ ನನ್ನನ್ನೂ ನನ್ನ ಅಪ್ಪ ಅಮ್ಮ ನೆಲದ ಮೇಲೆ ಬಿಡುತ್ತಿರಲಿಲ್ಲ. ಯಾವಾಗಲೂ ಎತ್ತಿಕೊಂಡಿರುತ್ತಿದ್ದರು.] ನಮ್ಮ ತಂದೆ ರಾತ್ರೆ ೧೨ ಗಂಟೆಯಲ್ಲಿ ನನ್ನನ್ನು ಎತ್ತಿಕೊಂಡು ನಡುಮನೆಯಲ್ಲಿದ್ದ ಪಟಗಳನ್ನು ತೋರಿಸುತ್ತಾ ಆಡಿಸಿದ್ದು, ನಾನು ಹಟಮಾಡುತ್ತಿದ್ದುದು—ಈಗ ನೆನಪಿಗೆ ಬರುವ ಮಾತಲ್ಲ.

ಆದರೆ ನಾನು ಗುಲಾಬಿಹೂ ಮಾಡುತ್ತಿದ್ದುದನ್ನು ಮಾತ್ರ ನಾನು ಮರೆಯಲಾರೆ. ನಾನು ಮಾಡುತ್ತಿದ್ದ ಗುಲಾಬಿಗೆ ತೊಟ್ಟು ಇಲ್ಲ! ವಾಸನೆಯಿಲ್ಲ! ಅಪ್ಪ ಕಚೇರಿಯಿಂದ ಮನೆಗೆ ಬಂದ ಕೂಡಲೆ ನನ್ನನ್ನು ಎತ್ತಿ ಮುದ್ದಿಸಿ ಆಡುತ್ತಿದ್ದರು. ಒಂದು ದಿನ ನಾನು ಅವರ ಕೈಯನ್ನು ಬಲವಾಗಿ ಕಚ್ಚಿಬಿಟ್ಟೆ—ಹಟ, ಅಳು, ರಗಳೆಯಿಂದ. ಅಪ್ಪನಿಗೆ ಸಿಟ್ಟೇ ಬರಲಿಲ್ಲ. ಅವರು "ಇಲ್ನೋಡೋ ಗುಲಾಬಿ!" ಎಂದು ತಮ್ಮ ಕಚ್ಚಿದ ಗುರುತು ಬಿದ್ದ ಕೈಯನ್ನು ತೋರಿಸಿದರು. ನನ್ನ ಅಳು ಮಾಯವಾಯಿತು. ಹೂ ಮಾಡುವ ಆಸೆ ಹೆಚ್ಚಾಯಿತು.

ಅನಂತರ ನಾನು ಎಷ್ಟೋ ಸಾರಿ "ಅಪ್ಪ, ಗುಲಾಬಿ!" ಎಂದು ನಮ್ಮ ತಂದೆಯ ಕೈಯನ್ನು ಕಚ್ಚಿ, ಆದ ಗುರುತನ್ನು ನೋಡಿದ್ದೇನೆ. ನಮ್ಮ ತಾಯಿಗೆ ಇದೆಲ್ಲ ಕಂಡರೆ ಕೋಪ. "ಈ ಛಲಮಾರಿ ಹೇಳಿದ್ದೆಲ್ಲಾ ಆಗಬೇಕೆ!" ಎಂದು ಹೊಡೆಯಲು ಬರುವರು, ನನ್ನ. ಆದರೆ ನಮ್ಮ ತಂದೆಗೆ ಹೆದರಿ ಹೊಡೆಯುತ್ತಿರಲಿಲ್ಲ.

ಅದಕ್ಕೆ ಉತ್ತರವಾಗಿ ನಮ್ಮ ತಂದೆ "ಅಲ್ವೇ, ಹೋಗಲಿ ಬಿಡು. ಹುಚ್ಚುತನ, ಹುಡುಗಾಟ, ಕಡೀಲಿ. ಕಡಿಯೋದು ನಿನ್ಕೈಯಲ್ಲ, ನಂದು" ಎನ್ನುತ್ತಿದ್ದರು.

ನಿಮಗೆ ಬರುತ್ತೆಯೆ, ಗುಲಾಬಿ ಮಾಡೋದು?

—ಎನ್. ಪ್ರಹ್ಲಾದರಾವ್.

## ೧೦. ಹಳೆಯ ನೆನಪು.

ಆಗ ಬಲು ಚಿಕ್ಕವನಾಗಿದ್ದೆ. ನನಗೆ ಆಗ ಸುಮಾರು ೪ ವರ್ಷಗಳಾಗಿದ್ದಿರಬಹುದು. ಆಗ ನಾನು ಬಲು ತುಂಟನಾಗಿದ್ದೆನಂತೆ. ನಮ್ಮಜ್ಜಿ ಈಗಲೂ ನನ್ನನ್ನು ಹತ್ತಿರ ಕೂರಿಸಿಕೊಂಡು "ಮಗು, ಏನು ತುಂಟನಾಗಿದ್ದೆಯಪ್ಪ ನೀನು!" ಎನ್ನುತ್ತಾರೆ. ನನ್ನ ಮನಸ್ಸಿನಲ್ಲಿ ಮಾತ್ರ "ಏನು! ನಾನು ತುಂಟನಾಗಿದ್ದೆನೆ? ಇಲ್ಲ, ಎಲ್ಲ ಮಕ್ಕಳಂತೆ ನಾನೂ ಕೆಲವು ತಪ್ಪುಗಳನ್ನು ಮಾಡಿದ್ದಿರಬಹುದು" ಎನ್ನಿಸುತ್ತದೆ. ಆದರೆ ನಾನು ಚಿಕ್ಕವನಾಗಿದ್ದಾಗ ಮಾಡಿದ ಒಂದೇ ಒಂದು ತುಂಟತನದ ನೆನಪು ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ಇಂದಿಗೂ ಅಳಿಯದೆ ನಿಂತುಬಿಟ್ಟಿದೆ.

ನೋಡಿ, ಅದು ಬಲು ವ್ಯಸನಕರವಾದ ನೆನಪು. ಅದನ್ನು ನೆನೆದರೆ ನನ್ನ ಮನಸ್ಸು ಸುಣ್ಣಕ್ಕೆ ನೀರು ಹಾಕಿದಂತೆ ಕುದಿಯುತ್ತದೆ. ನಮ್ಮ ತಂದೆಯವರು ನಾನು ನಾಲ್ಕು ವರ್ಷದವನಿದ್ದಾಗ ಹೊಸಕೋಟೆಯಲ್ಲಿದ್ದರು. ನಮ್ಮ ಮನೆಯ ಹಿಂದೆ ಒಂದು ಹಂದಿಯು ತನ್ನ ಐದು ಮರಿಗಳೊಂದಿಗೆ ದಿನವೂ ತಪ್ಪದೆ ಒಂದು ತಿರುಗಾಡಿ ಹುಲ್ಲು ಮೇದುಕೊಂಡು ಹೋಗುತ್ತಿತ್ತು. ಅದರ ಮರಿಗಳು ಬಲು ಮುದ್ದಾಗಿದ್ದುವು. ಒಂದೊಂದೂ ಸುಮಾರು ಒಂದು ಪುಟ್ಟ ನಾಯಿಮರಿಯ ಗಾತ್ರಕ್ಕೆ ಇದ್ದಿರಬಹುದು. ನಾನು ದಿನವೂ ಹಿತ್ತಿಲಿನಲ್ಲಿ ಹೋಗಿ ನಿಂತು ಅವುಗಳು ತಮ್ಮ ತಾಯಿಯ ಹಿಂದೆ ಓಡೋಡಿ ನಲಿಯುವುದನ್ನು ನೋಡಿ ಸಂತೋಷಪಡುತ್ತಿದ್ದೆ. ಅವುಗಳನ್ನು ಹಿಡಿದು ಮನೆಗೆ ತಂದು ನನಗೆ ನಮ್ಮಮ್ಮನು ಕೊಡುವ ಹಾಲು ರೊಟ್ಟಿಗಳನ್ನು ಅವಕ್ಕೂ ಕೊಟ್ಟು ಮುದ್ದಿಡಬೇಕೆಂದು ನನಗೆ ಆಸೆಯಾಗುತ್ತಿತ್ತು. ದಿನವೂ ಅವುಗಳನ್ನು ನೋಡುತ್ತಿದ್ದರೇ ನನಗೆ ಆನಂದವಾಗುತ್ತಿತ್ತು. ಮಕ್ಕಳ ಹೃದಯಕ್ಕೆ, ತಮ್ಮಂತೆಯೇ ಪುಟ್ಟಗಿರುವ ಯಾವ ಪ್ರಾಣಿಯನ್ನು ನೋಡಿದರೂ ಬಲು ಆನಂದ, ಅವುಗಳನ್ನು ಹಿಡಿದು ಇಟ್ಟುಕೊಳ್ಳಬೇಕೆಂದು ಆಸೆ.

ಹೀಗಿರಲು, ಒಂದು ದಿನ ಆ ಹಂದಿಯು ತನ್ನ ಮರಿಗಳೊಡನೆ ನಮ್ಮ ಹಿತ್ತಿಲಿಗೆ ಬಂದಿತು. ನಾನು ನಮ್ಮ ತಾಯಿಯವರೊಂದಿಗೆ ಮಾತಾಡುತ್ತಾ ನಿಂತುಕೊಂಡಿದ್ದೆ. ಆ ಹಂದಿಯ ಮರಿಗಳನ್ನು ನೋಡಿ "ಅಮ್ಮ, ನನಗೆ

ಅದು!" ಎಂದು ಕೈ ತೋರಿಸಿ ಅವರನ್ನು ಕಾಡಲು ಮೊದಲಿಟ್ಟೆ. "ಬೇಡವಪ್ಪ, ಅದು ಕೆಟ್ಟಜಾತಿ. ಬಾರದು, ಬಾ." ಎಂದು ಹೇಳಿ ಒಳಗೆ ಹೋದರು. ಹೇಗಾದರೂ ಮಾಡಿ ಆ ಮರಿಯನ್ನು ಹಿಡಿಯಲೇಬೇಕೆಂದು ನನಗೆ ಆಸೆಯಾಯಿತು. ನನ್ನ ಆಸೆಗೆ ಬೆಂಬಲ ಕೊಡುವಂತೆ ತಾಯಿಹಂದಿಯು ದೂರದೂರ ಹೋಯಿತು. ನಾನು ಅದೇ ಸಮಯವೆಂದು ತಾಯಿಗೆ ದೂರದಲ್ಲಿ ನನ್ನ ಹತ್ತಿರದಲ್ಲಿಯೇ ಇದ್ದ ಮರಿಯೊಂದನ್ನು ಹಿಡಿಯಲು ಏಳುತ್ತಾ ಬೀಳುತ್ತಾ ಓಡಿದೆ. ನನಗೆ ಸ್ವಲ್ಪ ದೂರದಲ್ಲಿ ನಮ್ಮ ರೈತ ಬೋರನ ಜೊತೆಯಲ್ಲಿ ಅವನ ನಾಯಿ ಬರುತ್ತಿತ್ತು. ನಾನು ಆ ಮರಿಯನ್ನಟ್ಟಿಸಿಕೊಂಡು ಹೋಗುವುದನ್ನು ನೋಡಿ ಅದೂ ವೇಗವಾಗಿ ಬಂದು ಆ ಮರಿಯನ್ನು ಕಚ್ಚಿ ಹಿಡಿದುಕೊಂಡು ಓಡಿಹೋಯಿತು. ಅದನ್ನು ನೋಡಿ ತಾಯಿಹಂದಿ ತನ್ನಿತರ ಮರಿಗಳೊಡನೆ ಬಲು ಬೇಗ ಮರೆಯಾಗಿ ಓಡಿತು. ಆ ದೃಶ್ಯ ನನ್ನ ಪುಟ್ಟ ಹೃದಯಕ್ಕೆ ಬಲು ಯಾತನೆಯನ್ನುಂಟುಮಾಡಿತು. "ಅಯ್ಯೋ! ಅಮ್ಮ! ಹೋಯಿತು! ಹೋಯಿತು!" ಎಂದು ಕೂಗಿಕೊಂಡೆ.

ನಮ್ಮ ತಾಯಿ ಓಡಿಬಂದು "ಏನು ಮಗು! ಏನಾಯ್ತು?" ಎಂದು ಗಾಬರಿಯಿಂದ ಕೇಳಿದರು. ನಾನು ಬಲು ದುಃಖದಿಂದ ಎಲ್ಲವನ್ನೂ ಹೇಳಿದೆ. ನಮ್ಮ ತಾಯಿ ಅದನ್ನು ಕೇಳಿ, "ಅಯ್ಯೋ, ಶನಿ! ಅನ್ಯಾಯವಾಗಿ ಅದರ ಪ್ರಾಣಕ್ಕೆ ಮುಳಿಯಾದೆಯ! ನಡೆ, ಪಾಪಿ," ಎಂದು ನನ್ನ ಕೆನ್ನೆಗೊಂದು ಏಟು ಕೊಟ್ಟು ಒಳಗೆ ಎಳೆದುಕೊಂಡು ಹೋದರು.

ನನಗೆ ಆ ಏಟಿನಿಂದೇನೂ ನೋವಾಗಲಿಲ್ಲ. ಆದರೆ, ಆ ಹಾಳು ನನ್ನ ತುಂಟತನ ಕಾರಣವಾಗಿ ಆ ಹಂದಿಯಮರಿಯು ಮಾರಿಯಂತಿದ್ದ ನಾಯಿಯ ಬಾಯಿಗೆ ಬಲಿಯಾಯಿತಲ್ಲ ಎನ್ನಿಸುತ್ತದೆ. ಆ ಕೆಟ್ಟನೋಟ, ವ್ಯಸನಕರವಾದ ನೋಟ, ನನ್ನ ಕಣ್ಣಮುಂದೆ ಅನೇಕಸಾರಿ ಸುಳಿದು ಮಾಯವಾಗುತ್ತದೆ. ಈಗಲೂ ನನಗೆ ಬಹು ದುಃಖವುಂಟಾಗುತ್ತದೆ. "ಆದರೇನು ಮಾಡುವುದು? ಕಳೆದು ಹೋದುದಕ್ಕೆ ಚಿಂತಿಸಿ ಫಲವಿಲ್ಲ" ಎಂದುಕೊಳ್ಳುತ್ತೇನೆ. ಆದರೂ ನಡೆದುಹೋದುದನ್ನು ನೆನೆಯದಿರಲು ಆಗುವುದಿಲ್ಲ. ನೆನೆನೆನೆದು ದುಃಖಿಸುವುದೊಂದೆ ಅದಕ್ಕೆ ಉಪಶಾಂತಿ.

—ಕೆ. ಸುಬ್ಬರಾವ್.

## ೧೧. ವರ್ಧಂತಿಯ ದಿವಸ

ನನಗೆ ಸುಮಾರು ಆರು ವರ್ಷ ವಯಸಿದ್ದಿರಬಹುದು. ಬಸವನಗುಡಿ ಪ್ರೈಮರಿ ಬಾಯ್ಸ್ ಸ್ಕೂಲಿನಲ್ಲಿ ಓದುತ್ತಿದ್ದೆ. ಆ ಸ್ಕೂಲಿನಲ್ಲಿಯೇ ನನ್ನ ಪ್ರೈಮರಿ ವಿದ್ಯಾಭ್ಯಾಸವನ್ನೆಲ್ಲ ಮುಗಿಸಿದೆ. ಆ ಸ್ಕೂಲಿನಲ್ಲಿರುವಾಗ್ಗೆ ಒಂದು ಸಲ ಶ್ರೀಮನ್ಮಹಾರಾಜರವರ ವರ್ಧಂತ್ಯುತ್ಸವವು ನಡೆಯಿತು. ಉತ್ಸವದ ದಿವಸ ಸ್ಕೂಲನ್ನು ತಳಿರು ತೋರಣಗಳಿಂದ ಅಲಂಕರಿಸಿದ್ದರು. ಬೆಳಿಗ್ಗೆ ೮ ಗಂಟೆಗೆ ಸ್ಕೂಲಿಗೆ ಶುಭ್ರವಾದ ಅಗಸನಬಟ್ಟೆಗಳನ್ನು ಧರಿಸಿಕೊಂಡು ಹೋದೆ. ಅಲ್ಲಿ ಶ್ರೀಮನ್ಮಹಾರಾಜರ ಶ್ರೇಯೋಭಿವೃದ್ಧಿಯನ್ನು ಬಯಸಿ ಭಾಷಣಗಳಾಗಿ ಕೊಟವು ಜಯಜಯಕಾರಗಳೊಡನೆ ಮುಕ್ತಾಯವಾಗುವ ಮೊದಲಿನಲ್ಲಿ ಅಲ್ಲಿ ನೆರೆದಿದ್ದ ಪ್ರತಿಯೊಬ್ಬ ಬಾಲಕನಿಗೂ ಒಂದೊಂದು ಶ್ರೀಮನ್ಮಹಾರಾಜರ ಫೋಟೋವನ್ನೂ ಒಂದು ಲಾಡುಉಂಡೆಯನ್ನೂ ಕೊಟ್ಟು ಕಳಿಸಿದರು.

ದಾರಿಯಲ್ಲಿ ಅಂಗಡಿಬೀದಿಗೆ ಬಂದೆ. ಅಲ್ಲಿ ನನ್ನ ಕೈಲಿದ್ದ ಲಾಡುವನ್ನು ನೋಡಿ ಒಂದು ಕಾಗೆ ಹೊಂಚುಹಾಕಿದ್ದು, ನಾನು ಮನೆಗೆ ಹೋಗಿ ಮನೆಯ ವರಿಗೂ ಕೊಟ್ಟು ನಾನೂ ತಿನ್ನೋಣವೆಂದಿದ್ದ ಲಾಡುಉಂಡೆಯನ್ನು ಹಾರಿಸಿ ಬಿಟ್ಟಿತು. ಆ ಕಾಗೆಯನ್ನು ಅಟ್ಟಿಸಿಕೊಂಡು ಹೋಗುವ ಸಮಯದಲ್ಲಿ ಕಂಕುಳಿಗೆ ಸುರುಳಿಮಾಡಿ ಸಿಕ್ಕಿಸಿಕೊಂಡಿದ್ದ ಪಟವು ಸುರುಳಿ ಬಿಚ್ಚಿ ಗಾಳಿಪಟವಾಯಿತು. ಕಾಗೆಯು ಆ ಉಂಡೆಯನ್ನು ಕೊಕ್ಕಿಗೆ ಸಿಕ್ಕದ್ದರಿಂದ ಬೀಳಿಸಿಬಿಟ್ಟಿತು. ಆದರೆ ಆ ಕಾಗೆ ಎಂಜಲು ಮಾಡಿದ ಉಂಡೆಯನ್ನು ತೆಗೆದುಕೊಳ್ಳಲು ಮನಬರದೆ ಪಟದ ಕಡೆಗೆ ಓಡಿದೆ.

ಪಟವನ್ನೇ ನೋಡುತ್ತ ಓಡುತ್ತಿರುವಲ್ಲಿ ಒಂದು ಬೈಸಿಕಲ್ ಬಂದು ಮೇಲೆ ಬಿದ್ದಿತು. ಬೈಸಿಕಲ್ ಮೇಲಿದ್ದ ಮಹಾನುಭಾವರು (ಅವರ ಮುಖ ಕೂಡ ಸರಿಯಾಗಿ ನೋಡಲಿಲ್ಲ) ತಟ್ಟನೆ ನನ್ನ ಕೈಗೆ ೩ ಕಾಸು ಹಾಕಿ, "ಪೆಪ್ಪರ್‌ಮೆಂಟ್ ತಿನ್ನು, ಹುಡುಗ" ಅಂತ ಹೇಳಿ, ಬೈಸಿಕಲ್ ಏರಿಹೋದರು. ಪಟ ಸಿಕ್ಕಲಿಲ್ಲ.

ಕೊನೆಗೆ ಲಾಡುಉಂಡೆ ಪಟಗಳ ಬದಲು ಕೈಯಲ್ಲಿ ಮೂರುಕಾಸು ಇಟ್ಟು ಕೊಂಡು ಅಗಸನ ಬಟ್ಟೆಯನ್ನು ಕೊಳೆಮಾಡಿಕೊಂಡು ಮಧ್ಯಾಹ್ನ ಸುಮಾರು ಹನ್ನೆರಡು ಗಂಟೆಗೆ ಮನೆಗೆ ಹೋದದ್ದು ಈಗಲೂ ಜ್ಞಾಪಕವಿದೆ.

—ಎ. ಸಿ. ಕಂಠೀರವಸ್ವಾಮಿ.

## ೧೨. ಸಂಕ್ರಾಂತಿ ಸಮಯ

ನನ್ನ ಮೊಟ್ಟಮೊದಲ ನೆನಪೆಂದರೆ ಕಳೆದ ಹದಿನಾರು ವರುಷಗಳ ಹಿಂದಿನ ಸಂಕ್ರಾಂತಿ. ಆಗ ನಾನು ಕೇವಲ ನಾಲ್ಕು ವರ್ಷದ ಬಾಲಕ. ಗುಂಡು ಗುಂಡಗೆ ದಪ್ಪನಾಗಿದ್ದೆ. ಸುಲಭವಾಗಿ ಓಡಾಡಲು ಬಾರದು. ಆದರೂ ನನ್ನ ಅಣ್ಣಂದಿರು ಬೇಕೆಂದು ನನ್ನನ್ನು ಓಡಿಸುತ್ತಿದ್ದರು. ಅದರಿಂದ ಅವರಿಗೆ ಬಹು ಸಂತೋಷವಾಗುತ್ತಿತ್ತೆಂದು ಕಾಣುತ್ತೆ. ಏಕೆಂದರೆ, ಗುಜ್ಜುಗುಜ್ಜಾಗಿ ಓಡುತ್ತಾ ಕೆಲವು ವೇಳೆ ನಾನು ಬಿದ್ದರೆ ಕೊನೆಯ ಪಕ್ಷ ಮೂರು ಉರುಳಾದರೂ ಉರುಳು ತ್ತಿದ್ದೆ—ಪುಟ್ಟ ಆಟದ ಪೀಪಾಯಂತೆ. ದಣಿದು ನಾನು ಕೂತುಬಿಟ್ಟರೂ ಅವರು ನನ್ನನ್ನು ಬಿಡುತ್ತಿರಲಿಲ್ಲ. ಹಿಂದಕ್ಕೂ ಮುಂದಕ್ಕೂ ಉರುಳಿಸಿ, ನಾನು ಹೊಟ್ಟೆ ನೋವಿನಿಂದ ಅತ್ತರೂ ಬಿಡುತ್ತಿರಲಿಲ್ಲ. ಆಗ ನಮ್ಮಕ್ಕ ಬಂದು ಅಣ್ಣನನ್ನು ಹೊಡೆದು ನನ್ನನ್ನು ಮನೆಯೊಳಕ್ಕೆ ಎತ್ತಿಕೊಂಡು ಹೋಗುತ್ತಿದ್ದರು.

ಹೀಗೆಯೇ ಬಂತು ಸಂಕ್ರಾಂತಿ. ಅದೇ ಮೊದಲನೆಯ ನೆನಪಾಗಿ, ಅಂದು ಏನು ಮಾಡುತ್ತಾರೆಂದು ನನಗೆ ತಿಳಿಯದು. ಆದರೆ ಒಂದು ಮಾತ್ರ ಚೆನ್ನಾಗಿ ಗೊತ್ತಿತ್ತು—ಹಬ್ಬವೆಂದರೆ ತಿಂಡಿಯುಂಟು, ಎಂದು. ಸಾಲದುದಕ್ಕೆ ಮಾಡಿ ಟ್ಟಿದ್ದ ಎಳ್ಳಿನ ಕೊಳದಪ್ಪಲೆ ಮೇಲಿಟ್ಟಿರಲಿಲ್ಲ. ಉಗ್ರಾಣದ ಮನೆಯಲ್ಲಿ ಯಾರೂ ಇಲ್ಲದಿದ್ದರೆ ನಾನು ಅಲ್ಲಿರುತ್ತಿದ್ದೆ. ಸುಮ್ಮನೆಯಲ್ಲ, ಕೊಬ್ಬರಿ ಎಳ್ಳು ಮುಕ್ಕುತ್ತ. ಯಾರಾದರೂ ಬಂದರೆಂದರೆ, ಅಲ್ಲಿಯೇ ಇಟ್ಟಿದ್ದ ಅರ್ಧ ಅಕ್ಕಿ ತುಂಬಿದ್ದ ದೊಡ್ಡ ಹಂಡೆಯಲ್ಲಿ ಅಡಗಿಕೊಳ್ಳುತ್ತಿದ್ದೆ. ಹೀಗೇ ಮಾಡಿ ಬೆಳಗಿ ನಿಂದ ಮಧ್ಯಾಹ್ನದ ಒಳಗೆ ಸುಮಾರು ಒಂದೂವರೆ ಗಿಟಕನ್ನೂ ಜ್ಞಾಪಕವಿಲ್ಲ ದಷ್ಟು ಎಳ್ಳನ್ನೂ ಇಳಿಸಿದ್ದೆ.

ಸಾಯಂಕಾಲ ಸುಮಾರು ಐದು ಗಂಟೆಯ ಸಮಯ. ಉಗ್ರಾಣಕ್ಕೆ ನುಗ್ಗಿದೆ. ಎಳ್ಳು ಮುಕ್ಕಲು ಷುರುಮಾಡಿದೆ. ಬಾಯಿ ತುಂಬಾ ಎಳ್ಳು. ಆಗ ಯಾರೋ ಹಿಂದಿನಿಂದ ಬಂದಂತಾಯಿತು. ಓಡಿ ಹಂಡೆಯಲ್ಲಿ ಅವಿತುಕೊಂಡೆ. ಬಂದವರು ನಮ್ಮಣ್ಣ – ಎಳ್ಳು ಕದಿಯಲಿಕ್ಕೆ. ಅಷ್ಟು ಹೊತ್ತಿಗೆ ನನ್ನ ಮೈಮೇಲೆ ಏನೋ ಪ್ರಾಣಿ ಹರಿದಂತಾಯಿತು. ಷರಟು ಒಳಕ್ಕೆ ನುಗ್ಗಿತ್ತು. ನಾನು ಗಾಬರಿಯಿಂದ ಚೀರಿದೆ. ನಮ್ಮ ಅಣ್ಣ ಹೆದರಿ ಓಡಿರಬಹುದು. ಎಲ್ಲರೂ ಓಡಿ

ಬಂದರು. ನನ್ನನ್ನು ಹಿಡಿದು ಅನಾಮತ್ತು ಮೇಲಕ್ಕೆ ಎತ್ತಿದರು. ನಾನು ಷರಟಿನೊಳಗೆ ಕೈ ಹಾಕಿದೆ. ಕೈಗೆ ಮೆತ್ತಗೆ ತಗಲಿತು. ಅದು ಇನ್ನೂ ಒಳಗೆ ತೂರಲು ಪ್ರಯತ್ನಿಸುತ್ತಿತ್ತು. ನಾನು ಅದನ್ನು ಚುಚ್ಚುತ್ತಿದ್ದೆ. ಚೀರುವುದನ್ನು ಮಾತ್ರ ನಿಲ್ಲಿಸಿರಲಿಲ್ಲ. ನನ್ನ ಅಕ್ಕ ಎರಡೂ ಕೈ ಹಿಡಿದು ನನ್ನನ್ನು ಮೇಲಕ್ಕೆ ಎತ್ತಿದರು. ರಬ್ಬರ್ ಚೆಂಡಿನಷ್ಟು ದೊಡ್ಡ ಇಲಿ ಹೊರಗೆ ಬಿತ್ತು.

ನಾನು ಗಾಬರಿ ನಾಚಿಕೆಗಳಿಂದ ನೆಲ ನೋಡುತ್ತ ನಿಂತೆ.

—ಕೆ. ಎನ್. ರಮಾನಂದರಾವ್.

## ೧೩. ಅಂದಿನ ತುಂಟತನ

ಯಾವುದಾದರೂ ಬೀಜವನ್ನು ನುಂಗಿದರೆ ಹೊಟ್ಟೆಯಲ್ಲಿ ಅದು ಗಿಡ ವಾಗುತ್ತದೆಂಬುದನ್ನು ಅಕ್ಷರಶಃ ನಂಬಿದ್ದ ಕಾಲದ ಮಾತಿದು. ಆಗ ನಾನು ಕನ್ನಡ ನಾಲ್ಕನೆಯ ತರಗತಿಯಲ್ಲಿ ಓದುತ್ತಿದ್ದೆನೆಂದು ಕಾಣುತ್ತದೆ.

ಅಂದು ಭಾನುವಾರವಿರಬೇಕು. ಏಕೆಂದರೆ ನಮಗೆ ರಜವಿತ್ತು. ಭಾನು ವಾರ ನಮಗೆ ಆಟದ ದಿನ, ಸಂತೋಷದ ದಿನ. ಅಂದು ಮಧ್ಯಾಹ್ನ ನಮ್ಮ ತಂದೆಯವರು ಮಲಗಿದ್ದರು. ನಮ್ಮ ತಾಯಿ ಏನು ಮಾಡುತ್ತಿದ್ದರೋ ಜ್ಞಾಪಕ ವಿಲ್ಲ. ನಾನು, ನನ್ನ ಅಕ್ಕ, ಇಬ್ಬರೂ ಆಟವಾಡಲು ಹೊರಗೆ ಬಂದೆವು.

ನಮ್ಮ ಮನೆಯ ಪಕ್ಕದಲ್ಲಿ ಒಬ್ಬರು—ಯಾರೋ 'ಕಾಶೀಬ್ರಾಹ್ಮಣ' ರಂತೆ—ವಾಸಿಸುತ್ತಿದ್ದರು. ನಮ್ಮೂರಿನ ಅತಿದೊಡ್ಡ ಹೋಟಲು ಇವರದು. ನಮ್ಮೂರಿನಲ್ಲಿ ನಲ್ಲಿಗಳಿರಲಿಲ್ಲ. ಒಂದು ಕೆರೆ ಮಾತ್ರ ಇತ್ತು. ಆ ಹೋಟಲಿ ನವರು ಆ ಕೆರೆಯಿಂದ ನೀರು ತರಲು ಒಂದು ಸಾಧನವನ್ನು ಮಾಡಿಕೊಂಡಿದ್ದರು. ಅದು ಒಂದು ಗಾಡಿ. ಅದರಲ್ಲಿ ಒಂದು ದೊಡ್ಡ ಪೀಪಾಯಿ. ಪೀಪಾಯಿಯ ಮುಂಭಾಗದಲ್ಲಿ ನೀರನ್ನು ಈಚೆಗೆ ತೆಗೆಯಲು ಒಂದು ಬಾಯಿ. ಆ ಬಾಯಿಗೆ ಒಂದು ಬಟ್ಟೆ ಸುತ್ತಿದ ಮರದ ತುಂಡನ್ನು ಸಿಕ್ಕಿಸಿರುತ್ತಿದ್ದರು. ಆ ಗಾಡಿಯು, ಹೋಟಲಿಗೆ ನೀರನ್ನು ಒದಗಿಸಿಯಾದಮೇಲೆ ತನ್ನ ಯಜಮಾನನ ಮನೆಯ ಮುಂದೆ ವಿಶ್ರಾಂತಿ ಪಡೆಯುತ್ತಿತ್ತು.

ಆ ಗಾಡಿ ನಮಗೆ 'ಕುದುರೆ' ಯಾಗಿತ್ತು. ನಾವು ಅದರ ಮೇಲೆ ಕುಳಿತು

ನಮಗೆ ತೋರಿದ ಆಟಗಳನ್ನೆಲ್ಲಾ—ಗಾಡಿ ಹೊಡೆಯುವುದು, ಕುದುರೆ ಜೂಜು ಮುಂತಾದುವನ್ನು—ಆಡುತ್ತಿದ್ದೆವು.

ಅಂದು ನಾವು—ನಾನು ಮತ್ತು ನನ್ನ ಅಕ್ಕ—ನಮ್ಮ 'ಕುದುರೆ'ಯ ಮೇಲೆ ಗಾಡಿ ಹೊಡೆಯುವವನು ಕುಳಿತುಕೊಳ್ಳುವ ಸ್ಥಳದಲ್ಲಿ ಕುಳಿತು ಆಟ ವಾಡತೊಡಗಿದೆವು. ಆಗ ಆ ಪೀಪಾಯಿಯ ಮುಚ್ಚಳವಾದ ಮರದ ಬಿರಟೆಯ ಕಡೆಗೆ ನಮ್ಮ ದೃಷ್ಟಿ ಬಿತ್ತು. ಸರಿ, ಕಾಕದೃಷ್ಟಿ. ಅದನ್ನು ಕೀಳಬೇಕೆಂದು ಮನಸ್ಸು ಮಾಡಿದೆವು. ಆ ಕೆಲಸಕ್ಕೆ ನನ್ನ ಅಕ್ಕ ನನ್ನನ್ನು ನೇಮಿಸಿದಳು.

ನಾನು ಅದರ ಬಳಿಗೆ ಹೋಗಿ ನಿಂತೆ. ಬಿಸಿ ಬಿಸಿ ಸೂರ್ಯನ ವಿನಾ ಇನ್ನಾರೂ ಕಣ್ಣಿಗೆ ಬೀಳುತ್ತಿರಲಿಲ್ಲ. ಏಕೆಂದರೆ, ಮಧ್ಯಾಹ್ನ. ನಾನು ಮೆಲ್ಲನೆ ಬಿರಟೆಯ ಬಳಿ ಕೈಹಾಕಿ ಎಳೆದೆ. ಅಷ್ಟರಲ್ಲಿ ಪೀಪಾಯಿಯೊಳಗಿನ ನೀರು—ಅದರಲ್ಲಿ ನೀರಿತ್ತೆಂದು ನಾವರಿತಿರಲಿಲ್ಲ, ಎಂದಿನಂತೆ ಖಾಲಿಗಾಡಿ ಎಂದುಕೊಂಡಿದ್ದೆವು—ಛಿಲ್ಲನೆ ಗೂಟದೊಡನೆ ಹಾರಿ ನನ್ನನ್ನು ತೋಯಿಸಿಬಿಟ್ಟಿತು.

ನಾನು ಸುತ್ತ ನೋಡಿದೆ. ನನ್ನ ಸುತ್ತ ನೀರು ಹರಿಯುತ್ತಿತ್ತು. ಕೈಯಲ್ಲಿ ಬಿರಟೆಯಿತ್ತು. ಅದರಿಂದ ನೀರು ತೊಟ್ಟಿಕ್ಕುತ್ತಿತ್ತು. ನನ್ನ ಅಕ್ಕ ಕಾಣಿಸಲೇ ಇಲ್ಲ. ನಾನೂ ಮನೆಯೊಳಕ್ಕೆ ಓಡಿಹೋದೆ.

ಆ ಹೋಟಲಿನ ಮಾಲೀಕರ ಮನೆಯಲ್ಲಿ ಆಗ ಗಂಡಸರು ಹೋಟಲಿಗೆ ಹೊರಟುಹೋಗಿಬಿಟ್ಟಿದ್ದರು. ಮನೆಯ ಯಜಮಾನಿ ನಮ್ಮ ಮನೆಗೆ ಬಂದು "ಗೂಟ ಕಿತ್ತುಹೋಯ್ತು, ಹಣಮಂತರಾವ್" ಎಂದು ಕೂಗಿಕೊಳ್ಳಲಾರಂಭಿಸಿದಳು. ಅನಂತರ ನಮ್ಮ ಮನೆಯ ಜವಾನ "ಹಣಮಂತರಾವ್" ಹೋಗಿ ಗೂಟವನ್ನು ಸರಿಮಾಡಿದ. ಅರ್ಧನಿದ್ದೆಯಲ್ಲಿ ಎಚ್ಚೆತ್ತ ನಮ್ಮ ತಂದೆಯ 'ವಾಕಿಂಗ್ ಸ್ಟಿಕ್'ನ ಸೇವೆ ನಮಗೆ ಚೆನ್ನಾಗಿ ನಡೆಯಿತು. ಅನಂತರ ನಮ್ಮ ತಾಯಿಯಿಂದ ನಮಗೆ ಎರಡೆರಡು 'ಸಕ್ಕರೆ ಅಚ್ಚು'ಗಳು!

ಇಂದು ಅವುಗಳನ್ನೆಲ್ಲಾ ನೆನೆದರೆ ಎಷ್ಟು ಆನಂದವಾಗುತ್ತದೆ! ಬಾಲ್ಯದ ನಮ್ಮ ಆಟ, ತುಂಟತನಗಳಿಗೆ ಮಿತಿಯುಂಟೆ! ಈಗ "ಆ ದೇವರು ಎಲ್ಲೋ ಶುದ್ಧ ಐಲು. ನಮ್ಮನ್ನು ಹುಡುಗರನ್ನಾಗಿಯೇ ಇರಲು ಬಿಡದೆ ದೊಡ್ಡವರನ್ನೇಕೆ ಮಾಡಿದ?" ಎಂದೆನಿಸುತ್ತದೆ.

—ಎಚ್. ಎನ್. ಸತ್ಯನಾರಾಯಣರಾವ್.

## ೧೪. ದೇವರ ದೀಪ

ನನಗೆ ಮುಂಜಿಯಾದ ಹೊಸದು. ಮೂರು ಹೊತ್ತಿನ ಸಂಧ್ಯಾವಂದನೆ ಮತ್ತು ಅಗ್ನಿಕಾರ್ಯವನ್ನು ಒಂದು ದಿನವೂ ತಪ್ಪದೆ ಮಾಡುತ್ತಿದ್ದೆ. ಆವಾಗ ಸಂಜೆಯ ಹೊತ್ತು ದೇವರ ದೀಪ ಇಡುವ ಕೆಲಸವೂ ನನಗೇ ಬಿದ್ದಿತ್ತು.

ನಮ್ಮ ಮನೆಯಲ್ಲಿ ಎಣ್ಣೆಯನ್ನು ಒಂದು ತಂಬಿಗೆಯಲ್ಲೋ ಅಥವಾ ಡಬ್ಬದಲ್ಲೋ ಇಡುತ್ತಿದ್ದರು. ಆ ಎಣ್ಣೆಯನ್ನು ಒಂದು ಸಣ್ಣ ತಪ್ಪಲೆಗೆ ಬಗ್ಗಿಸಿ ಕೊಂಡು, ಬಳಿಕ ಒಂದು ಮಿಳ್ಳೆಯಿಂದ ಆ ಎಣ್ಣೆಯನ್ನು ಸೊಡರಿಗೆ ಹಾಕ ಬೇಕಾಗಿತ್ತು. ಒಂದೊಂದು ಸಲ, ಇಷ್ಟು ಕೆಲಸವನ್ನು ಮಾಡಲು ಸಹನೆಯಿಲ್ಲದ ದಿನ, ಹಾಗೆಯೇ ಎಣ್ಣೆಯನ್ನು ಸೊಡರಿಗೆ ಸುರಿಯುತ್ತಿದ್ದೆ. ಹೀಗೆ ಸುರಿಯು ವಾಗ ಸ್ವಲ್ಪ ಎಣ್ಣೆಯನ್ನು ಚೆಲ್ಲುತ್ತಿದ್ದೆ. ಆದರೆ ತತ್ಕ್ಷಣವೇ ಒಂದು ಚೂರು ಚಿಂದಿ ಬಟ್ಟೆಯನ್ನು ತಂದು, ಅದರಲ್ಲಿ ಆ ಎಣ್ಣೆಯನ್ನು ಒರಸಿ, ಅಮ್ಮನಿಗೆ ತಿಳಿಯದಂತೆ ಆಚೆಗೆ ಬಿಸುಡುತ್ತಿದ್ದೆ.

ಒಂದು ದಿನ ಸಂಜೆ ಎಣ್ಣೆ ಹಾಕುವಾಗ ನನ್ನ ದುರದೃಷ್ಟದಿಂದ ಎಣ್ಣೆಯ ಡಬ್ಬವೇ ಕೆಳಗೆ ಉರುಟಿಕೊಂಡಿತು. ಆಗ ಅಮ್ಮ ನಡುವೆಯಲ್ಲಿ ಯಾವುದೋ ಕೆಲಸ ಮಾಡುತ್ತಿದ್ದಳು. ನಾನು ತತ್ಕ್ಷಣ ಅಮ್ಮನಿಗೆ ತಿಳಿಯದಂತೆ ಒಂದು ಬಟ್ಟೆಯನ್ನು ಅವಿತಿರಿಸಿಕೊಂಡು ಬಂದು ಆ ಎಣ್ಣೆಯನ್ನೆಲ್ಲಾ ಒರಿಸಿದೆನು. ಆದರೆ ಇನ್ನೂ ಎಣ್ಣೆ ಚೆಲ್ಲಿದ್ದರಿಂದ ನನ್ನ ತಲೆಗೆಲ್ಲಾ ಹಚ್ಚಿಕೊಂಡೆನು. ತಲೆಯೆಲ್ಲಾ ಜಿಡ್ಡಾಯಿತು. ಆದರೂ ಇನ್ನೂ ಎಣ್ಣೆಯ ಜಿಡ್ಡು ನೆಲದಲ್ಲಿದ್ದುದ ರಿಂದ ಇನ್ನೊಂದು ಬಟ್ಟೆಯನ್ನು ತರೋಣವೆಂದು ಆಚೆ ಹೋಗಲು, ಅಲ್ಲಿದ್ದ ನಮ್ಮ ತಾಯಿಯು "ಏನೋ ಅದು, ತಲೆಯೆಲ್ಲಾ ಎಣ್ಣೆ ಆಗಿದೆ?" ಎಂದರು. ಆಗ ನಾನು "ಏನೂ ಇಲ್ಲಮ್ಮ, ಎಲ್ಲೋ ಸ್ವಲ್ಪ ಎಣ್ಣೆ ಚೆಲ್ಲೋಯಿತು" ಎಂದೆ. ಆಗ ನಮ್ಮ ತಾಯಿ "ಎಲ್ಲಿ, ನಡಿ, ನೋಡೋಣ" ಎಂದು ಒಳಗೆ ಬಂದು ನೋಡಿದರು. ಆಗ ಅಲ್ಲಿ ನಾನು ಒರಸಿದ್ದ ಬಟ್ಟೆಯಿಂದಲೂ ನನ್ನ ತಲೆ ಯಿಂದಲೂ ಎಣ್ಣೆಯು ಜಿನುಗುತ್ತಿತ್ತು. ಆಗ ನಮ್ಮ ತಾಯಿ "ಥೂ, ಮೂದೇವಿ. ಅವರು ಮನೆಗೆ ಬರಲಿ. ನಿನಗೆ ಮಾಡಿಸ್ತೇನೆ" ಎಂದರು. ನಾನು ಸಪ್ಪೆಮುಖ ಹಾಕಿಕೊಂಡು ನಿಂತೆ.

ಆಗ ಅವರು ನೀರು ಕಾಯಿಸಿ ನನ್ನ ಮೈಗೆ ಎಣ್ಣೆಯನ್ನು ಹಚ್ಚಿದರು. ಆಗ ನಾನು ಹೆದರುತ್ತ "ಅಮ್ಮ, ಬೆನ್ನಿಗೆ ಎಣ್ಣೆ ಹಚ್ಚಿ ಅಪ್ಪ ಬಂದಮೇಲೆ ಹೊಡಿಸ್ತೀಯಾ?" ಎಂದು ಕೇಳಿದೆ. ಅವರು ನಕ್ಕು ನನಗೆ ನೀರುಹಾಕಿ, ಅಪ್ಪ ಬಂದಮೇಲೆ ಅಂದಿನ ಕತೆಯನ್ನೆಲ್ಲ ಹೇಳಿದರು.

ಆದರೆ ಅಪ್ಪ ನನ್ನನ್ನು ಹೊಡೆಯಲಿಲ್ಲ. ಮಾರನೆಯ ದಿನದಿಂದ ದೇವರಿಗೆ ದೀಪವಿಡುವ ಕೆಲಸ ತಪ್ಪಿತು.

—ಪಿ. ರಾಮಲಿಂಗಶಾಸ್ತ್ರಿ.

## ೧೫. ಋಷಿ ಆಟ

ನಾನು ಇನ್ನೂ 'ಎ' ಕ್ಲಾಸಿನಲ್ಲೋ 'ಬಿ' ಕ್ಲಾಸಿನಲ್ಲೋ ಇದ್ದೆ. ಹತ್ತೂವರೆಗೆ ಪಾಠಶಾಲೆಗೆ ಹೋದರೆ, ಪುನಃ ಎಷ್ಟು ಹೊತ್ತಿಗೆ ಅಲ್ಲಿಂದ ಬಿಡುಗಡೆಯಾಗುತ್ತದೋ ಎಂದೇ ಯೋಚನೆ. ಪಾಠಶಾಲೆಯಲ್ಲಿ ವಿನಾ ಮತ್ತೆ ಮನೆಯಲ್ಲಿ ಪುಸ್ತಕ ಹಿಡಿಯುವ ಅಭ್ಯಾಸವಿರಲಿಲ್ಲ.

ಮನೆಯಲ್ಲಿ ಬಯಲು ದೊಡ್ಡದಾಗಿತ್ತು. ಅಲ್ಲಲ್ಲಿ ಬಣ್ಣ ಬಣ್ಣದ ಹೂ ಬಿಡುವ ಕಾಡುಗಿಡಗಳು ಇದ್ದವು. ಕೆಂಪು ಗಣಿಕೆಹಣ್ಣಿನ ಗಿಡಗಳೂ ಬಹಳವಾಗಿದ್ದವು. ಬಯಲಿನಲ್ಲಿ ಮೂರು ಪಗಡೆ ಗಿಡಗಳಿದ್ದವು. ಅವುಗಳಲ್ಲಿ ಒಂದನ್ನು ಕಂಡರಂತೂ ನನಗೆ ಬಹಳ ಇಷ್ಟ. ಆರಿಸಿ ತಂದ ಹೂವು ಮತ್ತು ಗಣಿಕೆ ಹಣ್ಣುಗಳನ್ನು ಆ ನನ್ನ ಪಗಡೆ ಮರದ ಕೆಳಗಿನ ನೆರಳಿಗೆ ತರುತ್ತಿದ್ದೆ. ನನ್ನ ತಮ್ಮನೂ ನನ್ನ ಜೊತೆಯಲ್ಲೇ ಇರುತ್ತಿದ್ದ. ತಂದ ನೀಲಿ ಹೂ ಗೊಂಚಲುಗಳನ್ನು ಆ ಪಗಡೆ ಗಿಡದ ಕೊಂಬೆಗಳಿಗೆ ಕಟ್ಟಿ, ಎದುರಿಗೆ ಒಂದು ಕಲ್ಲಿಟ್ಟು, ಹಣ್ಣನ್ನು ಒಂದು ಸಣ್ಣ ಟಿನ್ನಿನ ಮುಚ್ಚಳದಲ್ಲಿಟ್ಟು, ಬಹಳ ಕಷ್ಟಪಟ್ಟು ಪದ್ಮಾಸನ ಹಾಕಿ ಕುಳಿತುಕೊಳ್ಳುತ್ತಿದ್ದೆ.

ನನ್ನ ಮನಸ್ಸಿನಲ್ಲಿ ಆಗ ನಾನೊಬ್ಬ ಋಷಿ; ನನ್ನ ತಮ್ಮ, ಶಿಷ್ಯ. ಕುಳಿತಿದ್ದ ಜಾಗವೇ ಪರ್ಣಶಾಲೆ. ಬಹಳ ಗಂಭೀರವಾಗಿ ಜಟೆ ಕಟ್ಟುವಂತೆ ನಟಿಸುತ್ತಿದ್ದೆ. ಆದರೆ ಆಗ ತಾನೆ ನನಗೆ ಜುಟ್ಟು ಕತ್ತರಿಸಿದ್ದರಿಂದ ಒಂದು ಕೂದಲೂ ನೆಟ್ಟಗೆ ಕೈಗೆ ಸಿಕ್ಕುತ್ತಿರಲಿಲ್ಲ. ಸಣ್ಣದೊಂದು ಟಿನ್ನಿನಲ್ಲಿ ನೀರಿಟ್ಟುಕೊಂಡು, ಎದುರಿಗಿದ್ದ ಕಲ್ಲಿನ ದೇವರಿಗೆ ಅಭಿಷೇಕಮಾಡಿ, ತಂದಿದ್ದ ಹಣ್ಣನ್ನು

ನೈವೇದ್ಯ ಮಾಡುತ್ತಿದ್ದೆ. ಬಾಯಿಗೆ ಒಂದು ಶ್ಲೋಕವೂ ಬಾರದಿದ್ದರೂ ಪುರೋಹಿತನಂತೆ ಪಿಟಪಿಟನೆ ತುಟಿಯಲ್ಲಾಡಿಸುತ್ತಿದ್ದೆ. ಆಗಲಂತೂ ನನಗೇ ತಡೆಯಲಸಾಧ್ಯವಾದ ನಗು. ನನ್ನ ಶಿಷ್ಯನನ್ನಂತೂ ಕೇಳಬೇಕಾದ್ದೇ ಇಲ್ಲ.

ಯಾವುದಾದರೂ ಒಂದು ಹಕ್ಕಿ ಪಗಡೆಗಿಡದ ಮೇಲೆ ಬಂದು ಕುಳಿತ ಕೂಡಲೇ ಋಷಿಯೂ ಶಿಷ್ಯನೂ ತಪಸ್ಸನ್ನು ಬಿಟ್ಟು ಹಕ್ಕಿಯನ್ನೇ ನೋಡುತ್ತ ನಿಂತುಕೊಳ್ಳುತ್ತಿದ್ದೆವು. ಒಂದೊಂದು ಸಾರಿ ಮಳೆ ಬಂದು ಋಷಿಯನ್ನೂ ಶಿಷ್ಯನನ್ನೂ ಪರ್ಣಶಾಲೆಯಿಂದ ಮನೆಯೊಳಕ್ಕೆ ಓಡಿಸುತ್ತಿತ್ತು. ಇಲ್ಲದಿದ್ದರೆ ಮನೆಯೊಳಗೆ ನಮ್ಮ ತಾಯಿ ತಿಂಡಿಗೆಂದು ಕೂಗಿದ್ದನ್ನು ಕೇಳಿದ ಕೂಡಲೆ ಋಷಿ ಶಿಷ್ಯರಿಬ್ಬರೂ ನಾನು ಮೊದಲು, ತಾನು ಮೊದಲು ಎಂದು ಓಡುತ್ತಿದ್ದೆವು. ಅದಿಲ್ಲದಿದ್ದರೆ, ಜೊತೆಯವರು 'ಟಕ್ಕಿ' ಆಟಕ್ಕೆ ಬರುತ್ತಲೇ ಇಬ್ಬರೂ ಎದ್ದು ಓಡುತ್ತಿದ್ದೆವು.

—ಎಂ. ವಿ. **ವಾಸುದೇವರಾವ್.**

## ೧೬. ಸ್ಕೂಲಿಗೆ ಹೋದ ಮೊದಲ ದಿನ

ನಾನಿನ್ನೂ ಆಗ ಐದು ವರ್ಷದವನು. ನನಗೆ ಒಂದೆರಡು ಅಕ್ಷರಗಳನ್ನು ಬರೆಯಲು ಬರುತ್ತಿತ್ತು. ನನಗೆ ಎಂಟು ವರ್ಷದ ಅಣ್ಣನೊಬ್ಬನಿದ್ದ. ಅವನು ಫ್ರೈಮರಿ ಎರಡನೆಯ ಅಥವಾ ಮೂರನೆಯ ಕ್ಲಾಸಿನಲ್ಲಿ ಓದುತ್ತಿದ್ದ. ನನ್ನನ್ನೂ ಅವನು ಓದುತ್ತಿದ್ದ ಶಾಲೆಗೆ ಪಾಠಕಲಿಯಲಿಕ್ಕೆ ಕಳುಹಿಸಬೇಕೆಂದು ಒಂದು ದಿನ ಮಧ್ಯಾಹ್ನ ಊಟಮಾಡುವಾಗ ನನ್ನ ತಂದೆಯವರಿಗೆ ನನ್ನ ತಾಯಿಯವರು ಸೂಚಿಸಿದರು. ಅಪ್ಪನು "ಆಗಲಿ" ಎಂದನು.

ಊಟವಾದ ಮೇಲೆ ಅಲ್ಲಿ ಇಲ್ಲಿ ಓಡಾಡುತ್ತಾ ಇದ್ದೆ. ಒಮ್ಮೆ ಒಂದು ಚಿಟ್ಟೆಯ ಹಿಂದೆ ಓಡುವುದು. ಅದು ಒಂದು ಗಿಡದ ಮೇಲೆ ಕುಳಿತರೆ ಅದನ್ನೇ ನಟ್ಟ ದೃಷ್ಟಿಯಿಂದ ನೋಡುತ್ತಾ, ಕಳ್ಳಹೆಜ್ಜೆಯನ್ನಿಡುತ್ತಾ ಅದರ ಸನಿಯಕ್ಕೆ ಹೋಗಿ ಅದನ್ನು ಹಿಡಿಯಲು ಪ್ರಯತ್ನಿಸುವುದು. ಮತ್ತೊಮ್ಮೆ ಒಂದು ಇರುವೆಯ ತಂಡವು ಸಾಲಾಗಿ ಬರುತ್ತಿರುವುದನ್ನು ನೋಡಿ ಅವುಗಳು ಹೋಗುತ್ತಿರುವ ಜಾಗವನ್ನೂ ಅವು ಹೊರಟ ಜಾಗವನ್ನೂ ಹುಡುಕುವುದು. ಅವುಗಳ ಗೂಡು ಸಿಕ್ಕಿದರೆ, ಅದರೊಳಕ್ಕೆ ಸ್ವಲ್ಪ ಮಣ್ಣನ್ನೂ ನೀರನ್ನೂ ಹಾಕುವುದು . . . ಹೀಗೆ ಆಡುತ್ತಾ ಇದ್ದೆ.

ಸುಮಾರು ಎರಡು ಗಂಟೆಯ ಹೊತ್ತಿಗೆ ಅಮ್ಮನು ಬಂದು, ಉಪಾಯ ವಾಗಿ ಕರೆದುಕೊಂಡು ಹೋಗಿ ತಲೆಯನ್ನು ಬಾಚಿ ಹೆಣೆದಳು. ಆಮೇಲೆ ಎಲ್ಲರಿಗೂ ಕಾಫಿಯಾಯಿತು. ಅನಂತರ ನನ್ನ ಪುಟ್ಟ ಚೆಡ್ಡಿಯನ್ನೂ ಪುಟ್ಟ ಕೋಟನ್ನೂ ಅಮ್ಮ ತೊಡಿಸಿದಳು. ಅಷ್ಟು ಹೊತ್ತಿಗೆ ನಮ್ಮ ತಂದೆ ಯವರೂ 'ಡ್ರೆಸ್' ಮಾಡಿಕೊಂಡು ಬಂದರು. ಅವರು ನನ್ನನ್ನು ನಮ್ಮ ಬೀದಿಯ ಕೊನೆಯಲ್ಲಿಯೇ ಇದ್ದ ಪ್ರೈಮರಿ ಸ್ಕೂಲಿಗೆ ಕರೆದುಕೊಂಡು ಹೋದರು.

ಆ ಸ್ಕೂಲಿನಲ್ಲಿ ಯಾರೋ ಒಬ್ಬರ ಹತ್ತಿರ ಸ್ವಲ್ಪ ಹೊತ್ತು ಮಾತ ನಾಡಿ ನನ್ನನ್ನು ಒಂದು ರೂಮಿಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿದರು. ಅಲ್ಲಿ ಇನ್ನೂ ಅನೇಕ ಹುಡುಗರು ಬೆಂಚುಗಳ ಮೇಲೆ ಕುಳಿತಿದ್ದರು. ಒಬ್ಬರು ಒಂದು ಮುರುಕಲು ಕನ್ನಡಕವನ್ನು ಸಿಕ್ಕಿಸಿಕೊಂಡು ಅಲ್ಲಿದ್ದ ಒಂದು ಕಪ್ಪು ಹಲಗೆಯ ಮೇಲೆ ದೊಡ್ಡದಾಗಿ ಏನನ್ನೋ ಬರೆಯುತ್ತಿದ್ದರು. ನನ್ನ ತಂದೆಯವರು "ಹೋಗುತ್ತೇನೆ" ಎಂದು ಅವರಿಗೆ ಹೇಳಿ ಹೊರಟು ಹೋದರು.

ನಾನು ಸುತ್ತಲೂ ತಿರುಗಿನೋಡಿದೆ. ನಾನು ನನ್ನ ಅಣ್ಣನೂ ಅಲ್ಲಿ ದ್ದಾನೆ ಎಂದು ತಿಳಿದುಕೊಂಡಿದ್ದೆ. ಆದರೆ ಅವನು ಕಣ್ಣಿಗೆ ಬೀಳಲಿಲ್ಲ. ನನಗೆ ಭಯವಾಯಿತು. "ಅಪ್ಪ, ಅಮ್ಮ, ಅಣ್ಣ ಒಬ್ಬರೂ ಇಲ್ಲ. ನಾನೊಬ್ಬನೇ ಇಷ್ಟು ಜನ ಹೊಸಬರ ಮಧ್ಯೆ ಹೇಗೆ ಕುಳಿತುಕೊಳ್ಳುವುದು?" ಎಂದು ನಾನು ಆಗ ಅಳುವುದಕ್ಕೆ ಷುರುಮಾಡಿದೆ. ಅಲ್ಲಿದ್ದ ಆ ದೊಡ್ಡವನು (ಆಮೇಲೆ ಗೊತ್ತಾಯಿತು, ಅವನ ಹೆಸರು ಮೇಷ್ಟ್ರು ಎಂದು) ನನ್ನ ಹತ್ತಿರ ಬಂದು ಪ್ರೀತಿಯ ಧ್ವನಿಯಲ್ಲಿ "ಏನು ಬೇಕಪ್ಪಾ? ಏಕೆ ಅಳುತ್ತೀಯೆ?" ಎಂದು ಕೇಳಿದನು. ನನಗೆ ಇನ್ನೂ ಭಯವಾಯಿತು. ತೊದಲುತ್ತ, ಅಳುತ್ತ, "ಅಣ್ಣ ಎಲ್ಲಿ?" ಎಂದು ಕೇಳಿದೆನು. "ಯಾರಪ್ಪಾ ನಿನ್ನ ಅಣ್ಣ?" ಎಂದು ಅವನು ಕೇಳಿದನು. ನಾನು ಏನೂ ಹೇಳದೆ "ಅಣ್ಣಾ! ಅಣ್ಣಾ!" ಎಂದು ಅಳುತ್ತಿದ್ದೆ. ಆ ದೊಡ್ಡ ವನಿಗೆ ಕೋಪ ಬಂದಿರಬೇಕು. ಅವನು "ಯಾರಯ್ಯ ನಿನ್ನ ಪಿಶಾಚಿ ಅಣ್ಣ? ಸರಿಯಾಗಿ ಬಾಯಿಬಿಟ್ಟು ಮಾತನಾಡು. ಸುಮ್ಮನೆ ಅತ್ತರೆ ಹೊಡೆಯುತ್ತೇನೆ" ಎಂದು ಗಟ್ಟಿಯಾಗಿ ಗದರಿಸಿಕೊಂಡನು. ನಾನು ಹೆದರಿಕೆಯಿಂದ ಮೂಕನಾದೆ.

ಅವನು ಬೇಜಾರಿನಿಂದ "ನೀನು ಮಾತನಾಡಿದರೆ ಸರಿ. ಇಲ್ಲದಿದ್ದರೆ ಮನೆಗೆ ಹೋಗು. ಸುಮ್ಮನೆ ಅಳಬೇಡ" ಎಂದು ಹೇಳಿ ನನ್ನನ್ನು ಹೊರಕ್ಕೆ ಕಳುಹಿಸಿದನು.

ನಾನು ಮನೆಗೆ ಹೋಗುವುದಕ್ಕೆ ಎದ್ದೆ. ಕಾಲು ತೊಡೆಯಲ್ಲಾ ಒದ್ದೆಯಾಗಿತ್ತು.

—ಎಂ. ಎಸ್. ಕೃಷ್ಣಮೂರ್ತಿ.

## ೧೭. ನಾನು ಒಡೆದ ಸ್ಲೇಟು

ನಮ್ಮ ತಂದೆಯವರು ನನ್ನನ್ನು ಪ್ರೈಮರಿ ಸ್ಕೂಲಿಗೆ ಸೇರಿಸುವುದಕ್ಕೆ ಕರೆದುಕೊಂಡು ಹೋದರು. ನನ್ನನ್ನು ಪ್ರೈಮರಿ 'ಎ' ಕ್ಲಾಸಿಗೆ ಸೇರಿಸಿದ್ದಾಯಿತು. ಆ ದಿನವೇ ನನ್ನನ್ನು 'ಕ್ಲಾಸಿನಲ್ಲಿರು' ಎಂದು ಹೇಳಿ ಮನೆಗೆ ಹೊರಟುಬಂದರು. ನನಗೆ ಅಲ್ಲಿರುವುದಕ್ಕೆ ಇಷ್ಟವಿರಲಿಲ್ಲ. ಆದರೂ ಮೇಷ್ಟರ ಭಯದಿಂದ ಅಲ್ಲೇ ಕುಳಿತುಕೊಂಡಿದ್ದೆ.

ಅಷ್ಟರಲ್ಲಿ, ನನ್ನ ಪಕ್ಕದಲ್ಲಿ ಕುಳಿತಿದ್ದ ಹುಡುಗನೊಬ್ಬನು ನನ್ನ ಸ್ಲೇಟು ದೊಡ್ಡದಾಗಿ ಚೆನ್ನಾಗಿದ್ದುದರಿಂದ ನೋಡೋಣವೆಂದು ಅದನ್ನು ಕೈಗೆ ತೆಗೆದುಕೊಂಡನು. "ನಿನ್ನ ಸ್ಲೇಟು ಗಟ್ಟಿಯಾಗಿದೆ ಎಂದು ಹೇಳುತ್ತೀಯಲ್ಲಾ—ಸ್ವಲ್ಪ ಎತ್ತರದಿಂದ ಎತ್ತಿ ಹಾಕೋಣ—ಅದು ಒಡೆಯದಿದ್ದರೆ ಗಟ್ಟಿಯಾಗಿದೆ" ಎಂದು ನನ್ನ ಪಕ್ಕದಲ್ಲಿದ್ದ ಹುಡುಗನು ಅದನ್ನು ಸ್ವಲ್ಪ ಎತ್ತರದಿಂದ ಬಿಟ್ಟನು. ಅದು ತತ್‍ಕ್ಷಣವೇ ಚೂರುಚೂರಾಗಿ ಒಡೆದುಹೋಯಿತು.

ಉಪಾಧ್ಯಾಯರು, ಹೆಡ್‍ಮೇಷ್ಟರ ಸಂಗಡ ಮಾತನಾಡುವುದಕ್ಕೆ ಹೋಗಿದ್ದವರು, ನಮ್ಮ ಕ್ಲಾಸಿಗೆ ಬಂದಮೇಲೆ ನೆಲದ ಮೇಲೆ ಚೆಲ್ಲಿದ್ದ ಸ್ಲೇಟು ಚೂರುಗಳನ್ನು ನೋಡಿ, "ಯಾರೋ ಇದನ್ನು ಒಡೆದು ಹಾಕಿದವರು?" ಎಂದು ಕೋಲನ್ನು ಹಿಡಿದುಕೊಂಡು ಗರ್ಜಿಸಿದರು. ನಾನು ನಡುಗುವುದಕ್ಕೆ ಪ್ರಾರಂಭಿಸಿದೆ. ಅಳುತ್ತಾ "ರಾಮಾಚಾರಿ ಒಡೆದು ಹಾಕಿದ" ಎಂದು ಹೇಳಿದೆ. ಅವನು "ನಾನೇನೂ ಒಡೆದು ಹಾಕಲಿಲ್ಲ, ಸಾರ್. ಅವನೇ 'ನನ್ನ ಸ್ಲೇಟು ಗಟ್ಟಿಯಾಗಿದೆ. ಬೇಕಾದರೆ ಎತ್ತಿಹಾಕಿ ನೋಡು. ಒಡೆಯುವುದಿಲ್ಲ' ಎಂದ. ನಾನು ಎತ್ತಿಹಾಕಿದೆ. ಅದು ಒಡೆದುಹೋಯಿತು" ಎಂದು ನನ್ನ ಸ್ನೇಹಿತನು ಉಪಾ

ಧ್ಯಾಯರಿಗೆ ಅಳುತ್ತಾ ಹೇಳಿದನು. ಉಪಾಧ್ಯಾಯರು ನನ್ನದೇ ತಪ್ಪೆಂದು ತೀರ್ಮಾನಿಸಿದರು. ನನಗೆ ನಮ್ಮ ತಂದೆಯವರು "ಸ್ಲೇಟು ಗಟ್ಟಿಯಾಗಿದೆ. ಐದಾಣೆ ಕೊಟ್ಟಿದ್ದೇನೆ" ಎಂದು ಹೇಳಿದ್ದುದರಿಂದ ಆ ಸ್ಪರ್ಧೆಯೊಳಗೆ ಪ್ರವೇಶಿಸಿದೆ. ಇತರ ಹುಡುಗರಿಗೆಲ್ಲ ಉಪಾಧ್ಯಾಯರು "ಅ ಆ" ಎರಡು ಅಕ್ಷರಗಳನ್ನು ಬರೆದುಕೊಟ್ಟು "ಅದನ್ನು ತಿದ್ದಿ" ಎಂದರು. ನನ್ನ ಹತ್ತಿರ ಸ್ಲೇಟು ಇತ್ತಿಲ್ಲವಾದ್ದರಿಂದ, ಗಂಟೆ ಎಷ್ಟು ಹೊತ್ತಿಗೆ ಹೊಡೆಯುವುದೋ ಎಂದು ಇದ್ದೆ. ನನ್ನ ಹತ್ತಿರ ಒಂದು ದೊಡ್ಡದಾದ ಬಳಪ ಇತ್ತು. ಅದನ್ನು ಒಬ್ಬ ಹುಡುಗನಿಗೆ ಕೊಟ್ಟು, ಅದಕ್ಕೆ ಬದಲಾಗಿ ಒಂದು ಗೋಲಿಯನ್ನು ತೆಗೆದುಕೊಂಡೆ.

ಒಂಬತ್ತು ಗಂಟೆಯ ಬೆಲ್ ಹೊಡೆಯಿತು. ನಾವೆಲ್ಲಾ ತಿಂಡಿ ತಿನ್ನುವುದಕ್ಕೆ ಮನೆಗೆ ಹೊರಟೆವು. ನಾನು ಮನೆಗೆ ಬಂದಮೇಲೆ, ನಮ್ಮ ತಂದೆಯವರು "ಸ್ಲೇಟು ಎಲ್ಲಿ ?" ಎಂದು ಕೇಳಿದರು. "ಅಲ್ಲೇ ಇಟ್ಟು ಬಂದಿದ್ದೇನೆ. ಹನ್ನೊಂದು ಗಂಟೆಗೆ ಬರುವಾಗ ತರುತ್ತೇನೆ" ಎಂದು ಸುಳ್ಳು ಹೇಳಿ ತಿಂಡಿ ತಿಂದುಕೊಂಡು ಪುನಃ ಹೊರಟೆ. ಅಷ್ಟು ಹೊತ್ತಿಗೆ ಬೆಲ್ ಹೊಡೆದು ಅರ್ಧ ಗಂಟೆಯಾಗಿತ್ತು. ಸುಮ್ಮನೆ ಕ್ಲಾಸಿನಲ್ಲಿ ಹನ್ನೊಂದು ಗಂಟೆಯ ತನಕ ಕುಳಿತಿದ್ದೆ. ಬೆಲ್ ಹೊಡೆಯಿತು.

ಅಷ್ಟರಲ್ಲಿ ಸ್ಕೂಲಿಗೆ ಎದುರು ಮೈದಾನದಲ್ಲಿ ಒಬ್ಬ ಹಾವಾಡಿಗರವನು ಹಾವನ್ನು ಆಡಿಸುತ್ತಿದ್ದನು. ಅಲ್ಲಿ ನೋಡುತ್ತಾ ನಿಂತುಕೊಂಡೆ. ಅಷ್ಟರಲ್ಲಿ ಮೇಷ್ಟರು ನಾನು ಸ್ಲೇಟು ಒಡೆದುಕೊಂಡ ವಿಚಾರವನ್ನು ನಮ್ಮ ತಂದೆಯವರಿಗೆ ಹೇಳಿಬಿಟ್ಟಿದ್ದರು. ಮನೆಗೆ ಹನ್ನೆರಡು ಗಂಟೆಗೆ ಬಂದೆ. ನಮ್ಮ ತಂದೆಯವರಿಗೆ ಸ್ಲೇಟಿನ ವಿಚಾರವೆಲ್ಲಾ ತಿಳಿದದ್ದರಿಂದ, 'ಸ್ಲೇಟು ಏನು ಮಾಡಿದೆ ?' ಎಂದು ಕೇಳಿದರು. ನಾನು ಎಲ್ಲವನ್ನೂ ಹೇಳಿದೆ. ಎರಡು ಮೂರು ಏಟು ಕಪಾಲಕ್ಕೆ ಬಿತ್ತು.

ಮೇಷ್ಟರು ನಮ್ಮ ತಂದೆಯವರಿಗೆ ಹೇಳಿದರಲ್ಲಾ ಎಂದು ಅವತ್ತಿನಿಂದ ಹದಿನೈದು ದಿವಸ ಸ್ಕೂಲಿಗೆ ಹೋಗುವುದನ್ನೇ ಬಿಟ್ಟೆ.

—ಕೆ. ಆರ್. ಸುಬ್ಬರಾಯ.

## ೧೮. ನಮ್ಮ ಶಾಲೆಯ ಮೇಷ್ಟರು

ಹತ್ತು ಹನ್ನೊಂದು ವರುಷಗಳ ಹಿಂದಿನ ಮಾತು. ನಾನು ಹೋಗುತ್ತಿದ್ದ ಶಾಲೆಯು ಯಾವ ದಿಕ್ಕಿಗೆ ತಿರುಗಿಕೊಂಡಿತ್ತೆಂಬುದನ್ನೂ ನಾನು ಜ್ಞಾಪಿಸಿಕೊಳ್ಳಬಲ್ಲೆ. ಆ ಶಾಲೆ ಒಂದು ದೊಡ್ಡ ಹೆಂಚಿನ ಮನೆಯಾಗಿತ್ತು. ಅದರ ಮುಂದೆ ಒಂದು ರಸ್ತೆ. ಮೈಸೂರಿನ ರಸ್ತೆಗಿಂತ ಅದು ಕಿರಿದಾದರೂ ಆ ಊರಿಗೆ ಅದೇ ಒಂದು ದೊಡ್ಡ ರಸ್ತೆ. ಗಾಳಿಯೇನಾದರೂ ಬಂದರೆ, ಧೂಳಿದ್ದು, ಶಾಲೆಯ ಒಳಗೆ ಕಿಟಕಿಯ ಮಗ್ಗುಲಲ್ಲಿ ಕುಳಿತು ಓದುತ್ತಿದ್ದ ಹುಡುಗರ ಕಣ್ಣೆಲ್ಲವೂ ಹಾಳಾಗುತ್ತಿತ್ತು. ಮಾರಿಯ ಹಬ್ಬದ ಕಾಲದಲ್ಲಿ ಶಾಲೆಯ ಹುಡುಗರೆಲ್ಲ ಹೊರಗೆ ಬಂದು ಜಗುಲಿಯ ಮೇಲೆ ನಿಂತು ನೋಡುತ್ತಿದ್ದೆವು.

ನಮ್ಮ ತರಗತಿಯನ್ನು ತೆಗೆದುಕೊಳ್ಳುತ್ತಿದ್ದವರು ನಲವತ್ತು ನಲವತ್ತೆರಡು ವಯಸ್ಸಿನ ಬ್ರಾಹ್ಮಣರು. ಬೆತ್ತದ ಉಪಯೋಗ ಅವರಿಗೆ ಪೂರ್ಣವಾಗಿ ಮನವರಿಕೆಯಾಗಿತ್ತು. ಇನ್ಸ್ಪೆಕ್ಟರ್ ಮಗನಾದ ನನಗೂ ಏಟು ತಪ್ಪಲಿಲ್ಲ.

ಅವರು ಬೋರ್ಡಿನ ಮೇಲೆ ಲೆಕ್ಕ ಬರೆದು, ನಮಗೆಲ್ಲರಿಗೂ ಮಾಡುವಂತೆ ಆಜ್ಞಾಪಿಸಿ, ನಾವು ಲೆಕ್ಕಮಾಡುತ್ತಿದ್ದಾಗ ಯಾರಾದರೂ 'ಕಾಪಿ' ಹೊಡೆದಾರೆಂದು ಬೆಂಚುಗಳ ಬಳಿಯಲ್ಲೆಲ್ಲಾ ತಿರುಗಾಡುತ್ತಿದ್ದರು. ಹತ್ತು ಹದಿನೈದು ನಿಮಿಷಗಳಾದ ಮೇಲೆ ಸ್ಲೇಟುಗಳನ್ನು ತಿರುಗಿಸಿ ನೆಲದ ಮೇಲಿಡುವಂತೆ ಹೇಳಿ, ತಾವೇನೇನೋ ಮಗ್ಗಿ ಗೊಣಗುಟ್ಟುತ್ತ ಬೋರ್ಡಿನ ಮೇಲೆ ಲೆಕ್ಕ ಮಾಡುವರು. ಬಳಿಕ ಪ್ರತಿಯೊಬ್ಬನ ಹತ್ತಿರಕ್ಕೂ ಹೋಗಿ, ಸ್ಲೇಟು ತೆಗೆಯಿಸಿ ನೋಡುವರು. ತಪ್ಪಾಗಿದ್ದರೆ, ಗೋವಿಂದ! ದರ್ಜ ಬೆತ್ತದ ಏಟುಗಳು!

ಮೇಷ್ಟರು ಲೆಕ್ಕವನ್ನು ಬೋರ್ಡಿನ ಮೇಲೆ ಅರ್ಥ ಮಾಡುತ್ತಿರುವಾಗಲೆ ಅನೇಕವೇಳೆ, ನನಗೆ ನಾನು ಮಾಡಿದ್ದ ಲೆಕ್ಕ ತಪ್ಪೆಂದು ತಿಳಿದುಹೋಗುತ್ತಿತ್ತು. ಆಗ ನಾನು ಬಳಪವನ್ನು ಸ್ಲೇಟಿನಮೇಲೆ ಹಾಕಿ, ಮನಸ್ಸಿನಲ್ಲಿಯೇ "ಸರಸ್ವತಿ, ಉತ್ತರವನ್ನು ತಿದ್ದಿಬಿಡಮ್ಮಾ. ಕಾಯಿ ಒಡೆಸುತ್ತೇನೆ" ಎಂದು ಬೇಡುತ್ತಿದ್ದೆ.

ಆದರೆ ಆ ಸರಸ್ವತಿಯಾದರೋ ಒಂದು ಸಾರಿಯಾದರೂ ಉಪಕಾರ ಮಾಡಲಿಲ್ಲ. ಏಟುಗಳಿಂದ ಕಯ್ಯಿ ಬಿಸಿ ಬಿಸಿ ಕಜ್ಜಾಯವಾಗಿಹೋಗುತ್ತಿತ್ತು.

—ರತ್ನಂ ಸಂಪತ್ತೈಯಂಗಾರ್.

## ೧೯. ನಾವು ಏಟು ತಪ್ಪಿಸಿಕೊಂಡ ಉಪಾಯ

ನನಗೆ ಆಗ ಸುಮಾರು ೫-೬ ವರ್ಷ ವಯಸ್ಸಾಗಿತ್ತು. ನಾನು ಕೂಲಿ ಮಠದಲ್ಲಿ ವಿದ್ಯಾಭ್ಯಾಸಮಾಡುತ್ತಿದ್ದೆ. ಆಗ ನಮ್ಮೂರಿನಲ್ಲಿ ಪ್ರೈಮರಿ ಸ್ಕೂಲಿರಲಿಲ್ಲ. ೧೯೨೬ರಲ್ಲಿ ಪ್ರೈಮರಿ ಸ್ಕೂಲು ಬಂತು. ಇದು ಬರುವುದಕ್ಕೆ ಮೊದಲು ನಮ್ಮ ಕೂಲಿಮಠದ ಮೇಷ್ಟರು ನಮ್ಮನ್ನು ಬಹಳವಾಗಿ ಹಿಂಸಿಸುತ್ತಿದ್ದರು. ನಾವು ಸರಿಯಾಗಿ ಪಾಠವನ್ನು ಒಪ್ಪಿಸಲಿ ಅಥವಾ ಒಪ್ಪಿಸದೆ ಹೋಗಲಿ, ನಮಗೆ ಮಾತ್ರ ಪ್ರತಿನಿತ್ಯವೂ ಏಟು ತಪ್ಪುತ್ತಿರಲಿಲ್ಲ. ಸರಿಯಾಗಿ ಪಾಠವನ್ನು ಒಪ್ಪಿಸುತ್ತಿದ್ದರೆ ಏಟು ಏತಕ್ಕೆ ಬೀಳುತ್ತಿತ್ತೆಂದು ಕೇಳಬಹುದು. ಆದರೆ ಆ ಮೇಷ್ಟರ ಸ್ವಭಾವವೇ ಅಂತಹದು. ಸುಮ್ಮನೆ ಕುಳಿತಿದ್ದರೂ ನಮ್ಮನ್ನು ಹೊಡೆಯದೆ ಬಿಡುತ್ತಿರಲಿಲ್ಲ.

ಒಂದು ದಿವಸ ನಾನು ಮತ್ತು ನನ್ನ ಸಹಪಾಠಿಗಳೆಲ್ಲ ಒಂದುಕಡೆ ಕುಳಿತು, "ಹೀಗೆ ಮೇಷ್ಟರು ಪ್ರತಿನಿತ್ಯವೂ ಹೊಡೆಯುತ್ತಾರಲ್ಲ. ಇದಕ್ಕೆ ಏನು ಉಪಾಯ ಮಾಡಬೇಕರೊ ?" ಎಂದು ಮಾತನಾಡಿಕೊಂಡೆವು. ಒಬ್ಬ ಹುಡುಗ "ನಮ್ಮ ಅಪ್ಪಂದಿರುಗಳ ಸಂಗಡ ಹೇಳಿ ಈ ಮೇಷ್ಟರನ್ನು ಚೆನ್ನಾಗಿ ಬೈಯಿಸಬೇಕು. ಇಲ್ಲವೆ ರಾಗಿ, ಭತ್ತಗಳನ್ನು ಕೊಡದ ಹಾಗೆ ಮಾಡಬೇಕು" ಎಂದನು. ನಾವು ಮೇಷ್ಟರಿಗೆ ಸಂಬಳಕ್ಕಾಗಿ ರಾಗಿ, ಭತ್ತ ಕೊಡುತ್ತಿದ್ದೆವು. "ಇದು ಸರಿಯಾದ ಉಪಾಯವಲ್ಲ. ಹೀಗೆ ಮಾಡಿದರೆ, ಮೇಷ್ಟರು ನಮಗೆ ಹೊಡೆತವನ್ನು ಇನ್ನೂ ಜೋರು ಮಾಡುತ್ತಾರೆ" ಎಂದು ಇನ್ನೊಬ್ಬ ಹೇಳಿದ.

ಅದಕ್ಕೆ "ನಾನು ನನ್ನದೊಂದು ಉಪಾಯವನ್ನು ಹೇಳುತ್ತೇನೆ. ಕೇಳಿ" ಎಂದೆ. "ಅದೇನೊ! ಅದೇನೊ!" ಎಂದೆಲ್ಲರೂ ಕೂಗಿಕೊಂಡರು. ನಾನು ಅವರನ್ನು ಸಮಾಧಾನಪಡಿಸಿ, "ನೋಡಿ, ಈಗ ನಾವು ಕಂಡ ಹಾಗೆ ಮೇಷ್ಟರಿಗೆ ಸೌದೆಯ ಕ್ಷಾಮ ಬಹಳವಾಗಿದೆ. ಹೇಗಾದರೂ ಮಾಡಿ, ಪ್ರತಿಯೊಬ್ಬನೂ ಎರಡೆರಡು ಕಡ್ಡಿ ಎಂದರೆ, ಅವರಿಗೆ ಬೇಕಾದಷ್ಟು ಆಗುತ್ತದೆ. ಹೀಗೆ ಎಲ್ಲರೂ ಒಟ್ಟಾಗಿ ಸೇರಿ ಸೌದೆಯನ್ನು ತಂದುಕೊಟ್ಟರೆ ನಮ್ಮ ಹಿಂಸೆಯೂ ತಪ್ಪುವುದು" ಎಂದೆ. ಎಲ್ಲರೂ ಒಪ್ಪಿದರು.

ಸೌದೆ ತರುವಾಗ ಬಹಳ ಕಷ್ಟಕ್ಕೆ ಬಂದಿತು. ಮನೆಯವರು ಕಂಡರೆ

ಹೊಡೆಯುತ್ತಿದ್ದರು. ಆದರೂ ಮೇಷ್ಟರ ಹೊಡೆತವನ್ನು ತಪ್ಪಿಸಿಕೊಳ್ಳುವುದಕ್ಕೆ ಹೇಗೋ ತಂದುಕೊಡುವುದಕ್ಕೆ ಮೊದಲು ಮಾಡಿದೆವು. ಅಂದಿನಿಂದ ನಮಗೆ ಏಟುಗಳು ತಪ್ಪಿದುವು. ಮೇಷ್ಟರಲ್ಲಿ ಇನ್ನೂ ಹೆಚ್ಚಾದ ಪ್ರೀತಿಯನ್ನು ಸಂಪಾದನೆಮಾಡಿದೆವು.

—ಎಚ್. ಕೆ. ಛಿಂದಯ್ಯ.

## ೨೦. ಸ್ಕೂಲಿಗೆ ಹೋದದ್ದು

ಮೊದಲ ಮಗ. ನಮ್ಮ ತಂದೆಗೆ ನಾನು ಅಚ್ಚುಮೆಚ್ಚು. ಮುದ್ದಿನಿಂದ ಬೆಳೆದವನು ನಾನು. ಐದು ವರುಷಗಳಾದರೂ ಹೊಸಪೇಟೆ ನೋಡಿರಲಿಲ್ಲ. ಮನೆಯಲ್ಲಿ, ಒಳಗಡೆಯೇ ಬೆಳೆದವನು ನಾನು. ರಸ್ತೆಯಲ್ಲಿ ಹೋದರೆ, ಎಲ್ಲಿ ಗಾಡಿ ದನಗಳ ಕೈಗೆ ಸಿಕ್ಕಿಬಿಡುವೆನೋ ಎಂದು ನಮ್ಮ ತಾಯಿಯ ಪಹರೆ ನನ್ನ ಮೇಲೆ.

ನಾನು ಸ್ಕೂಲಿಗೆ ಹೋಗುವ ದಿನ ಬಂತು. ಅಂದಿನಿಂದ, ನಮ್ಮ ತಂದೆಯವರು ನನಗೆ ಬೆಳಗ್ಗೆ ಒಗೆದ ಬಟ್ಟೆ ಹಾಕಿ, ಸ್ಲೇಟನ್ನು ತಾವೇ ತೆಗೆದುಕೊಂಡು ನನ್ನನ್ನು ಎತ್ತಿಕೊಂಡು ಸ್ಕೂಲಿನವರೆಗೆ ಬಂದು ಬಿಟ್ಟು ಹೋಗುತ್ತಿದ್ದರು. ಈ ಕೆಲಸ ದಿನದಿನವೂ ನಡೆಯುತ್ತಿತ್ತು. ನಾನು ಪುಕ್ಕ. ನಮ್ಮ ತಂದೆಯು ಜೊತೆಗೆ ಬರದಿದ್ದರೆ ಆ ದಿನ ಸ್ಕೂಲಿಗೆ ಚಕ್ಕರ್ ಹಾಕುತ್ತಿದ್ದೆ.

ನಮ್ಮ ಮೇಸ್ಟ್ರಿಗೆ ಈ ವಿಷಯ ತಿಳಿಯಬಂತು. ಅವರು ನನ್ನನ್ನು ಹತ್ತಿರಕ್ಕೆ ಕರೆದು ಎಡಗಿವಿಯನ್ನು ಹಿಂಡಿ, ಸೀಮೇಸುಣ್ಣವನ್ನು ಹಣೆಗೆ ತಿಕ್ಕುತ್ತಾ "ಏನೋ, ಹೆಣ್ಣಿಗ! ನೀನು ಸ್ಕೂಲಿಗೆ ಬರುವುದಕ್ಕೆ ನಿಮ್ಮಪ್ಪ ಯಾಕೋ? ಒಬ್ಬನೇ ಬರಬೇಕು" ಎಂದರು. ಹುಡುಗರು ನಕ್ಕರು. ನನ್ನ ಮಾನ ಹೋಯಿತು.

ಮಾರನೆಯ ದಿನದಿಂದ ನಮ್ಮ ತಂದೆಯು ಸ್ಕೂಲು ಕಟ್ಟಡದ ಹತ್ತಿರದವರೆಗೆ ಬರುತ್ತಿರಲಿಲ್ಲ. ದೂರದಲ್ಲಿ ನಿಂತು, ನಾನು ಸ್ಕೂಲಿಗೆ ಹೋದಮೇಲೆ ಮನೆಗೆ ಹೋಗುತ್ತಿದ್ದರು.

ಒಂದು ದಿನ ನಾನು, ನನ್ನ ಗೆಳೆಯ ಪುಟ್ಟು ಇಬ್ಬರೂ ಸ್ಕೂಲಿನಿಂದ ಬರುತ್ತಿದ್ದೆವು. ಅಂದು ಕ್ಲಾಸಿನಲ್ಲಿ ಹೊಡೆತ ಬಿದ್ದಿತ್ತು ಪುಟ್ಟುಗೆ. ಹೊಡೆ

ದವರು ನಮ್ಮ ಮೇಷ್ಟರು. ಅವರೇ ನನ್ನನ್ನು ಅಂದು ಹಂಗಿಸಿದ್ದರು, "ಹೆಣ್ಣಿಗ" ಅಂತ.

ನಾನು "ಪುಟ್ಟು, ನಮ್ಮ ಮೇಷ್ಟ್ರು ಕೆಟ್ಟ ಮೇಷ್ಟ್ರು" ಎಂದೆ. ಆದರೆ ನನ್ನ ದುರದೃಷ್ಟ. ಹಿಂದೆಯೇ ಬರುತ್ತಿದ್ದ ಮೇಷ್ಟ್ರು ನನ್ನ ಮಾತನ್ನು ಕೇಳಿ "ಹೌದು, ಹೌದು" ಎನ್ನುತ್ತಾ ಹೊರಟುಹೋದರು.

ಅಂದಿನಿಂದ ದಿನದಿನವೂ ನನ್ನನ್ನು ಕ್ಲಾಸಿನಲ್ಲಿ ಹಾಸ್ಯಮಾಡಲು ಪ್ರಾರಂಭಿಸಿದರು. "ನಾನು ಕೆಟ್ಟವನು. ಹಿಡಿ ಏಟು" ಎನ್ನುತ್ತಾ ಹೊಡೆಯುತ್ತಿದ್ದರು. ನನ್ನ ಭಾಗಕ್ಕೆ ಅವರು ಕೆಟ್ಟವರೇ ಆಗಿದ್ದರು.

ಈ ವರ್ಷ ಕ್ರಿಸ್‌ಮಸ್‌ಗೆ ನಾನು ಊರಿಗೆ ಹೋದಾಗ ನಮ್ಮ ಹಳೆಯ ಮೇಷ್ಟರನ್ನು ಕಂಡಿದ್ದೆ. ಅವರು ನನ್ನನ್ನು ಇನ್ನೂ ಮರೆತಿಲ್ಲ. ಆದರೆ ಅವರ ಗುರುತು ನನಗೆ ಬೇಗನೆ ಸಿಕ್ಕಲಿಲ್ಲ. ಕಣ್ಣಿಗೆ ಕನ್ನಡಕ ಬಂದಿದೆ. ಹಲ್ಲು ಬಿದ್ದಿದೆ. ಕೋಟಿಗೆ ಬದಲು ಶಾಲು ಇತ್ತು ಮೈಮೇಲೆ.

ಅವರು ನನ್ನನ್ನು ಮಾತನಾಡಿಸಿ "ಏನಪ್ಪಾ, ಪ್ರಹ್ಲಾದ! ನಾನು ಕೆಟ್ಟವನು. ನಾನು ಕೆಟ್ಟ ಮೇಷ್ಟರು" ಎನ್ನುತ್ತಾ ನಗಲು ಪ್ರಾರಂಭಿಸಿದರು.

ನಾನು ಬೆಪ್ಪಾದೆ. "ಎಲಾ! ಎಲಾ! ಏನು ಜ್ಞಾಪಕಶಕ್ತಿ ಈ ಮುದುಕರದು!" ಎಂದುಕೊಂಡೆ. ತತ್‌ಕ್ಷಣವೇ ಬಾಲ್ಯದಲ್ಲಿ ನಾನು ಸ್ಕೂಲಿಗೆ ಹೋಗುತ್ತಿದ್ದ ಸಂಭ್ರಮವೆಲ್ಲಾ ನನ್ನ ನೆನಪಿಗೆ ಬಂತು.

—ಎನ್. ಪ್ರಹ್ಲಾದರಾವ್.

## ೨೧. ಕಾರ್ಯದರ್ಶಿ

(ಇದು 'ಮೊಟ್ಟಮೊದಲ ನೆನಪು' ಅಲ್ಲ. ಮನೆಯಲ್ಲಿ ಬರೆದು ತಂದು ಕೊಟ್ಟದ್ದು.)

"ಇನ್ನೂ ಎಷ್ಟೋ ವಿಷಯಗಳಿವೆ. ಅವೆಲ್ಲವನ್ನೂ ಬಿಟ್ಟು ಕಾರ್ಯದರ್ಶಿಯ ವಿಷಯವಾಗಿ ಏಕೆ ಬರೆಯುತ್ತೀಯೊ ?" ಎಂದ, ನಾಣಿ.

ಅದಕ್ಕೆ ನಾನು " 'ಕಾರ್ಯದರ್ಶಿ' ಎನ್ನುವ ಮಾತು ನನ್ನ ಕಿವಿಗೆ ಬಿದ್ದರೂ ಸಾಕು—ನನಗೆ ಕರುಣೆ, ಮಮತೆ ಹುಟ್ಟುತ್ತೆ. ಅವನು ಪಡುವ ಕಷ್ಟ ನೋಡಿದರೆ, 'ಅಯ್ಯೋ' ಎನ್ನಿಸುತ್ತದೆ. ಅದಕ್ಕೇನೆ ಅವನ ಕಷ್ಟಗಳನ್ನು ಕುರಿತು ಬರೆಯುತ್ತಿದ್ದೇನೆ" ಎಂದೆ.

ಅದೇನೋ ನೋಡಿ, ಸ್ವಾಮಿ, ಈ ಕಾರ್ಯದರ್ಶಿಗಳಿಗೆ ಒಂದು ವಿಧವಾದ ಆಸೆ—ಬಿಟ್ಟಿ ದುಡಿಯಬೇಕೆಂದು. ಈ ಆಸೆಯೇ ಅವರನ್ನು ವರ್ಷದ ಮೊದಲಿನಿಂದ ಕೊನೆಯವರೆಗೂ ಕೆಲಸ ಮಾಡಿಸುತ್ತದೆ. ಕಾರ್ಯದರ್ಶಿಯು ತನ್ನ ಸಂಘದ ವಾರ್ಷಿಕೋತ್ಸವದ ವರೆಗೆ ಎಷ್ಟು ದುಡಿಯಬೇಕು ಎನ್ನುವುದನ್ನು ನೋಡೋಣ.

"ಸಂಘದ ಪ್ರಾರಂಭೋತ್ಸವ" ಬಹಳ ವಿಜೃಂಭಣೆಯಿಂದ ನಡೆಯಬೇಕು. ಅಂದು ಅಧ್ಯಕ್ಷತೆ ವಹಿಸಲು ಯಾರಾದರೂ ಪ್ರಮುಖರು ಬೇಕು. ಸರಿ. ಅವರ ಮನೆಗೆ ಹೋದರೆ "ಅವರು ಮನೆಯಲ್ಲಿಲ್ಲ. ಸಾಯಂಕಾಲ ಬನ್ನಿ" ಎಂದು ಅಮ್ಮಾವರು ಅಪ್ಪಣೆ ಕೊಡಿಸುತ್ತಾರೆ. ಎಷ್ಟು ದಿನವೆಂದು ಅವರೂ ತಪ್ಪಿಸಿಕೊಳ್ಳುತ್ತಾರೆ ? ಕೊನೆಗೆ ಒಂದು ದಿನ ಆಸಾಮಿ ಸಿಕ್ಕಿಬೀಳುತ್ತಾರೆ. ಅವರಿಗೆ ಸಂಘದ ವಿಷಯವನ್ನು ತಿಳಿಸಿ "ತಾವು ದಯೆಮಾಡಿ ಸಂಘದ ಪ್ರಾರಂಭೋತ್ಸವಕ್ಕೆ ಅಧ್ಯಕ್ಷತೆ ವಹಿಸಬೇಕು" ಎಂದು ದೈನ್ಯದಿಂದ ಪ್ರಾರ್ಥಿಸುವುದು. ಅವರು ಒಪ್ಪಿದರೆ ವಂದಿಸುವುದು. ಇಲ್ಲದಿದ್ದರೆ, ಸಿಡುಕುಮುಖ ಹಾಕಿಕೊಂಡು ಹೊರಗೆ ಬಂದು, "ಮಹಾ! ಇವನು ಏನು ದೊಡ್ಡಮನುಷ್ಯ ಅಂತ ಕೇಳುವುದಕ್ಕೆ ಹೋದೆ!" ಎಂದು ತನ್ನಲ್ಲಿ ತಾನೇ ಅಂದುಕೊಳ್ಳುವುದು. ಅನಂತರ ಅವರಿಗಿಂತ ಕೊಂಚ ಕಡಿಮೆ ದರ್ಜೆಯವರನ್ನು ಕಾಣುವುದು. ಒಬ್ಬರು ತಪ್ಪಿದರೆ ಇನ್ನೊಬ್ಬರು.

ಅಧ್ಯಕ್ಷರ ತೀರ್ಮಾನವಾದ ಮೇಲೆ, ಪ್ರೆಸ್ಸಿಗೆ ಹೋಗಿ ಅಚ್ಚಿಗೆ ಕೊಟ್ಟು, ಅಲ್ಲಿಂದ ಪ್ರತಿಗಳನ್ನು ತಂದು ಕವರಿನಲ್ಲಿ ಹಾಕಿ, ಅಡ್ರೆಸ್ ಬರೆದು, ಊರಿನ ಎಲ್ಲಾ ಪ್ರಮುಖರಿಗೂ ಎಲ್ಲಾ ಶಾಲೆಗಳಿಗೂ ತಾನೇ ಹೋಗಿ ಕೊಡುವುದು.

ಪ್ರಾರಂಭೋತ್ಸವದ ದಿನವಂತೂ ಕಾರ್ಯದರ್ಶಿಗೆ ಬಿಡುವೇ ಇಲ್ಲ. ಉತ್ಸವವು ಏರ್ಪಾಡಾಗಿರುವ ಶಾಲೆಗೆ ಮೊದಲೇ ಹೋಗಿ, ಅಲ್ಲಿಯ ತರಗತಿಗಳಿಂದ ಕುರ್ಚಿಗಳನ್ನೂ ಬೆಂಚುಗಳನ್ನೂ ಜೋಡಿಸಿ, ಧೂಳು ಹೊಡೆದು, ಮಸಿಕುಡಿಕೆ ಲೇಖನಿ ಕಾಗದಗಳನ್ನು ತಂದಿಡುವುದು. ಅಷ್ಟರಲ್ಲಿ ಕೈಯಲ್ಲಿರುವ ರಿಸ್ಟ್‌ವಾಚ್ ನೋಡಿ "ಓಹೋ! ಹೊತ್ತಾಯಿತು. ಅಧ್ಯಕ್ಷರನ್ನು ಕರೆದುಕೊಂಡು ಬರಬೇಕು" ಎಂದು ಪರದಾಡುವುದು.

ಅವರನ್ನು ಟ್ಯಾಕ್ಸಿಯಲ್ಲಿ ಕರೆತಂದು, ಕುರ್ಚಿಯಲ್ಲಿ ಕುಳ್ಳಿರಿಸಿ, ಪ್ರಾರ್ಥನೆಯಾದ ಮೇಲೆ ತಾನು ಎದ್ದು "ಶ್ರೀಮಾನ್—ಅವರು ತಮಗೆಲ್ಲರಿಗೂ ಗೊತ್ತಿರುವವರೇ ಆಗಿದ್ದಾರೆ . . . ಅವರ ವಿಷಯವಾಗಿ ನಾನು ನಿಮಗೆ ಹೇಳಬೇಕಾದ್ದೇ

ಇಲ್ಲ. ಶ್ರೀಯುತರು ಅನೇಕ ಕಾರ್ಯಗಳನ್ನು ಮಾಡಿ ಜನಗಳ ಮನ್ನಣೆಗೆ ಪಾತ್ರರಾಗಿದ್ದಾರೆ. ಇಂತಹ ಮಹನೀಯರು ಈ ನಮ್ಮ ಬಡಸಂಘದ ಪ್ರಾರಂಭೋತ್ಸವಕ್ಕೆ ದಯಮಾಡಿಸಿದ್ದು ನಮ್ಮ ಸುಯೋಗವೇ ಸರಿ . . ." ಎಂದು ಮುಂತಾಗಿ ಸ್ವಾಗತಭಾಷಣವನ್ನು ಮಾಡುವುದು. ಈ ಭಾಷಣ ಮಾಡುವಾಗ ಅವನ ಆನಂದಕ್ಕೆ ಪಾರವೇ ಇರುವುದಿಲ್ಲ.

ಅಧ್ಯಕ್ಷರ ಉಪನ್ಯಾಸವಾದಮೇಲೆ ಕಾರ್ಯದರ್ಶಿಯು ಪುನಃ ಎದ್ದು "ನಾವು ಇಂದು ಎಷ್ಟು ಧನ್ಯರಾಗಿದ್ದೇವೆ ಎನ್ನುವುದನ್ನು ಬರಿಯ ಮಾತುಗಳಿಂದ ವರ್ಣಿಸಲು ಅಸಾಧ್ಯವೆಂದರೆ ಅದು ಅತಿಶಯೋಕ್ತಿಯಾಗಲಾರದು. ಶ್ರೀಯುತರ ಉಪನ್ಯಾಸವನ್ನು ಕೇಳಿದ ಯಾರ ಮನಸ್ಸಾದರೂ ಕರಗದಿರಲಾರದು. ನಮ್ಮ ಮಾತೃಭೂಮಿಯ ಉದ್ಧಾರಕ್ಕಾಗಿ ನಾವೆಲ್ಲರೂ ಒಮ್ಮತದಿಂದ ಒಟ್ಟುಗೂಡಿ ಪ್ರಾಣವನ್ನಾದರೂ ಕಳೆದುಕೊಳ್ಳಲು ಸಿದ್ಧರಾಗಿದ್ದೇವೆ—ಎಂದು ನಾನು ಅಧ್ಯಕ್ಷರಿಗೆ ನಿಮ್ಮೆಲ್ಲರ ಪರವಾಗಿ ಭರವಸೆ ಕೊಡಬಲ್ಲೆ. (ಕರತಾಡನಗಳು. 'ಕೇಳಿ! ಕೇಳಿ!' ಎಂದು ಕಾರ್ಯದರ್ಶಿ ಗಟ್ಟಿಯಾದ ಧ್ವನಿಯಲ್ಲಿ ಹೇಳುತ್ತಾನೆ.) ನಾನು ಸಂಘದ ಪರವಾಗಿಯೂ ಶ್ರೀಯುತರಿಗೆ ವಂದನೆಗಳನ್ನು ಅರ್ಪಿಸುತ್ತೇನೆ. ಶ್ರೀಯುತರು ನಾನು ಅವರನ್ನು ಅಧ್ಯಕ್ಷತೆ ವಹಿಸಬೇಕೆಂದು ಕೇಳಿಕೊಂಡ ಒಡನೆಯೇ ಒಪ್ಪಿದರು. (ಇದು ಸುಳ್ಳು. ನಾಲ್ಕೈದು ದಿವಸ ಕಾಯಿಸಿದರು.) ಅನೇಕ ಕೆಲಸಗಳಿದ್ದರೂ ಕೂಡ (ಇದ್ದುದು ಸಂದೇಹ) ಅವರು ಇಂದು ನಮ್ಮ ನಡುವೆ ಬಂದುದಕ್ಕಾಗಿ, ತಮ್ಮ ಅಮೂಲ್ಯವಾದ ಕಾಲದಲ್ಲಿ ಸ್ವಲ್ಪವನ್ನು ನಮಗಾಗಿ ಮೀಸಲಾಗಿಟ್ಟದ್ದಕ್ಕಾಗಿ, ನಾನು ಮತ್ತೊಮ್ಮೆ ನಮ್ಮ ಹೃತ್ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ" ಎಂದು ಅಧ್ಯಕ್ಷರಿಗೆ ಹಾರ ಹಾಕುವುದು.

ಅನಂತರ ಅಧ್ಯಕ್ಷರನ್ನು ಬೀಳ್ಕೊಟ್ಟು, ಮತ್ತೆ ಶಾಲೆಗೆ ಹಿಂದಿರುಗಿ ಬಂದು, ಬೆಂಚುಗಳನ್ನು ಮತ್ತೆ ತರಗತಿಗಳಿಗೆ ಹಾಕಿ, ಜಮುಖಾನೆ ಸುತ್ತಿ, ಅದನ್ನು ವಾಪಸ್ಸು ಕೊಟ್ಟು, ಪೆಟ್ರೊಮ್ಯಾಕ್ಸ್ ದೀಪವನ್ನು ಅಂಗಡಿಗೆ ಕೊಟ್ಟು, ರಾತ್ರಿ ಹತ್ತೂವರೆ ಗಂಟೆಗೆ ಹೆದರಿಕೊಂಡು ಮನೆಗೆ ಹೋಗುವುದು.

ಒಂದು ಸಭೆ ಏರ್ಪಡಿಸುವುದೆಂದರೆ ಇಷ್ಟು ಕಷ್ಟ! ಪ್ರಾರಂಭೋತ್ಸವಕ್ಕೆ ಅರ್ಧಪ್ರಾಣ ಹೋದ ಹಾಗೆಯೆ!

ಇನ್ನು, ಸಂಘವು ಕೆಲಸಮಾಡುತ್ತಿರುವುದೆಂದು ಜನರಿಗೆ ತೋರಿಸಲು

ಕೆಲವು ಸಭೆಗಳನ್ನು ಏರ್ಪಡಿಸಬೇಕು. ಚರ್ಚೆಗಳನ್ನು ಏರ್ಪಡಿಸಬೇಕಾದರೆ, ವಿಷಯದ ಪರವಾಗಿಯೂ ವಿರೋಧವಾಗಿಯೂ ಮಾತನಾಡಲು ಕೆಲವರ ಕಾಲು ಕಟ್ಟಬೇಕು. ವಾರಕ್ಕೊಮ್ಮೆ ಯಾರ ಮನೆಗಾದರೂ ಹೋಗಿ ಹಲ್ಗಿರಿಯುತ್ತ "ಸಾರ್, ನಾವು ಒಂದು ಸಂಘವನ್ನು ಸ್ಥಾಪಿಸಿದ್ದೇವೆ. ಏನೋ ಬಡಸಂಘ. ತಮ್ಮಂಥವರು ಮುಂದೆ ಬಂದು ಸಹಾಯಮಾಡಿ ಉದ್ಧರಿಸಬೇಕು. ಈ ವಾರ ನಾವು ಇಂತಹ ವಿಷಯವಾಗಿ ಉಪನ್ಯಾಸವನ್ನು ಏರ್ಪಡಿಸಬೇಕೆಂದಿದ್ದೇವೆ. ಇದಕ್ಕೆ ತಾವಲ್ಲದೆ ಬೇರೆ ಯಾರೂ ಸರಿಯಿಲ್ಲ" ಎಂದು ನಮ್ರತೆಯಿಂದ ಕೇಳಿ ಕೊಳ್ಳುವುದು. ಅವರು ಒಪ್ಪದಿದ್ದರೆ, ಅದೇ ಮಾತನ್ನು ಇನ್ನೂ ನಾಲ್ಕು ಜನಕ್ಕೆ ಹೇಳಿ, ಕೊನೆಗೆ ಒಬ್ಬರನ್ನು ಬಲೆಗೆ ಬೀಳಿಸಿಕೊಳ್ಳುವುದು.

ಪ್ರಾರಂಭೋತ್ಸವಕ್ಕಿಂತಲೂ ಈಗ ಇನ್ನೂ ಸ್ವಲ್ಪ ಕಷ್ಟ ಹೆಚ್ಚು. ಉತ್ಸವ, ಕೋಲಾಹಲ ಎಂದರೆ ಹೇಗೋ ಜನರು ಸೇರಿಬಿಡುತ್ತಾರೆ. ಆದರೆ ಉಪನ್ಯಾಸ ಕೇಳಲು ಇಸಮುಗಳು ಸಿಕ್ಕುವುದೇ ಕಷ್ಟ. ಆಯ್ತು. ತಾನೇ ಹೋಗಿ, ಮಿತ್ರರು ಕೆಲವರಿಗೆ ಕಾಫಿ ಕೊಡಿಸಿ, ಅವರನ್ನು ಎಳೆದುಕೊಂಡು ಬಂದು ಕೂಡಿಸುವುದು.

ಓ, ಮರೆತೆ. ಕಾಸಿಲ್ಲದೆ ಯಾವ ಕೆಲಸವೂ ನಡೆಯುವುದಿಲ್ಲ. ನೋಟೀಸನ್ನು ಅಚ್ಚುಹಾಕಿಸುವುದಕ್ಕೂ ಹಾರ ತುರಾಯಿಗಳಿಗೂ ಬೆಂಚುಗಳನ್ನು ಸರಿಯಾಗಿ ಜೋಡಿಸಿ ಏರ್ಪಾಡುಮಾಡುವ ಜವಾನರಿಗೂ ದುಡ್ಡು ಕೊಡಬೇಕು. ಈ ಕಾಸನ್ನು ನಾಲ್ಕು ಜನದ ಬಳಿ ಕೇಳಿ ಸಂಪಾದಿಸಬೇಕು. ಪ್ರತಿತಿಂಗಳೂ ಸಂಘಕ್ಕೆ ಚಂದಾಹಣ ಯಾರೂ ಕೊಡುವುದಿಲ್ಲ. ಮನೆಮನೆ ಅಲೆಯುವುದು ಮಾತ್ರ ಲಾಭ. ಆದ್ದರಿಂದ ಕೆಲವು ಮಹಾನುಭಾವರ ಹತ್ತಿರ ತಿರುಪೆ. ಅನೇಕ ವೇಳೆ ಕೈ ಕಚ್ಚಿದರೂ ಅನುಭವಿಸಬೇಕು.

ಅಂತೂ ಇಂತೂ, ಒಂದು ವರ್ಷದ ಮೇಲೆ ವಾರ್ಷಿಕೋತ್ಸವ. ಅವತ್ತೂ ಪ್ರಾರಂಭೋತ್ಸವದ ದಿನದಂತೆ ಕೋಲಾಹಲ. ಆ ದಿನ ಕಾರ್ಯದರ್ಶಿಯು ಇನ್ನೊಂದು ಮುಖ್ಯವಾದ ಕೆಲಸವನ್ನೂ ಮಾಡಬೇಕು. ಅವನು ಪ್ರಾರಂಭದಿಂದಲೂ ಇದಿರುನೋಡುತ್ತಿದ್ದ ಮಹಾಸಂಭ್ರಮ ಅದು. ಅದೇ ಸಂಘದ ವರದಿ. ಸ್ನೇಹಿತನ ಸೂಟನ್ನು ಧರಿಸಿ, ಮೃದುವಾದ ಧ್ವನಿಯಲ್ಲಿ ಸಂತೋಷದಿಂದ ಆ ಕಾರ್ಯವನ್ನು ಕಾರ್ಯದರ್ಶಿ ನಿರ್ವಹಿಸುತ್ತಾನೆ. ಆ ವರದಿಯಲ್ಲಿ

"ಪ್ರತಿ ಸಭೆಯೂ ಕಾರ್ಯದರ್ಶಿಗಳಾದ ಇಂತಹವರ ವಂದನಾರ್ಪಣೆಯಾದ ಮೇಲೆ ಮುಗಿಯಿತು" ಎಂದು ಮೇಲಿಂದ ಮೇಲೆ ಬರುತ್ತದೆ.

ಕೊನೆಗೆ "ಸಂಘದ ಕಾರ್ಯಕ್ರಮಗಳಲ್ಲಿ ಸಹಕರಿಸಿದವರಿಗೂ ಸಭೆಗಳು ಕೂಡಲು ಸ್ಥಳಕೊಟ್ಟ ಹೆಡ್ಮಾಸ್ಟರ್ ಹಿರಿಯಪ್ಪನವರಿಗೂ ಜಮಖಾನೆ ಕೊಟ್ಟ ಜವರೇ ಗೌಡರಿಗೂ ಸಭೆಯಲ್ಲಿ ನೆರೆದಿದ್ದ ಸರ್ವರಿಗೂ ಬರಲು ಅನುಕೂಲವಾಗ ದಿದ್ದ ಬಾಕಿಯವರಿಗೂ" ವಂದನೆಗಳ ಸುರಿಮಳೆ.

ಇಷ್ಟೆಲ್ಲಾ ದನದ ಹಾಗೆ ದುಡಿದು ಬಿಟ್ಟಿಚಾಕರಿ ಮಾಡಿದ ಮೇಲೆ--ಮುಂದಿನ ವರ್ಷದ ಕಾರ್ಯದರ್ಶಿ ಯಾರು ? ಯಥಾಪ್ರಕಾರ—ಅವನೇ !

—ಎಂ. ವಿ. ನಾರಾಯಣಮೂರ್ತಿ.

## ೨೨. "ರಾವಣನ ಹೊಟ್ಟೆಗೆ ಅರೆಕಾಸು ಮಜ್ಜಿಗೆ"

[ಒಂದು ದಿನ ತರಗತಿಯಲ್ಲಿ ಪಾಠ ಮಾಡುತ್ತಿದ್ದಾಗ "ರಾವಣನ ಹೊಟ್ಟೆಗೆ ಅರೆಕಾಸು ಮಜ್ಜಿಗೆ" ಎಂಬ ಗಾದೆ ಬಂತು. "ಈ ಗಾದೆಯ ಮೂಲವನ್ನು ಯಾರಾದರೂ ಸಂಶೋಧಿಸಿಕೊಡುವಿರಾ?" ಎಂದು ಕೇಳಿದ ಹುಡುಗಾಟದ ಮಾತಿಗೆ ಉತ್ತರ ವಾಗಿ ಒಬ್ಬರು ಮನೆಯಿಂದ ಬರೆದು ತಂದದ್ದು ಇದು.—]

ಮೇಲಿನ ಗಾದೆಯ ಅರ್ಥವನ್ನೂ ಹುಟ್ಟನ್ನೂ ತಿಳಿಯಲು ಅನೇಕರು ಕುತೂಹಲವುಳ್ಳವರಾಗಿದ್ದಾರೆ. ನಾವು ಸಿಂಹಳದ್ವೀಪದಲ್ಲಿರುವ ಅನುರಾಧಪುರ ದಲ್ಲಿ ಶೋಧನೆ ನಡೆಸಿ ಈ ಗಾದೆ ಜನರಲ್ಲಿ ಬಳಕೆಗೆ ಬರಲು ಕಾರಣವನ್ನೂ ಅದರ ಅರ್ಥವನ್ನೂ ಕಂಡುಹಿಡಿದಿದ್ದೇವೆ. ಇದರಿಂದ ಮಹಾಜನಗಳ ಕುತೂಹಲ ತಣಿಯುವುದೆಂದು ನಂಬುತ್ತೇವೆ.

೧

ಈ ಗಾದೆಯಲ್ಲಿ "ರಾವಣ" ಎಂಬ ಹೆಸರು ರೂಢಿಯಲ್ಲಿರುವುದರಿಂದ, ಇದು ರಾಮಾಯಣದ ಕಾಲದಲ್ಲಿ ರೂಢಿಯಾಗಿದ್ದಿರಬೇಕು. ಎಂದರೆ, ಇದು ತ್ರೇತಾಯುಗದಿಂದಲೂ ಲೋಕೋಕ್ತಿಯಾಗಿರಬೇಕು. ಆದರೆ ರಾಮಾಯಣದ ಕಥೆಗಳಲ್ಲಿ "ಮಜ್ಜಿಗೆ"ಯ ವಿಷಯ ಬಂದಿಲ್ಲವೆಂಬ ಪ್ರಶ್ನೆಯೇಳುತ್ತದೆ. ಅದಕ್ಕೆ ನಾವು ಸಿಂಹಳ ದ್ವೀಪದಲ್ಲಿ ಶೋಧನೆ ನಡೆಸಿ, "ಮಜ್ಜಿಗೆ" ಬರಲು ಕಾರಣವನ್ನು ಶಾಸನಗಳ ಮೂಲಕ ಕಂಡುಹಿಡಿದಿದ್ದೇವೆ.

ಈ ಶಾಸನಗಳು ತಮಿಳಿನಲ್ಲಿವೆ. ಅಲ್ಲಲ್ಲಿ ಅಕ್ಷರಗಳೂ ಅಳಿಸಿಹೋಗಿವೆ. ಅಲ್ಲಿಯ ಒಂದು ಶಾಸನದಲ್ಲಿ " * * * * ಪೋರ್ ವೀರರ್‌ಕಳಕ್ಕು * * * *" ಎಂದೂ ಹತ್ತು ಮೈಲಿಯಾಚೆ ಸಿಕ್ಕಿದ ಇನ್ನೊಂದು ಅದೇ ಕಾಲದ ಶಾಸನದಲ್ಲಿ "* * * * ಮೋರ್ರೈ * * * *" ಎಂದೂ ಬರೆದಿದೆ.

ಇವೆರಡು ಶಾಸನಗಳನ್ನೂ ಅಕ್ಕಪಕ್ಕದಲ್ಲಿಟ್ಟು ಪರಿಶೀಲಿಸಲಾಗಿ ಈ ಕೆಳಗೆ ಕಾಣುವ ವಿಷಯಗಳು ಗೊತ್ತಾಗುತ್ತವೆ. ರಾವಣನು ಸೀತಾದೇವಿ ಯನ್ನು ಅಪಹರಿಸಿಕೊಂಡು ಹೋದಮೇಲೆ ರಾಮಚಂದ್ರನು ಕಪಿಸೈನ್ಯವನ್ನು ಸೇರಿಸಿ, ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ಲಂಕೆಗೆ ಹೋದನಷ್ಟೆ. ರಾಮನು ಬರುವ ಸಂಭವವನ್ನು ಮೊದಲೇ ತಿಳಿದು, ರಾಕ್ಷಸಾಧಿಪತಿಯಾದ ರಾವಣನು, ಯುದ್ಧಮಾಡುವಾಗ ಆಯಾಸ ಹೊಂದುವವರಿಗೂ ಪೆಟ್ಟು ತಿನ್ನುವವರಿಗೂ ಯಥೇಚ್ಛವಾಗಿ ಮಜ್ಜಿಗೆಯನ್ನು ಕೊಡಬೇಕೆಂದು ಅಪ್ಪಣೆ ಮಾಡಿದನು. ಇದು ಈ ಎರಡು ಶಾಸನಗಳಲ್ಲಿ ಕಾಣುವ "* * * * ಪೋರ್ ವೀರರ್‌ಕಳಕ್ಕು" ಮತ್ತು " * * * * ಮೋರ್ರೈ * * * " ಎಂಬ ವಾಕ್ಯಗಳಿಂದ ಚೆನ್ನಾಗಿ ವಿಶದವಾಗುತ್ತದೆ.

ಬೇರೊಂದು ಕಡೆ, ಇನ್ನೊಂದು ಶಾಸನದಲ್ಲಿ " * * * ಸಾಗರಂಗಳೈ * * * ಶೇರ್ತಾರ್" ಎಂದು ಬರೆದಿದೆ. ಎಂದರೆ, ಈಗಿನ ಕಾಲದಲ್ಲಿ ಯುದ್ಧ ಕ್ಕಾಗಿ ಆಹಾರವನ್ನು ಶೇಖರಿಸುವಂತೆ, ರಾವಣನು, ದಧಿಸಮುದ್ರಕ್ಕೂ ಕ್ಷೀರ ಸಮುದ್ರಕ್ಕೂ ಕಾಲುವೆ ತೆಗೆಯಿಸಿ, ಅದರೊಂದಿಗೆ ಶುದ್ಧೋದಕ ಸಮುದ್ರವನ್ನೂ ಸೇರಿಸಿ, ಒಂದು ದೊಡ್ಡ ಮಜ್ಜಿಗೆಯ ಸಮುದ್ರವನ್ನು ಸಿದ್ಧಪಡಿಸಿದನು—ಎಂದು ತಿಳಿಯಬಹುದಾಗಿದೆ. (ಬಹುಶಃ, ಸುರಾಸಮುದ್ರವನ್ನು ಐಚ್ಛಿಕವಾಗಿ ಬೇಕೆಂದ ವರಿಗೆ ಮೀಸಲಾಗಿಟ್ಟಿದ್ದನೆಂದು ಕಾಣುತ್ತದೆ.)

ಶಾಸನವಿನ್ನೊಂದರಲ್ಲಿ "* * ಪಾನೈಗಳಿಲ್ * * * ಪೆಣ್‌ಮಣಿಯರ್" ಎಂದಿದೆ. ಎಂದರೆ, ರಾಕ್ಷಸಸ್ತ್ರೀಯರೆಲ್ಲರೂ ಗಡಿಗೆಗಳಲ್ಲಿ ಸೈನಿಕರಿಗೆ ಮಜ್ಜಿಗೆ ಯನ್ನು ಕೊಡುವಂತೆ ರಾವಣನು ಏರ್ಪಾಡುಮಾಡಿದ್ದನು.

ಈ ಆಧಾರಗಳಿಂದ ರಾವಣನ ಕಾಲದ ಯುದ್ಧದಲ್ಲಿ "ಮಜ್ಜಿಗೆ"ಯ ಸರಬರಾಯಿ ಬಹು ಮುಖ್ಯವಾಗಿತ್ತೆಂದು ತಿಳಿಯಬಹುದು.

೨

ಇನ್ನು, ರಾವಣನ ಹೊಟ್ಟೆಗೂ ಅರೆಕಾಸು ಮಜ್ಜಿಗೆಗೂ ಇರುವ ಸಂಬಂಧ ವನ್ನು ನಾವು ವಿಚಾರಮಾಡಬೇಕು. ಇದನ್ನೂ ಆಗಿನ ಶಾಸನಗಳಿಂದಲೇ ಸಾಧಿಸಬಹುದು.

ಸಿಂಹಳದಲ್ಲಿ ನಾವು ಶೋಧನೆ ನಡೆಸಿದಾಗ ಒಂದು ಶಿಥಿಲವಾದ ಶಾಸನ ದಲ್ಲಿ " * * * * ಮುಗಿಂ * ಪೋಚ್ಚು ** ಹಾಯ್ * * * ಕುಡುಡಾ * ರೈ ** ಥೇ * ರಾದು * * * " ಎಂದು ಇಷ್ಟು ಮಾತ್ರ ಸಿಕ್ಕುತ್ತದೆ. ಈ ಶಾಸನ ಇಷ್ಟು ಶಿಥಿಲವಾಗಿದ್ದರೂ ಮೇಲಿನ ಗಾದೆಯ ಅರ್ಥವನ್ನು ಅರಿಯಲು ಬಹಳ ಉಪಯುಕ್ತವಾಗಿದೆ.

" * * * * ಮುಗಿಂ * ಪೋಚ್ಚು" ಎಂದರೆ ಮಜ್ಜಿಗೆಯ ಸಮುದ್ರದಲ್ಲಿದ್ದ ಎಲ್ಲಾ ಮಜ್ಜಿಗೆಯೂ ಮುಗಿದುಹೋಯಿತು—ಎಂದರ್ಥ. ಅಷ್ಟರಲ್ಲಿ ಯುದ್ಧ ಮಾಡುತ್ತಿದ್ದ ದಶಕಂಠ ರಾವಣನಿಗೂ ಪೆಟ್ಟಾಗಿ ಆಯಾಸವಾಯಿತೆಂಬುದು " ** ಹಾಯ್ * * * " ಎಂಬ ಕೂಗಿನಿಂದ ವ್ಯಕ್ತವಾಗುತ್ತದೆ. ಮುಂದಿನ "ಕುಡುಡಾ * ರೈ" ಎಂಬುದರಲ್ಲಿ ' * ರೈ ' ಎಂದರೆ ' (ಮೋ) ರೈ ' ಎಂದರೆ "ಮಜ್ಜಿಗೆಯನ್ನು ಕೊಡು" ಎಂದು ಅರ್ಥ. "ಥೇ * ರಾದು" ಎಂದರೆ, ರಾವಣನು "ಮಜ್ಜಿಗೆ ಸಾಲದು" ಎಂದುದನ್ನು ಸೂಚಿಸಿದಂತಾಯಿತು.

ಹೀಗೆ ಕಂಡುಬಂದ ಎಲ್ಲಾ ವಿಷಯಗಳನ್ನು ಒಟ್ಟುಗೂಡಿಸಿದರೆ—ಮಜ್ಜಿಗೆ ಮುಗಿದುಹೋಯಿತು. ರಾವಣನು ಆಯಾಸಗೊಂಡು ಮಜ್ಜಿಗೆ ಕೇಳಿದನು. ಇದ್ದ ಸ್ವಲ್ಪವನ್ನು ಕೊಟ್ಟರು. ಅದು ರಾವಣನ ಹತ್ತು ಗಂಟಲು ಗಳನ್ನು ಸ್ವಲ್ಪ ಮಾತ್ರ ನೆನೆಸಿತು. ರಾವಣನು ಹಾಗೆಯೇ ಪ್ರಾಣಬಿಟ್ಟನು —ಎಂಬುದು ಸ್ಪಷ್ಟವಾಗುತ್ತದೆ.

ಈ ರೀತಿಯಲ್ಲಿ ರಾವಣನು ಸತ್ತ ವಿಷಯ ಜನರೆಲ್ಲರಿಗೂ ಗೊತ್ತಾಯಿತು. ತಮ್ಮ ರಾಜನು ಕುಡಿಯಲು ಮಜ್ಜಿಗೆ ಸಹ ಸಿಕ್ಕದೆ ಸತ್ತನೆಂದು ಕೇಳಿ ಎಲ್ಲರೂ ವ್ಯಸನಪಟ್ಟರು. ಎಲ್ಲೆಲ್ಲೂ "ರಾವಣನ ಹೊಟ್ಟೆಗೆ ಅರೆಕಾಸು ಮಜ್ಜಿಗೆ ಸಾಕೆ?" ಎಂಬ ಗುಜುಗುಜು ಎದ್ದಿತು.

೩

ಇನ್ನು ಪರಿಶೀಲಿಸಬೇಕಾಗಿ ಉಳಿದಿರುವುದು "ಅರೆಕಾಸು" ಎಂಬುದರ ಅರ್ಥ. ನಮ್ಮಲ್ಲಿ "ಕೊಸರು" ಎಂಬ ಪದ ವಾಡಿಕೆಯಲ್ಲಿದೆ. ಇದೇ ಅರ್ಥವನ್ನು ಕೊಡುವ "ಕಾಸುರು" ಅಥವಾ "ಕಾಸು" ಎಂಬ ಪದ ಆಗಿನ ಕಾಲದಲ್ಲಿ ಸಿಂಹಳದ್ವೀಪದಲ್ಲಿ ರೂಢಿಯಲ್ಲಿತ್ತು.

"ಕಾಸುಪಾಲಾನಾಲುಂ ಕನ್ರುಕ್ಕು ವಿಡು" ಎಂದು ಸಿಂಹಳದ್ವೀಪದ ತಮಿಳರಲ್ಲಿ ವಾಡಿಕೆಯಾಗಿರುವ ಗಾದೆಯನ್ನು ನೋಡಿದರೆ "ಕಾಸು" ಎಂಬ ಪದಕ್ಕೆ "ಒಂದು ಅಳತೆ" ಎಂಬ ನಮ್ಮ ವಾದವು ಬಲಗೊಳ್ಳುತ್ತದೆ. ಆ ಗಾದೆಯ ಅರ್ಥವೇನೆಂದರೆ "ಕಾಸುಹಾಲನ್ನಾದರೂ ಕರುವಿಗೆ ಬಿಡು" ಎಂದರೆ "ಗಂಟಲು ನೆನೆಯುವಷ್ಟಾದರೂ ಹಾಲನ್ನು ಕರುವಿಗೆ ಬಿಡು" ಎಂದು.

ಇಷ್ಟು ಸಣ್ಣ ಅಳತೆಯಲ್ಲಿ ಅರ್ಥವು ರಾವಣನ ಹತ್ತು ಗಂಟಲುಗಳನ್ನು ಹಾಯ್ದು ಹೊಟ್ಟೆಯನ್ನು ಸೇರುವುದು ಸಾಧ್ಯವೆ? ಇಲ್ಲ. ಆದ್ದರಿಂದಲೇ, ರಾವಣನ ಕಾಲವಾದಮೇಲೆ ರಾಕ್ಷಸಸಾಮ್ರಾಜ್ಯದಲ್ಲಿ ಈ ಗಾದೆಯು ಪ್ರಚಾರವಾಗಿ, ಅಲ್ಲಿಂದ ತಮಿಳುದೇಶಗಳಲ್ಲಿ ಹರಡಿ, ಹತ್ತನೆಯ ಶತಮಾನದ ಅಂತ್ಯದಲ್ಲಿ ಅರವದ ಅರಸರು ಗಂಗವಾಡಿ ತೊಂಬತ್ತಾರುಸಾವಿರವನ್ನು ಆಕ್ರಮಿಸಿದಾಗ ಕನ್ನಡನಾಡಿಗೂ ನುಗ್ಗಿ ಈಗ ಬಳಕೆಯಲ್ಲಿದೆ.

ಇದೇ ಈ ಗಾದೆಯ ಹುಟ್ಟಿನ ಗುಟ್ಟು.

—ಎಂ. ವಿ. ನಾರಾಯಣಮೂರ್ತಿ.

# ಶ್ರೀ ವೆಂಕಣ್ಣಯ್ಯ ವ್ಯಾಸಂಗಗೋಷ್ಠಿ

## ವರದಿ

**ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ**
**ಸ ಯತ್‌ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ**

ಈ ಪ್ರಸ್ತುತ ಪುಸ್ತಕ ನನ್ನ ಪೂಜ್ಯ ವಿದ್ಯಾಗುರುಗಳಾದ ಇಬ್ಬರ ಆಚರಣೆಯ ಒಂದು ಅಂಶದ ಅನುಕರಣ. ಇಪ್ಪತ್ತೈದು ವರುಷಗಳ ಹಿಂದೆ ದಿವಂಗತ ಶ್ರೀವರ್ಮಾ ಟಿ. ಎಸ್. ವೆಂಕಣ್ಣಯ್ಯನವರೂ ಶ್ರೀವರ್ಮಾ ಎ. ಆರ್. ಕೃಷ್ಣಶಾಸ್ತ್ರಿಗಳೂ **ಬೆಂಗಳೂರು ಸೆಂಟ್ರಲ್ ಕಾಲೆಜ್ ಕರ್ಣಾಟಕ ಸಂಘ**ವನ್ನು ಸ್ಥಾಪಿಸಿ, **'ಪ್ರಬುದ್ಧ ಕರ್ಣಾಟಕ'**ವನ್ನು ಪ್ರಾರಂಭಿಸಿ, ನಾಡಿಗೆ ಮೇಲುಪಂಕ್ತಿ ಹಾಕಿಕೊಟ್ಟರು. ಇದರಂತೆಯೇ ಹುಟ್ಟಿದ **ಮೈಸೂರು ಮಹಾರಾಜಾ ಕಾಲೇಜು ಕರ್ಣಾಟಕ ಸಂಘ** ೧೯೨೮ರಲ್ಲಿ, ಆಗ ಪ್ರೊಫೆಸರ್ ಆಗಿದ್ದ ಶ್ರೀ ವೆಂಕಣ್ಣಯ್ಯನವರ ಉಪಾಧ್ಯಕ್ಷತೆಯಲ್ಲಿ, ತರುಣ ವಿದ್ಯಾರ್ಥಿ ಕವಿಗಳ ಮೊತ್ತಮೊದಲ ಕವನ ಸಂಗ್ರಹವನ್ನು **'ಕಿರಿಯ ಕಾಣಿಕೆ'** ಎಂಬ ಹೆಸರಿನಿಂದ ಪ್ರಕಟಿಸಿತು. ಅದೇ ವರ್ಷ ಬೆಂಗಳೂರು ಸೆಂಟ್ರಲ್ ಕಾಲೆಜ್ ಕರ್ಣಾಟಕ ಸಂಘ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳ ನೇತೃತ್ವದಲ್ಲಿ ನಾಡಿಗೇ ಮೊದಲನೆಯ **"ವಿದ್ಯಾರ್ಥಿ ಕವಿ ಸಮ್ಮೇಳನ"**ವನ್ನು ಏರ್ಪಡಿಸಿ ವಿಜೃಂಭಣೆಯಿಂದ ನಡಸಿತು. ಪುನಃ ೧೯೩೦ರಲ್ಲಿ ಮೈಸೂರು ಕಾಲೆಜ್ ಕರ್ಣಾಟಕ ಸಂಘ ಒಂದು ಸಣ್ಣ ವಿದ್ಯಾರ್ಥಿ ಕವಿಗೋಷ್ಠಿ ನಡಸಿ, **'ತಳಿರು'** ಎಂಬ ಇನ್ನೊಂದು ಕವನಸಂಗ್ರಹವನ್ನು ಪ್ರಕಟಿಸಿತು. ಈ ಹಿರಿಯ ಹೆಜ್ಜೆಗಳ ಗುರುತಿನಲ್ಲಿ ಹೆಜ್ಜೆಯಿಡಲು ಯತ್ನಿಸಿದೆ ಈ ಸಂಗ್ರಹ. ಇದು **"ಕಿರಿಯ ಕಾಣಿಕೆಯ ಮರಿ."** 'ಕಿರಿಯ ಕಾಣಿಕೆ' ವಿದ್ಯಾರ್ಥಿಗಳ ಪದ್ಯ ಸಂಗ್ರಹವಾದರೆ, ಈ "ಮರಿ" ವಿದ್ಯಾರ್ಥಿಗಳ ಗದ್ಯಸಂಗ್ರಹ.

ತುಮಕೂರು ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ಈ ವರ್ಷ, ಎಂದರೆ ೧೯೪೩ ಜೂಲೈ ತಿಂಗಳ ಮೂರನೆಯ ವಾರ **"ಪ್ರೊಫೆಸರ್ ವೆಂಕಣ್ಣಯ್ಯ ವ್ಯಾಸಂಗ ಗೋಷ್ಠಿ"** ಎಂಬ ಒಂದು ಕನ್ನಡ ಅಭ್ಯಾಸಕೂಟ ಆರಂಭ

ವಾಯಿತು. ಕರ್ಣಾಟಕ ಸಂಘಗಳು ಸಾಮಾನ್ಯವಾಗಿ ಮಾಡುವ ಕಾರ್ಯಕ್ರಮ ಗಳನ್ನೇ ಈ ಇಂಟರ್‌ಮೀಡಿಯೆಟ್ **ಕಾಲೇಜ್ ಸಂಘವೂ** ನಡಸುವುದು ಶಕ್ಯ ವಿದ್ದುದರಿಂದ, ಅವರ ಕಾರ್ಯವನ್ನೇ ಪ್ರತಿ ಮಾಡುವ ಮತ್ತೊಂದು **'ಕರ್ಣಾಟಕ ಸಂಘ'**ಕ್ಕೆ ಬದಲಾಗಿ, ಅವರ ಕಾರ್ಯಕ್ಕೆ ಪೂರಕವಾಗುವಂಥ ಕಾರ್ಯಕ್ರಮವನ್ನು ವಿಧಿಸಿಕೊಂಡು ಕೆಲಸ ಮಾಡುವ ಒಂದು ಸಣ್ಣ **'ಅಭ್ಯಾಸ ಕೂಟ'** ರಚನೆ ಯಾಯಿತು. ದಿವಂಗತ ಕನ್ನಡ ಪ್ರೊಫೆಸರ್ ಶ್ರೀಮಾನ್ ಟಿ. ಎಸ್. ವೆಂಕ ಣ್ಣಯ್ಯನವರ ಹೆಸರಿನ ರಕ್ಷಾಬಲದಿಂದ ಸುಮಾರು **ಮೂವತ್ತೈದು ಸದಸ್ಯರ** ಈ ವ್ಯಾಸಂಗ ಗೋಷ್ಠಿ ಕೆಲಸಮಾಡತೊಡಗಿತು.

ಅಂದು ಜೂಲೈ ಮೂರನೆಯ ವಾರ ಈ ವ್ಯಾಸಂಗ ಗೋಷ್ಠಿ ತನಗೆ ತಾನೇ ವಿಧಿಸಿಕೊಂಡ ಕಾರ್ಯಾವಳಿ ಹೀಗಿತ್ತು:

**೧. ಗೀತಾ ತರಗತಿಗಳು.** ಆಗಸ್ಟ್ ಇಂದ ಡಿಸೆಂಬರ್.

ವಾರಕ್ಕೆ ಒಂದು ಗಂಟೆ ಬೆಳಗಿನ ಹೊತ್ತು ಸೇರಿ ಗೀತೆಯನ್ನು ಸುಟಿ ಯಾಗಿ ಓದಲು ಕಲಿಯುವುದು. ಡಿಸೆಂಬರ್ ತಿಂಗಳಲ್ಲಿ 'ಗೀತಾ ಜಯಂತಿ' ನಡಸುವುದು.

**೨. ನಾಟಕ ವಾಚನ.** ಜೂಲೈ ಇಂದ ನವೆಂಬರ್.

ಶ್ರೀ ಕೈಲಾಸಂ ಅವರ ಟೊಳ್ಳುಗಟ್ಟಿ, ತಾಳೀ ಕಟ್ಟೋಕ್ಕೂಲೀನೇ ಮತ್ತು 'ಶ್ರೀ' ಅವರ ಗದಾಯುದ್ಧ ನಾಟಕಗಳ ವಾಚನ. ವಾರಕ್ಕೊಂದು ಗಂಟೆ. ಸದಸ್ಯರೆಲ್ಲರೂ ಅಭ್ಯಾಸಕ್ಕೆ ತಮ್ಮ ಸ್ವಂತ ಪ್ರತಿ ತರಬೇಕು. ತಾವೂ ಓದಬೇಕು.

**೩. ಪ್ರೊಫೆಸರ್ ವೆಂಕಣ್ಣಯ್ಯ ಜ್ಞಾಪಕ ಉಪನ್ಯಾಸಗಳು.**

ಆಗಸ್ಟ್‌ನಿಂದ ಡಿಸೆಂಬರ್ ವರೆಗೆ, ತಿಂಗಳಿಗೊಂದರಂತೆ ಉಪನ್ಯಾಸ ಏರ್ಪಡಿಸಿ, ಅವುಗಳನ್ನೆಲ್ಲ ಒಟ್ಟಿಗೆ ಪ್ರಕಟಿಸುವುದು.

**೪. ಕಾವ್ಯಾವಲೋಕನ ಅಭ್ಯಾಸ.** ಸೆಪ್ಟೆಂಬರ್ ಇಂದ ಡಿಸೆಂಬರ್.

ಸದಸ್ಯರು ತಾವು ತಲೆಗೊಂದು ರೂಪಾಯಂತೆ ಚಂದಾ ಹಾಕಿ, ಬಂದ ರೂಪಾಯಿಗಳಿಗೆ ಒಂದು ಪುಸ್ತಕಭಂಡಾರವನ್ನು ಸ್ಥಾಪಿಸುವುದು. ಪುಸ್ತಕ ಗಳನ್ನು ಓದುವುದು. ಓದಿದುದನ್ನು ಕುರಿತು ಸ್ವಂತ ವಿಮರ್ಶೆ ಬರೆಯುವುದು.

ಬರೆದುದನ್ನು ತಿದ್ದಿಸುವುದು. ವರ್ಷದ ಕೊನೆಯಲ್ಲಿ, ಉತ್ತಮರಾದ ಕಾವ್ಯಾವಲೋಕನ ಪಟುಗಳಿಗೆ ಆ ಭಂಡಾರದ ಪುಸ್ತಕಗಳನ್ನು ಬಹುಮತಿಯಾಗಿ ಹಂಚಿಬಿಡುವುದು.

**೫. ವಿಚಾರ ಪ್ರೇರಣೆಯ ಅಭ್ಯಾಸ.** ಸೆಪ್ಟೆಂಬರ್ ಇಂದ ನವೆಂಬರ್.

ದಿನಕ್ಕೊಂದು ಸಲ, ಅಥವಾ ವಾರಕ್ಕೊಂದು ಸಲ ಸದಸ್ಯರ ಅವಗಾಹನೆಗಾಗಿ ಒಂದು ಸೂಕ್ತಿಯನ್ನೋ ಸಂಗತಿಯನ್ನೋ ಪ್ರಕಟಿಸುವುದು. ಸದಸ್ಯರು ಅದನ್ನು ಕುರಿತ ತಮ್ಮ ವಿಚಾರಸರಣಿಯನ್ನು ವಾರಕ್ಕೊಂದು ಸಲ ಬರೆದು ತಂದು ತಿದ್ದಿಸುವುದು. ವರ್ಷದ ಕೊನೆಗೆ, ಉತ್ತಮರೆಂದು ಕಂಡುಬಂದ ವಿಚಾರಶೀಲರಿಗೆ ಬಹುಮತಿಯಾಗಿ ಪುಸ್ತಕಪ್ರದಾನ ಮಾಡುವುದು.

* * * *

ಈ ರೀತಿ ಗೋಷ್ಠಿ ವಿಧಿಸಿಕೊಂಡ ಕಾರ್ಯಗಳಲ್ಲಿ ನಡೆದದ್ದು ಹೀಗಿದೆ:

### ೧. ಗೀತಾ ತರಗತಿಗಳು.

ಗೀತೆಯ ಒಂದು, ಎರಡು, ಹನ್ನೆರಡನೆಯ ಅಧ್ಯಾಯಗಳನ್ನು ಕೆಡದಂತೆ, ಅರ್ಥ ವ್ಯಕ್ತವಾಗುವಂತೆ ಓದುವ ಅಭ್ಯಾಸ ನಡೆಯಿತು. 'ಗೀತಾ ಜಯಂತಿ' ಯಂದು ಉಪನ್ಯಾಸಗಳು ನಡೆದವು.

### ೨. ನಾಟಕ ವಾಚನ.

'ಟೊಳ್ಳುಗಟ್ಟಿ' ಯನ್ನೂ 'ಪಾತೂ ತೌರ್ಮನೆ' ಯನ್ನೂ ಅಭಿನಯ ಪೂರ್ವಕವಾಗಿ ಓದಿ ಮುಗಿಸಿಯಾಯಿತು. ಉಳಿದುದು ಆಗಲಿಲ್ಲ.

### ೩. ಜ್ಞಾಪಕ ಉಪನ್ಯಾಸಗಳು.

ಐದು ಜ್ಞಾಪಕ ಉಪನ್ಯಾಸಗಳು ನಡೆದುವು. ಅವುಗಳ ವಿವರ:
ಆಗಸ್ಟ್—ಪ್ರಾರ್ಥನೆ—ಜಿ. ಪಿ. ರಾಜರತ್ನಂ.
ಸೆಪ್ಟೆಂಬರ್—ವಿಶ್ವರೂಪ—ಎಂ. ವಿ. ಕೃಷ್ಣಸ್ವಾಮಿ.
ಅಕ್ಟೋಬರ್—ಮುಸ್ಲಿಂ ಧಾರ್ಮಿಕ ಹಬ್ಬಗಳು—ಅಬ್ದುಲ್ ಬಷೀರ್.

ನವೆಂಬರ್—ಜೊಬ್ ಮಹಾತ್ಮನ ಉಪಾಖ್ಯಾನ—

ಎಸ್. ಮಂಜುನಾಥ್.

ಡಿಸೆಂಬರ್—ತುಲಸೀದಾಸರ ರಾಮಮಾನಸಚರಿತ—

ಅ. ತಿ. ಶ್ರೀನಿವಾಸರಾಘವಾಚಾರ್.

ಈ ಐದು ಉಪನ್ಯಾಸಗಳೂ ಪ್ರೊಫೆಸರ್ ಎ. ಆರ್. ಕೃಷ್ಣಶಾಸ್ತ್ರಿಗಳು ಬರೆದಿರುವ ದಿವಂಗತ ವೆಂಕಣ್ಣಯ್ಯನವರ ಪರಿಚಯದೊಡನೆ **"ಪ್ರೊಫೆಸರ್ ವೆಂಕಣ್ಣಯ್ಯ ಜ್ಞಾಪಕ ಉಪನ್ಯಾಸಗಳು"** ಎಂದು ಪ್ರಕಟವಾದುವು.

ಇದೇ ಸಂದರ್ಭದಲ್ಲಿ ಕಾಲೇಜು ಸಂಘವು ಮಾಡಿರುವ ಕನ್ನಡ ಕೆಲಸವನ್ನು ಅಭಿಮಾನದಿಂದ ಹೇಳಿಕೊಳ್ಳಬಹುದಾಗಿದೆ. ಕರ್ಣಾಟಕ ಸಂಘದ ಕಾರ್ಯವನ್ನೇ ಇಂಟರ್‌ಮೀಡಿಯೆಟ್ ಕಾಲೆಜ್ ಸಂಘವೂ ಮಾಡುವುದು ಶಕ್ಯವೆಂದು ಮೇಲೆ ಹೇಳಿತಷ್ಟೆ. ಅದು ನಡಸಿದ ಕಂಠಪಾಠ ಸ್ಪರ್ಧೆಗಳೂ ಪ್ರಬಂಧ ರಚನಾ ಸ್ಪರ್ಧೆಗಳೂ ಹಾಗಿರಲಿ, ಉಪನ್ಯಾಸ ವಿಭಾಗ ಕೂಡ 'ಪ್ರತ್ಯೇಕ ಕರ್ಣಾಟಕ ಸಂಘದ ಅವಶ್ಯಕತೆಯಿಲ್ಲ' ಎನ್ನುವಷ್ಟು ಸಮರ್ಪಕವಾಗಿ ನಡೆದಿದೆ. ೨೪-೭-೪೩ರಿಂದ ೧೯-೧೨-೪೩ರ ವರೆಗೆ ಕೆಲಸ ಮಾಡಿದ ಕಾಲೇಜು ಸಂಘ **ಮೂವತ್ತಮೂರು** ಕಾರ್ಯಕ್ರಮಗಳನ್ನು ನಡಸಿದೆ; ಅದರಲ್ಲಿ **ಕನ್ನಡದ ವಿಭಾಗ ಇಪ್ಪತ್ತೆರಡು :**

**ಹನ್ನೆರಡು ಉಪನ್ಯಾಸಗಳು :** ಫ್ಲಿರ್ದೂಸಿ ಕವಿಯ ಷಹಾನಾಮಾ, ಪ್ರಾರ್ಥನೆಯ ಅನ್ವಯ, ರುದ್ರಕಾವ್ಯ, ಭಾರತೀಯರ ಪಾರಮಾರ್ಥಿಕತೆ, ಅವಳಿ ಜವಳಿಗಳ ವೈಚಿತ್ರ್ಯ, ಗಯಟೆಕವಿ ಮತ್ತು ಆತನ ಫೌಸ್ಟ್‌ನಾಟಕ, ಮಹಾರಾಷ್ಟ್ರದ ವೈಷ್ಣವ ಭಕ್ತರು, ಹೊಸ ಬದುಕಿನ ಹಾದಿ, ಮೇಘ ಸಂದೇಶ ೧, ಮೇಘಸಂದೇಶ ೨, ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳ ಭಾಷಣ, ರಾಜಸೇವಾಸಕ್ತ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರ ವಾರ್ಷಿಕೋತ್ಸವದ ಅಧ್ಯಕ್ಷ ಭಾಷಣ.

**ಮೂರು ಉತ್ಸವಗಳು :** ರವೀಂದ್ರನಾಥ ಠಾಕೂರ ಜಯಂತಿ, ಬುದ್ಧ ಜಯಂತಿ, ಭಾಸ ಜಯಂತಿ.

**ಮೂರು ಚರ್ಚಾಕೂಟಗಳು, ಮೂರು ಕಾವ್ಯವಾಚನಗಳು, ಒಂದು ನಾಟಕ.**

## ೪, ೫. ಕಾವ್ಯಾವಲೋಕನ ಮತ್ತು ವಿಚಾರಪ್ರೇರಣೆ.

ಈ ವಿಭಾಗದ ಕಾರ್ಯಫಲವನ್ನು ಈ ಪುಸ್ತಕದಲ್ಲಿ ಕಾಣಬಹುದು. ಇಲ್ಲಿಯ ಲೇಖಕರಲ್ಲಿ ಶ್ರೀಯುತರಾದ ಹಾಂ. ರಂ. ನಾಗೇಶರಾವ್, ಎಸ್. ರಂಗನಾಥ್ ಮತ್ತು ಸಿ. ಜಿ. ಪರಮಶಿವಯ್ಯ ಇವರು ಜೂನಿಯರ್ ವಿದ್ಯಾರ್ಥಿಗಳು; ಶ್ರೀಯುತರಾದ ಎಲ್, ನಂಜುಂಡರಾವ್, ಎಂ. ಜಿ. ಶ್ರೀನಿವಾಸನ್, ಬಿ. ಎಸ್. ರಾಮಚಂದ್ರರಾವ್, ಸಿ. ಎಸ್. ರಾಮರಾವ್, ಟಿ. ರಾಮರಾವ್ ಮತ್ತು ಕೆ. ಕೊಟ್ರಬಸಪ್ಪ ಇವರು ಸೀನಿಯರ್ ವಿದ್ಯಾರ್ಥಿಗಳು.

ಐದು ವರುಷಗಳ ಕೆಳಗೆ ನಾನು ಮೈಸೂರಿನಲ್ಲಿ ಸಂಪಾದಿಸಿ ಪ್ರಕಟಿಸಿದ **"ನಮ್ಮ ನಮ್ಮವರು"** ಎಂಬ ಸಂಕಲನದಲ್ಲಿ ವಿಶ್ವವಿದ್ಯಾನಿಲಯದ ಇಂಟರ್ ಮೀಡಿಯೆಟ್ ವಿದ್ಯಾರ್ಥಿಗಳ **ಆಶುರಚನಾಗುಣ** ವ್ಯಕ್ತವಾದಂತೆ ಈ ಸಂಕಲನದಲ್ಲಿ ಅವರ **ವಿಚಾರ ವಿಲಾಸ** ವ್ಯಕ್ತವಾಗಿದೆ. ಇಂತಹದರಲ್ಲಿ ಕಂಡುಬರುವ ನಮ್ಮ ತರುಣರ ಶಕ್ತಿ ಸಾಮರ್ಥ್ಯಗಳು ಹಿರಿಯರಿಗೆ ತೃಪ್ತಿ ತಂದಾವೆಂದೂ, ಕಿರಿಯರಿಗೆ ಧೈರ್ಯ ತುಂಬಿಯಾವೆಂದೂ ನಂಬಿ, ನಮ್ಮ ವ್ಯಾಸಂಗಗೋಷ್ಠಿಯ ಸದಸ್ಯರನ್ನು ಅವರ ಸಹಕಾರಕ್ಕಾಗಿ ಕೃತಜ್ಞತೆಯಿಂದ ಸ್ಮರಿಸಿ, ಈ ಪುಸ್ತಕವನ್ನು ಸಹೃದಯರ ಮಡಿಲಿನಲ್ಲಿ ಇಡುತ್ತೇನೆ.

**ಜಿ. ಪಿ. ರಾಜರತ್ನಂ**
ಕನ್ನಡ ಅಧ್ಯಾಪಕ
ಇಂಟರ್ ಮೀಡಿಯೆಟ್ ಕಾಲೇಜು

೧೬-೧-೪೪
ತುಮಕೂರು

# ವಿಚಾರಪ್ರೇರಣೆಗೆ ವಿಧಿಸಿದ ವಿಷಯಗಳು

## **ಮೊದಲನೆಯ ವಾರ** (೧೦-೯-೪೩—೧೬-೯-೪೩)

### ದಿನಕ್ಕೊಂದು ತುತ್ತು

**ಕೆಳಗಿನ ಏಳರಲ್ಲಿ ಯಾವುದಾದರೂ ಒಂದನ್ನು ಕುರಿತು ವಿಚಾರ ಮಾಡಿ, ಅದರ ಭಾವವನ್ನು ನಿಮಗೆ ತಿಳಿದಷ್ಟು ತಿಳಿಸಿ.**

೧. ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ |
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ||
(ಯಾವನು ಎಲ್ಲ ಕಡೆಯೂ ನನ್ನನ್ನು ಕಾಣುವನೋ
ಯಾವನು ಎಲ್ಲವನ್ನೂ ನನ್ನಲ್ಲಿ ಕಾಣುವನೋ
ಅವನ ಪಾಲಿಗೆ ನಾನು ನಾಶವಾಗುವುದಿಲ್ಲ;
ನನ್ನ ಪಾಲಿಗೆ ಅವನೂ ನಾಶವಾಗುವುದಿಲ್ಲ.)

**—ಗೀತಾ : ೬-೩೦**

೨. ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ |
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ||
(ವಿದ್ಯೆ ವಿನಯಗಳಿಂದ ಕೂಡಿದ ಬ್ರಾಹ್ಮಣನನ್ನೂ
ಗೋವನ್ನೂ ಆನೆಯನ್ನೂ
ನಾಯನ್ನೂ ನಾಯಿ ಬೇಯಿಸುವವನನ್ನೂ
ಪಂಡಿತರು ಸಮನಾಗಿ ಕಾಣುವರು)

**—ಗೀತಾ : ೫-೧೮**

3. Confucius said : "When a country is in order, it is a shame to be a poor and common man. When a country is in chaos, it is a shame to be rich and an official."

4. Confucius said : "To know what you know and to know what you don't know is the characteristic of one who knows."

೫. ನ ಹಿ ವೇರೇನ ವೇರಾನಿ ಸಮ್ಮನ್ತೀಧ ಕುದಾಚನಂ |
ಅವೇರೇನ ಚ ಸಮ್ಮನ್ತಿ, ಏಸ ಧಮ್ಮೋ ಸನನ್ತನೋ ||
(ವೈರದಿಂದ ವೈರಗಳು ಇಲ್ಲಿ ಎಂದೂ ಶಾಂತವಾಗುವುದೇ ಇಲ್ಲ ;
ಅವೈರದಿಂದ [=ಮೈತ್ರಿಯಿಂದ] ಶಾಂತವಾಗುತ್ತವೆ.
ಇದು ಸನಾತನವಾದ ಧರ್ಮ.) —ಬುದ್ಧ

೬. ದುಡ್ಡು ಬಟ್ಟೆಯಿಂದ ದೊಡ್ಡವರಾದೋರಿಲ್ಲ;
ದೊಡ್ಡ ಗುಣವಿದ್ದು ದೊಡ್ಡವರಾದೋರೆಲ್ಲ!
ಮೈಯ ಬಣ್ಣದಿಂದ ದೊಡ್ಡವರಾದೋರಿಲ್ಲ ;
ದೊಡ್ಡ ಕೆಲಸ ಮಾಡಿ ದೊಡ್ಡವರಾದೋರೆಲ್ಲ! —**ಹೊಯಿಸಳ.**

೭. ಅಪ್ಪಮಾದೋ ಅಮತಪದಂ ಪಮಾದೋ ಮಚ್ಚುನೋಪದಂ |
ಅಪ್ಪಮತ್ತಾ ನ ಮೀಯನ್ತಿ, ಯೇ ಪಮತ್ತಾ ಯಥಾ ಮತಾ ||
(ಅಪ್ರಮಾದ ಅಮೃತಕ್ಕೆ ದಾರಿ ; ಪ್ರಮಾದ ಮೃತ್ಯುವಿಗೆ ದಾರಿ.
ಅಪ್ರಮತ್ತರು ಮರಣಹೊಂದುವುದಿಲ್ಲ ; ಪ್ರಮತ್ತರು ಸತ್ತವರಂತೆಯೇ ಸರಿ!)
—ಬುದ್ಧ

## ಎರಡನೆಯ ವಾರ (೧೭-೯-೪೩—೨೩-೯-೪೩)

### "ಅಹುದಾದರಹುದೆನ್ನಿ, ಇಲ್ಲವಾದರಿಲ್ಲವೆನ್ನಿ"

ಈ ಕೆಳಗಿನ ವಚನಗಳನ್ನು ಗಮನಿಸಿ. ಈ ಹೇಳಿಕೆ ಹೌದೆ? ಅಲ್ಲವೆ? 'ಅಹುದಾದರಹುದೆನ್ನಿ, ಇಲ್ಲವಾದರಿಲ್ಲವೆನ್ನಿ.' ಯಾವುದಾದರೂ ಒಂದು ವಚನ ಆರಿಸಿದರೆ ಸಾಕು.

1. ಕೊಲೆಯ ಮುನ್ನುಡಿ ಬೇಕು, ಧರ್ಮಸಂಸ್ಥಾಪನೆಗೆ.

2. "Resignation requires character"
—Goethe.

3. "Why do we love God ? Can you say ?"
"O yes ! He never once gets in our way !"
—Goethe

4. "Teaching is half of learning" —Confucius
5. "ಅರಿತರೆ ಶರಣ, ಮರೆತರೆ ಮಾನವ" —ಬಸವಣ್ಣನವರು
6. "ವರ್ಣಮಾತ್ರಂ ಕಲಿಸಿದಾತಂ ಗುರು" —ಸೋಮೇಶ್ವರ ಶತಕ
7. "ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ"
"ಮಗೂ, ಒಳ್ಳೆಯದು ಮಾಡುವವನಿಗೆ ಕೇಡು ಆಗುವುದೇ ಇಲ್ಲ."
—ಗೀತಾ

## ಮುಂದಿನ ಮೂರು ವಾರ (೨೪-೯-೪೩—೧೪-೧೦-೪೩)

### ನವರಾತ್ರಿಯ ನವವ್ಯಯ

ಅಥವಾ

### ಮೂರು ವಾರದ ವ್ಯವಸಾಯ

**ವಾರ ಒಂದು : ೨೪-೯-೪೩—೩೦-೯-೪೩ ; ಸಣ್ಣ ಕತೆಗಳ ಸ್ಪರ್ಧೆ.**

ಈ ಕೆಳಗಿನ ಗಾದೆಗಳಲ್ಲಿ ಯಾವುದಾದರೂ **ಒಂದನ್ನು** ಪುಷ್ಟೀಕರಿಸುವಂತೆ ಸ್ವಂತವಾಗಿ ಒಂದು ಸಣ್ಣಕತೆ ಕಟ್ಟಿ. ಮಿತಿ : ೨೦೦ ಪಂಕ್ತಿ.

(೧) ತಾಯಿ ನೋಡಿ ಮಗಳು ತೆಕೊ; ಹಾಲು ನೋಡಿ ಎಮ್ಮೆ ತೆಕೊ.
(೨) ಹನುಮಂತರಾಯ ಹಗ್ಗ ತಿನ್ನುವಾಗ ಪೂಜಾರಯ್ಯ ಶಾವಿಗೆ ಬೇಡಿದ.
(೩) 'ಅಜ್ಜಾ, ಮದುವೆ' ಎಂದರೆ 'ಯಾರಿಗೆ? ನನಗಾ ? ಎಂದ.
(೪) ಪೋಲಿ ತಾಲಿ ಕಟ್ಟಿದರೆ, ಪೋಲಿ ಪೋಲಿ, ತಾಲಿ ತಾಲಿ.
(೫) ದುಡ್ಡಿನಾಸೆಗೆ ಬೆಲ್ಲ ಮಾರಿ, ಗೋಣಿಚೀಲ ನೆಕ್ಕಿದ.

**ವಾರ ಎರಡು : ೧-೧೦-೪೩—೭-೧೦-೪೩ ; ಭಾವನಾವಿಲಾಸ ಸ್ಪರ್ಧೆ.**

ಗಾಂಧೀಜಿ ನಿಮ್ಮೆಡೆಗೆ ಬಂದು, ಒಂದು ಗಂಟೆ ಕಾಲ ನಿಮ್ಮೊಡನೆ ನಿಂತರೆ, ನೀವು ಅವರೊಡನೆ ಏನು ಮಾತನಾಡುವಿರಿ? ಹೇಗೆ ಮಾತನಾಡುವಿರಿ? ೨೦೦ ಪಂಕ್ತಿಗಳ ಮಿತಿಯಲ್ಲಿ ಚಿತ್ರಿಸಿ.

ಅಥವಾ

ಹೊಟ್ಟೆತುಂಬಿದ ಹುಲಿಯ ಗವಿಗೆ ಹಸಿದ ಕುರಿಮರಿ ಬಂದರೆ, ಎರಡಕ್ಕೂ ಏನು ಮಾತುಕತೆ ಬೆಳೆಯಬಹುದು? ೨೦೦ ಪಂಕ್ತಿಗಳ ಮಿತಿಯಲ್ಲಿ ಚಿತ್ರಿಸಿ.

**ವಾರ ಮೂರು : ೮-೧೦-೪೩—೧೪-೧೦-೪೩ ; ಕಲ್ಪನಾ ವಿಲಾಸ ಸ್ಪರ್ಧೆ.**

ರಾತ್ರೆ, ನಿಶ್ಶಬ್ದವಾದ ವೇಳೆಯಲ್ಲಿ, ಮೌನವಾಗಿ, ಕಣ್ಣುಮುಚ್ಚಿ ಎಚ್ಚರವಾಗಿ, ಒಂದು ಗಂಟೆ ಕಾಲ ಮಲಗಿ, ಮನಸ್ಸನ್ನು ಪ್ರಯಾಣ ಕಳುಹಿಸಿ. ಆ ಪ್ರಯಾಣವನ್ನು ೨೦೦ ಪಂಕ್ತಿಗಳ ಮಿತಿಯಲ್ಲಿ ಚಿತ್ರಿಸಿ.

## ಆರನೆಯ ವಾರ (೧೮-೧೦-೪೩—೨೨-೧೦-೪೩)

### ಆತ್ಮ ಪರೀಕ್ಷೆ

ಈ ಪ್ರಶ್ನೆಗಳಲ್ಲಿ ಯಾವುದಾದರೂ ಒಂದಕ್ಕೆ ನಿಮ್ಮ ಮನಸ್ಸು ಏನು ಹೇಳುತ್ತದೆ?

೧. "ನಾನು ನಡಸುತ್ತಿರುವ ಈ ವಿದ್ಯಾಭ್ಯಾಸದಿಂದ ಯಾರಿಗೆ ಏನು ಪ್ರಯೋಜನ?"

೨. "ನನಗೆ ದೇಶಪ್ರೇಮ ಇದೆಯೆ? ಇದ್ದರೆ, ಅದು ಹೇಗೆ ವ್ಯಕ್ತವಾಗಿದೆ?"

೩. "ನಾನು ಬೇಕೆಂದು ಬಯಸುತ್ತಿರುವ ಭವಿಷ್ಯ ಎಂತಹುದು? ಅದು ಸಿದ್ಧಿಸಲು ನಾನು ಮಾಡುತ್ತಿರುವ ಸಾಧನೆ ಏನು?"

೪. "ನನಗೆ **ಸ್ವತಂತ್ರವಾದ ವಿಚಾರಶಕ್ತಿ** ಇದೆಯೆ? **ಸ್ವತಂತ್ರವಾದ ಕ್ರಿಯಾಶಕ್ತಿ** ಇದೆಯೆ? ಇದ್ದರೆ, ಅದು ಎಂದಾದರೂ ಗೋಚರವಾಗಿದೆಯೆ?"

## ಏಳನೆಯ ವಾರ (೨೫-೧೦-೪೩—೨೯-೧೦-೪೩)

### ವಿಚಾರ ತರಂಗ ವಿವೇಕ

ಯಾವುದಾದರೂ ಪದವನ್ನು ಕೇಳಿದೊಡನೆ ಮನಸ್ಸಿನಲ್ಲಿ ಅನೇಕ ಆಲೋಚನೆಗಳು ಅಲೆಯಲೆಯಾಗಿ ಬರುತ್ತವೆ ತಾನೆ. ಈ ಕೆಳಗಿನ ಐದು ಪದಗಳನ್ನು ಕೇಳಿದ ಕೂಡಲೆ ಉಕ್ಕುವ ಆಲೋಚನೆಗಳು ಏನು? ಅದರಲ್ಲಿ ಯೋಗ್ಯವಾದುದು ಎಷ್ಟು? ಅಯೋಗ್ಯವಾದುದು ಎಷ್ಟು? ಯಾವುದಾದರೂ ಎರಡು ಪದಗಳಿಗೆ ಸಂಬಂಧಿಸಿದ ಆಲೋಚನೆಗಳನ್ನು ವಿವೇಚಿಸಿ.

* "ಅನ್ನ"—"ಸ್ತ್ರೀ"—"ಮಹಾತ್ಮಾ"—"ದೇವರು"—"ಹಿಂಸೆ" *

## ಎಂಟನೆಯ ವಾರ (೧-೧೧-೪೩—೮-೧೧-೪೩)

### ಸಂದೇಹ ಪರಿಹಾರ

ಈ ಕಾಲೇಜಿನಲ್ಲಿ 'ಕರ್ಣಾಟಕ ಸಂಘ' ಸ್ಥಾಪಿಸಬೇಕೆಂದು ಒತ್ತಾಯ ಪಡಿಸಿದವರು ಸುಮಾರು ೧೫೦ ಮಂದಿ.

'ಕರ್ಣಾಟಕ ಸಂಘ'ದಿಂದ ಅಗತ್ಯ ಆಗಬೇಕಾದ **ವಿಚಾರವರ್ಧನೆಯ** ಈ ಪ್ರಯತ್ನದಲ್ಲಿ ಭಾಗವಹಿಸಿದವರು:

| | | | |
|---|---|---|---|
| ಮೊದಲನೆಯ ವಾರ | .... | ೩೬ | ಮಂದಿ |
| ಎರಡನೆಯ ವಾರ | .... | ೧೬ | ಮಂದಿ |
| ನವರಾತ್ರಿಯ ಮೂರು ವಾರ | .... | ೪ | ಮಂದಿ |
| ಆರನೆಯ ವಾರ | .... | ೩ | ಮಂದಿ |
| ಏಳನೆಯ ವಾರ | .... | ೩ | ಮಂದಿ |

**ಇದು ಏಕೆ?**

**ಈ ವಿಚಾರಪ್ರೇರಣೆ ಇನ್ನು ಮುಂದೂ ಬೇಕೆ?**

## ಒಂಬತ್ತನೆಯ ಕಡೆಯ ವಾರ (೮-೧೧-೪೩—೧೫-೧೧-೪೩)

### ಲಘು ಪ್ರಬಂಧ ರಚನೆ

"**ಪರೀಕ್ಷಾ ಜ್ವರ**" ಎಂಬುದು ಏನು?

ಈ ಜ್ವರ ಕಾಣಿಸಿಕೊಳ್ಳುವ ಕಾಲ, ಕಾಣಿಸಿಕೊಳ್ಳಲು ಕಾರಣ, ಇದರ ಲಕ್ಷಣ, ಇದರಿಂದಾಗುವ ಲಾಭಾಲಾಭಗಳು, ಇದರ ಚಿಕಿತ್ಸೆಯ ವಿಧಾನ, ನಿವಾರಣೋಪಾಯಗಳು, ಈ ಜ್ವರದ ಜಾತಿ, ಇದರ ಇತಿಹಾಸ—ಎಂಬ ಇದೇ ಮೊದಲಾದ ತಿಳಿವಳಿಕೆ ಕೊಡುವಂತೆ ೨೦೦ ಪಂಕ್ತಿಗಳ ಮಿತಿಯಲ್ಲಿ ಒಂದು ಪ್ರಬಂಧ ರಚಿಸಿರಿ.

# ವಿದ್ಯಾರ್ಥಿ ವಿಚಾರ ವಿಲಾಸ

## ೧. ವಿದ್ಯಾರ್ಥಿಗಳ ಕರ್ತವ್ಯ

**[ತುಮಕೂರು ಇಂಟರ್‌ಮೀಡಿಯೆಟ್ ಕಾಲೇಜು ಸಂಘದಲ್ಲಿ ೨೪-೭-೪೩ ರಲ್ಲಿ ರಾಜಸೇವಾಸಕ್ತ ಶ್ರೀ ಎ. ಆರ್. ವಾಡಿಯಾ ಅವರು ಮಾಡಿದ ಆರಂಭ ಭಾಷಣದ ಮುಖ್ಯಾಂಶಗಳನ್ನು ಗ್ರಹಿಸಿ ಬರೆದು ತರಬೇಕೆಂದು ತರಗತಿಯಲ್ಲಿ ವಿಧಿಸಿದುದಕ್ಕೆ ಬಂದ ಉತ್ತರಗಳಲ್ಲಿ ಇದು ಒಂದು ಉತ್ತಮವಾದುದು. ಸಂಗ್ರಹಿಸಿದವರು ಸೀನಿಯರ್ ಆರ್ಟ್ಸ್ ವಿದ್ಯಾರ್ಥಿ.]**

ವಿಶ್ವವಿದ್ಯಾನಿಲಯವೆ ಆಗಲಿ, ಯಾವ ವಿದ್ಯಾಸಂಸ್ಥೆಯೆ ಆಗಲಿ ಅದರ ಧ್ಯೇಯ ಜ್ಞಾನಾರ್ಜನೆ. ಜ್ಞಾನವೆಂಬುದು ಅನೇಕ ವಿಭಾಗಗಳಾಗಿದೆ. ಪ್ರತಿಯೊಂದು ವಿಭಾಗವೂ ಒಂದೊಂದು ವಿಸ್ತಾರವಾದ ಕ್ಷೇತ್ರವನ್ನೊಳಗೊಂಡಿದೆ. ಅವೆಲ್ಲವನ್ನೂ ಒಟ್ಟಿಗೆ ತಿಳಿಯುವುದು ಕಷ್ಟ. ಅದಕ್ಕಾಗಿಯೇ ಜನ ಕೆಲವು ವಿಭಾಗಗಳಲ್ಲೇ ಪ್ರವೀಣರಾಗುತ್ತಾರೆ. ಆದರೆ ಇದು ಜ್ಞಾನಾರ್ಜನೆಯ ಸರಿಯಾದ ಮಾರ್ಗವಲ್ಲ. ಯಾವ ಒಂದು ಭಾಗವನ್ನೂ ನಾವು ಬಿಡಬಾರದು. ಎಲ್ಲದರಲ್ಲೂ ಕೊಂಚಕೊಂಚ ಪರಿಶ್ರಮವಿರಬೇಕು.

ಇಂಟರ್‌ಮೀಡಿಯೆಟ್ ಕಾಲೇಜು ಹೈಸ್ಕೂಲಿಗೂ ಕ್ರಮವಾದ ವಿಶ್ವವಿದ್ಯಾನಿಲಯಕ್ಕೂ ಮಧ್ಯವಾಗಿದೆ. ವಿದ್ಯಾರ್ಥಿಗಳಿಗೆ ಉಪಾಧ್ಯಾಯರೇ ಸಕಲವನ್ನೂ ಹೇಳಿಕೊಡುವುದು ಸಹಜವಾಗಿ ಸಾಧ್ಯವಿಲ್ಲ. ಕೆಲವು ಗಂಟೆಗಳ ಕಾಲ ಮಾತ್ರ ವಿದ್ಯಾರ್ಥಿಗಳೂ ಅಧ್ಯಾಪಕರೂ ಕಲೆಯುತ್ತಾರೆ. ಅಷ್ಟು ಕೊಂಚ ಹೊತ್ತಿನಲ್ಲಿ ಇಷ್ಟು ವಿಶಾಲವಾದ ಜ್ಞಾನವನ್ನು ಅವರಲ್ಲಿ ತುಂಬಲು ಅಧ್ಯಾಪಕರುಗಳಿಗೆ ಸಾಧ್ಯವಿಲ್ಲ. ಅವರು ನಿಯಮಿತವಾದ ಪಾಠಕ್ರಮವನ್ನು ಬೋಧಿಸಬಹುದು ಅಥವಾ ಕಷ್ಟವಾದ ಕೆಲವನ್ನು ಮಾತ್ರ ಹೇಳಬಹುದು. ಅದರ ಮೇಲೆ ವಿದ್ಯಾರ್ಥಿಗಳು ತಾವೇ ಓದಿ ತಮ್ಮ ಜ್ಞಾನವನ್ನು ವೃದ್ಧಿಪಡಿಸಿಕೊಳ್ಳಬೇಕು.

ಓದುವುದೆಂದರೆ ಪುಸ್ತಕದ ಹಾಳೆಗಳನ್ನು ತಿರುವಿಹಾಕುವುದಲ್ಲ. ಅದರ ಒಟ್ಟು ಸಾರಾಂಶವನ್ನು ಗ್ರಹಿಸಿ ಅದನ್ನು ಮರೆಯದಂತೆ ಕಾಪಾಡಿಕೊಳ್ಳಬೇಕು.

ನಮಗೆ ತಿಳಿಯದ ಶಬ್ದಗಳು ಬಂದರೆ ಅವನ್ನು ಹಾಗೆಯೇ ಬಿಡದೆ ನಿಘಂಟಿನಲ್ಲಿ ನೋಡಿ ತಿಳಿದುಕೊಳ್ಳಬೇಕು. ಹಾಗೆ ಮಾಡದೆ ಇದ್ದಲ್ಲಿ ನಾವು ಇಡೀ ವಾಕ್ಯವನ್ನೇ ಅರ್ಥಮಾಡಿಕೊಳ್ಳಲಾರೆವು. ಓದಿದ ಮುಖ್ಯ ಅಂಶಗಳನ್ನು ಒಂದು ಸಣ್ಣ ಪುಸ್ತಕದಲ್ಲಿ ಬರೆದಿಟ್ಟುಕೊಳ್ಳಬೇಕು.

ಸಾಧಾರಣವಾಗಿ ವಿದ್ಯಾರ್ಥಿಗಳು ಯಾವ ಉಪಾಧ್ಯಾಯರು ಟಿಪ್ಪಣಿಯನ್ನು ಬರಸುತ್ತಾರೋ ಅಂತಹವರನ್ನು ಹೊಗಳಿ ಬರಸದಿರುವವರನ್ನು ನಿಂದಿಸುತ್ತಾರೆ. ಆದರೆ ಇದು ತಪ್ಪು. ಬರಸದೇ ಇರುವ ಉಪಾಧ್ಯಾಯನೆ ಉತ್ತಮ. ತಿಳಿಯದೆ ಇರುವ ಅನೇಕ ವಿಷಯಗಳನ್ನು ಬರಸಿದರೆ ಆಗುವ ಪ್ರಯೋಜನವಾದರೂ ಏನು ? ವಿದ್ಯಾರ್ಥಿಗಳು ಪರೀಕ್ಷೆಯ ದೃಷ್ಟಿಯಿಂದ ಆ ಟಿಪ್ಪಣಿಗಳನ್ನು ಹೇಗಾದರೂ ಗಟ್ಟಿಮಾಡಿ ಒಪ್ಪಿಸಿ ನಂಬರು ಪಡೆದು ತೇರ್ಗಡೆಯಾಗುತ್ತಾರೆ. ಆದರೆ ಜೀವನರಂಗದಲ್ಲಿ ಕಾಲಿಟ್ಟ ಕೂಡಲೆ ಅದರಿಂದ ಯಾವ ಪ್ರಯೋಜನವೂ ಇಲ್ಲವೆಂಬುದು ವ್ಯಕ್ತವಾಗುತ್ತದೆ. ಯಾವ ವಿದ್ಯಾಭ್ಯಾಸಕ್ಕಾಗಿ ಅವರು ಅಷ್ಟು ಹಣ, ಕಾಲಗಳನ್ನು ವ್ಯಯಮಾಡಿದರೋ ಅದರಿಂದ ಲೇಶಮಾತ್ರವೂ ಉಪಯೋಗವಿಲ್ಲದಿರುವುದನ್ನು ಮನಗಾಣುತ್ತಾರೆ. ವಿಷಯಗ್ರಹಣ ಮಾಡಬೇಕೇ ಹೊರತು ಪರೀಕ್ಷೆಗಾಗಿ ಓದಿ ಮೋಸಹೋಗಬಾರದು ಎಂದು ಆಗ ತಿಳಿಯುತ್ತಾರೆ. ಈ ರೀತಿ ಮಾಡಿದಲ್ಲಿ ನಾವು ಒಂದುವೇಳೆ ಪರೀಕ್ಷೆಯಲ್ಲಿ ಉತ್ತೀರ್ಣರಾಗದಿರಬಹುದು. ಆದರೆ ಆ ಸೋಲು ಪ್ರಯೋಜನವಿಲ್ಲದ ಗೆಲುವಿಗಿಂತಲೂ ಉತ್ತಮ. ತೇರ್ಗಡೆ ಹೊಂದದವರಲ್ಲಿ ಅನೇಕರು ತಿಳಿವಳಿಕೆಯುಳ್ಳವರಿದ್ದಾರೆ. ತೇರ್ಗಡೆ ಹೊಂದಿದವರಲ್ಲಿ ತಿಳಿವಳಿಕೆಯಿಲ್ಲದವರೂ ಇದ್ದಾರೆ.

ಜ್ಞಾನಾರ್ಜನೆಯೊಂದೇ ನಮ್ಮ ಮುಖ್ಯ ಧ್ಯೇಯವಲ್ಲ. ಅದರೊಂದಿಗೆ ಗುಣ, ಶೀಲ, ನಡತೆ ಇವುಗಳನ್ನೂ ನಾವು ತಿದ್ದಿಕೊಳ್ಳಬೇಕು. ಹೆಚ್ಚು ಹೆಚ್ಚು ವಿದ್ಯಾವಂತರಾದಂತೆಲ್ಲಾ ನಮ್ಮ ಗುಣದ ಮಟ್ಟವೂ ಏರಬೇಕು. ಅವಿದ್ಯಾವಂತರೂ ಅನಾಗರಿಕರೂ ಮಾಡಿದ ಕೆಲವು ತಪ್ಪುಗಳು ಕ್ಷಮಾರ್ಹವಾದುವು. ಆದರೆ ವಿದ್ಯಾವಂತನಾದವನು ಅದೇ ಕೆಲಸಮಾಡಿದರೆ ಅದು ಅಕ್ಷಮ್ಯ. ಒಬ್ಬ ಪದವೀಧರ ಒಂದು ಕೊಲೆ ಮಾಡಿದರೆ, ಒಬ್ಬ ಅನಾಗರಿಕ ಮಾಡಿದ ಕೊಲೆಗಿಂತ ಅದು ಬಹು ಹೇಯ. ನಾವು ಆ ಗುಣವನ್ನು ವಿದ್ಯಾವಂತನಾದ ಮನುಷ್ಯನಿಂದ ನಿರೀಕ್ಷಿಸುವುದಿಲ್ಲ. ಅಂತಹ ಹೇಯಕಾರ್ಯಗಳನ್ನು ಮಾಡುವುದಿಲ್ಲವೆಂಬುದಾಗಿ

ಪದವೀದಾನ ಸಮಾರಂಭದಲ್ಲಿ ಆತ ರಾಜಪ್ರತಿಜ್ಞೆಯನ್ನು ಮಾಡಿರುತ್ತಾನೆ. ನಾವು ಯಾವುದನ್ನು ಸತ್ಯವೆಂದು ಪರಿಗಣಿಸುತ್ತೇವೆಯೊ ಅದನ್ನು ದೃಢವಾಗಿ ಎತ್ತಿ ಹಿಡಿದು, ಅದರ ಸಾಧನೆಗಾಗಿ ಸರ್ವತ್ಯಾಗಮಾಡಬೇಕು. ಅದರಿಂದ ಅನೇಕವೇಳೆ ನಾವು ಅಪಹಾಸ್ಯ, ಅವಮಾನಗಳಿಗೆ ಗುರಿಯಾಗಬಹುದು. ಪ್ರಪಂಚದಲ್ಲಿ ಸತ್ಯಸಾಧನೆಗಾಗಿ ಕಂಕಣ ತೊಟ್ಟವರೆಲ್ಲಾ ಈ ನಿಂದೆಗಳಿಗೆ ಗುರಿಯಾಗಿದ್ದಾರೆ. ಆತ್ಮವು ಸತ್ಯವೆಂದು ಬೋಧಿಸಿ, ಅದನ್ನು ಜಗತ್ತಿಗೆ ತೋರಲೆತ್ನಿಸಿದ ಸಾಕ್ರೆಟೀಸನು ಶತ್ರುಗಳಿಂದ ಅನೇಕ ತೊಂದರೆಗಳನ್ನನು ಭವಿಸಿ ಕೊನೆಗೆ ಹತನಾದನು. ಅಂತೆಯೇ ಯೇಸುಕ್ರಿಸ್ತನು ತನ್ನ ಪ್ರಚಾರ ದಲ್ಲಿ ತೊಂದರೆಪಟ್ಟು ಶಿಲುಬೆಗೇರಿದನು. ಆದರೆ ಅವರು ಯಾರೂ ತಮ್ಮ ದೃಢಪ್ರತಿಜ್ಞೆಯನ್ನು ಸಡಿಲಿಸಲಿಲ್ಲ. ಅಂತೆಯೇ ನಾವೂ ಕುಂದದೆ ಉತ್ಸಾಹಿ ಗಳಾಗಿರಬೇಕು. ಪ್ರಕೃತಿಯು ಕೆಲವರನ್ನು ಕೆಲವು ಕಾರ್ಯಗಳಿಗೆ ಅನರ್ಹ ರನ್ನಾಗಿ ಮಾಡಬಹುದು. ಅದರೆ ಅವರು ಅದಕ್ಕಾಗಿ ಶೋಕಿಸಬೇಕಾದುದೇನೂ ಇಲ್ಲ. ಕುರುಡನಾದ ಹೋಮರ್ ಪ್ರಸಿದ್ಧನಾಗಲಿಲ್ಲವೆ? ಮಿಲ್ಟನ್ ಖ್ಯಾತಿ ಸಂಪಾದಿಸಲಿಲ್ಲವೆ?

ನಾವು ಇಷ್ಟೂ ಜ್ಞಾನ, ಶೀಲ, ನಡತೆಗಳನ್ನು ಏತಕ್ಕಾಗಿ ಹೊಂದಬೇಕು? ಅದು ನಮಗಾಗಿ ಮಾತ್ರವೆ? ಹಾಗಲ್ಲ. ನಾವು ನಮ್ಮನ್ನು ಉತ್ತಮಗೊಳಿಸ ಬೇಕಾದ್ದೇನೋ ಅವಶ್ಯಕ. ಹಾಗೆಯೇ ಅದರಿಂದ ನಾಲ್ಕಾರು ಜನರಿಗೆ ಉಪಕಾರವಾಗಬೇಕು. ಮನುಷ್ಯನು ವಿದ್ಯಾವಂತನಾದ ಮಾತ್ರಕ್ಕೆ, ಸುಗುಣಿ ಯಾದ ಮಾತ್ರಕ್ಕೆ ಜನ ಅವನನ್ನು ಅನುಸರಿಸುವರೆಂದಲ್ಲ. ಆ ಅನುಸರಣೆಗಾಗಿ ಅವನು ಕಷ್ಟಪಡಬೇಕಾದೀತು. ತನ್ನ ಜ್ಞಾನವನ್ನು ಇತರರಿಗೆ ಕೊಡುವ ಕಾರ್ಯದಲ್ಲಿ ಅವನು ಅನೇಕ ಟೀಕೆಗಳಿಗೆ ಗುರಿಯಾಗಬೇಕಾದೀತು. ಆದರೆ ಅವನು ಧೈರ್ಯವಾಗಿ ತನ್ನ ಕಾರ್ಯವನ್ನು ನಿರ್ವಹಿಸಬೇಕು. ಅಜ್ಞಾನವು ಕವಿದಿರುವ ಈ ಕಾಲ, ಈ ದೇಶಗಳಲ್ಲಿ ಜ್ಞಾನದ ಬೆಳಕನ್ನು ಬೀರುವ ಕರ್ತವ್ಯ ವಿದ್ಯಾವಂತರದು.

—ಎಲ್. ನಂಜುಂಡರಾವ್.

## ೨. ಪಂಡಿತಾಃ ಸಮದರ್ಶಿನಃ*

" ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ .
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ "

(ಜ್ಞಾನಿಗಳು ವಿದ್ಯಾವಿನಯಯುಕ್ತನಾದ ಬ್ರಾಹ್ಮಣನಲ್ಲಿಯೂ, ಹಸುವಿನಲ್ಲಿಯೂ, ಆನೆಯಲ್ಲಿಯೂ, ನಾಯಿಯಲ್ಲಿಯೂ, ನಾಯಿಯನ್ನು ತಿನ್ನುವ ಚಂಡಾಲನಲ್ಲಿಯೂ ಒಂದೇ ದೃಷ್ಟಿಯನ್ನಿಟ್ಟಿರುವರು.)

"ಯಾವಾಗ ಸಂದೇಹಗಳು ನನ್ನನ್ನು ಕಾಡುವುವೋ, ಯಾವಾಗ ನನಗೆ ಅತಿಯಾಗಿ ನಿರಾಶೆಯುಂಟಾಗುವುದೋ, ಯಾವಾಗ ಕಣ್ಮುಂದಿನ ದಿಗಂತ ದಲ್ಲಿ ನನಗೇ ಬೆಳಕಿನ ಕಿರಣ ಏನೂ ತೋರದೋ, ಆಗೆಲ್ಲಾ ನಾನು ಭಗವದ್ಗೀತೆಯ ಬಳಿಗೆ ಧಾವಿಸುತ್ತೇನೆ. ಅಲ್ಲಿ ನನಗೆ ಸಮಾಧಾನ ಕೊಡುವ ಶ್ಲೋಕವೊಂದನ್ನು ಕಾಣುತ್ತೇನೆ. ಒತ್ತೊತ್ತಿ ಬರುವ ದುಃಖದ ಮಧ್ಯೆ ನಗೆ ಬೀರಲು ಮೊದಲಿಡುತ್ತೇನೆ. ನನ್ನ ಬಾಹ್ಯ ಜೀವಿತವೆಲ್ಲಾ ವಿಷಾದಘಟನೆ ಗಳಿಂದ ಕೂಡಿದೆ. ಆದರೆ ಇವುಗಳ ಸಗೋಚರ ಹಾಗೂ ಅನಿವಾರಕ ಛಾಯೆ ನನ್ನ ಮೇಲೆ ಬಿದ್ದಿಲ್ಲವೆಂದರೆ ಅದಕ್ಕೆ ಕಾರಣ ಭಗವದ್ಗೀತೆ" ಎಂದು ಗಾಂಧೀಜಿ ಗೀತೆಯ ಬಗ್ಗೆ ನುಡಿದಿದ್ದಾರೆ. ಮೇಲಿನಂಥ ನೂರಾರು ಶ್ಲೋಕಗಳು ಗಾಂಧೀಜಿ ಯನ್ನು ಇಂದಿನ ಸರ್ವಸಮದರ್ಶಕರ ಶ್ರೇಣಿಯಲ್ಲಿ ಮೊದಲನೆಯವರನ್ನಾಗಿ ಕೂಡಿಸಿವೆ. ಇಂತಹ ಅಮರ ವಾಕ್ಯನ್ನು ಪೂರ್ಣ ಅರ್ಥಮಾಡಿಕೊಂಡು, ಅದರಂತೆ ನಡೆಯುವುದೆಂದರೆ ಗಾಂಧೀಜಿಯಂತಹ ಪೂಜ್ಯ ವ್ಯಕ್ತಿಗಳಿಗೇ ಸರಿ.

ಗೀತೆಯ ಈ ಸರ್ವಸಮದರ್ಶನ ಅರ್ಜುನನಿಗೆ ಮಾತ್ರ, ಇಲ್ಲವೇ ಕುರು ಕ್ಷೇತ್ರವೊಂದಕ್ಕೆ, ಅಥವಾ ಮುಕ್ತಿಬೇಡುವ ಭಕ್ತರಿಗೆ ಮಾತ್ರವೇ ಎಂದೆಣಿಸ ಬಾರದು. ಈ ನೀತಿಯನ್ನು ಎಲ್ಲ ದೇಶ, ಕಾಲಗಳಲ್ಲೂ ಉಪಯೋಗಿಸ ಬಹುದಾಗಿದೆ. 'ಸಮಾಜದ ಜೀವನಕ್ಕೆ ಅವಶ್ಯಕವಾದ ಕೆಲಸಗಳಲ್ಲಿ ಮೇಲು

---

* ಈ ಲೇಖನ ಬರೆಯಲು ನೆರವು:

೧. ನಿಷ್ಕಾಮಕರ್ಮಯೋಗ — ಶ್ರೀ ಚಿದಂಬರ
೨. ಶ್ರೀಕೃಷ್ಣನು ತೋರಿಸಿದ ದಾರಿ — ರಾಜಾಜಿ
೩. Sacred Books of the East. Vol. 8.—ಕೆ. ಟಿ. ಟೆಲಾಂಗ್

ಕೀಳೆಂಬ ಭಾವನೆಯಿಲ್ಲ. ಪೂರ್ವಕಾಲದಲ್ಲಿದ್ದ ಜಾತಿಗಳ ರಚನೆಗೂ, ರಷ್ಯಾ ದೇಶದಲ್ಲಿ ಈಗ ನಡೆಯುತ್ತಿರುವ ಸಾಮ್ಯವಾದದ ರಚನೆಗೂ ಹೊಂದಿಕೆ ಇದೆ.' ಆದ್ದರಿಂದ ' ತನಗೆಂದು ಲಾಭವನ್ನೋ ಸುಖವನ್ನೋ ಹುಡುಕದೆ ಸಮುದಾಯ ಜೀವನಕ್ಕಾಗಿ ಕರ್ತವ್ಯ ಮಾಡುತ್ತೇನೆ ಎನ್ನುವ ಮನೋಭಾವವೆ ಸಕಲ ಕಲ್ಮಷಗಳನ್ನೂ ದೂರಮಾಡಲು ಶಕ್ತವಾದ ಗಂಗಾ ತೀರ್ಥ.'* ಇದಕ್ಕೋಸ್ಕ ರವೇ ಶ್ರೀಕೃಷ್ಣ ಪರಮಾತ್ಮನು ನುಡಿಯುತ್ತಾನೆ :

ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ
ಶೀತೋಷ್ಣ ಸುಖದುಃಖೇಷು ತಥಾ ಮಾನಾಪಮಾನಯೋಃ | ೬–೭
ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ | ೬–೮
ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥದ್ವೇಷ್ಯಬಂಧುಷು
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ | ೬–೯

—" ಶಾಸ್ತ್ರಜ್ಞಾನದಿಂದಲೂ ಅನುಭವಜ್ಞಾನದಿಂದಲೂ ತೃಪ್ತಿಹೊಂದಿದ ಅಂತಃ ಕರಣವುಳ್ಳವನಾಗಿ, ವಿಷಯಾದಿ ವಿಕಾರದಿಂದ ಚಲಿಸದೆ, ಇಂದ್ರಿಯಗಳನ್ನು ಗೆದ್ದಿರುವ ಮತ್ತು ಮಣ್ಣು ಕಲ್ಲು ಚಿನ್ನಗಳಲ್ಲಿ ಸಮದೃಷ್ಟಿಯುಳ್ಳ ಮನುಷ್ಯನೇ ಯೋಗಿ ಎನ್ನಿಸಿಕೊಳ್ಳುವನು. ಅಂತಹ ಸಮಸ್ಥಿತಿಯುಳ್ಳವನು ಪ್ರತ್ಯುಪ ಕಾರವನ್ನು ಇದಿರುನೋಡದೆ ಉಪಕಾರಮಾಡುವವರಲ್ಲಿಯೂ, ಉಪಕಾರಾಪೇಕ್ಷೆ ಯಿಂದ ಗೆಳೆತನಮಾಡುವವರಲ್ಲಿಯೂ, ಶತ್ರುವಿನಲ್ಲಿಯೂ, ಅಸಡ್ಡೆಮಾಡುವವ ನಲ್ಲಿಯೂ, ಸಾಧುಗಳಲ್ಲಿಯೂ, ಪಾಪಿಗಳಲ್ಲಿಯೂ ಸಮಬುದ್ಧಿಯುಳ್ಳವನಾಗು ತ್ತಾನೆ." ಎಂದರೆ ಎಲ್ಲರಲ್ಲಿಯೂ ಒಂದೇ ತೆರನಾಗಿ ಇರುವ ಆತ್ಮನನ್ನು ಗುರುತಿಸುವುದರಿಂದ ಅವರಲ್ಲಿರತಕ್ಕ ಹೊರಗಿನ ಗುಣದೋಷಗಳಿಗೆ ಗಮನ ಕೊಡುವುದಿಲ್ಲ.

ಇಷ್ಟೇ ಅಲ್ಲ,

ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ
ಶೀತೋಷ್ಣ ಸುಖದುಃಖೇಷು ಸಮಃ ಸಂಗವಿವರ್ಜಿತಃ | ೧೨–೧೮

---

*ಶ್ರೀಕೃಷ್ಣನು ತೋರಿಸಿದ ದಾರಿ—ಚಕ್ರವರ್ತಿ ರಾಜಗೋಪಾಲಾಚಾರ್ಯರು.

ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನಕೇನಚಿತ್
ಅನಿಕೇತಃ ಸ್ಥಿರಮತಿಃ ಭಕ್ತಿಮಾನ್ ಮೇ ಪ್ರಿಯೋ ನರಃ | ೧೨-೧೯

—"ಹಗೆಯಲ್ಲಿಯೂ ಗೆಳೆಯನಲ್ಲಿಯೂ, ಇತರರು ಸನ್ಮಾನಿಸುವುದರಲ್ಲಿಯೂ ಅಪಮಾನಮಾಡುವುದರಲ್ಲಿಯೂ, ಚಳಿಯಲ್ಲಿಯೂ ಸೆಕೆಯಲ್ಲಿಯೂ, ಸುಖದಲ್ಲಿಯೂ ದುಃಖದಲ್ಲಿಯೂ ಸಮನಾಗಿದ್ದು ಸಂಗರಹಿತನಾಗಿ, ಹೊಗಳಿಕೆ ತೆಗೆಳಿಕೆಗಳನ್ನು ಸಮನಾಗಿ ಭಾವಿಸಿ, . . . ಸ್ಥಿರಬುದ್ಧಿಯಿಂದಿರುವ ಭಕ್ತನು ನನಗೆ ಪ್ರಿಯನಾದವನು." ಎಂದ ಮೇಲೆ ಈ ಸರ್ವಸಮನ್ವಯಭಾವ ದೈವದತ್ತವಾದದ್ದು, ದೈವಯೋಗವಾದದ್ದು ಮತ್ತು ದೈವಪ್ರಿಯವಾದದ್ದು.

ಇಂತಹ ದೇವಪ್ರಿಯನು,

ಸರ್ವಭೂತಸ್ಥಮಾತ್ಮಾನಂ ಸರ್ವ ಭೂತಾನಿ ಚಾತ್ಮನಿ
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ | ೬-೨೯
ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ | ೬-೩೦
ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ | ೬-೩೧

—"ತನ್ನನ್ನು ಸಕಲ ವಸ್ತುಗಳಲ್ಲಿಯೂ, ಎಲ್ಲವನ್ನೂ ತನ್ನಲ್ಲಿಯೂ ಯಾವಾತನು ನೋಡುತ್ತಾನೋ, ನನ್ನನ್ನು ಎಲ್ಲಕಡೆಯಲ್ಲಿಯೂ, ಎಲ್ಲವನ್ನೂ ನನ್ನಲ್ಲಿಯೂ ನೋಡುತ್ತಾನೆಯೋ ಆತನಿಗೆ ನಾನು ನಾಶವಾಗಲಾರೆ, ಅವನೂ ನನಗೆ ನಾಶವಾಗಲಾರ. ಎಲ್ಲ ಪ್ರಾಣಿಗಳಲ್ಲಿಯೂ ಏಕರೂಪನಾಗಿ, ಅಭೇದ ಸ್ವರೂಪನಾಗಿ ಇರುವ ನನ್ನನ್ನು ಯಾವನು ಭಜಿಸುತ್ತಾನೆಯೋ ಆತನು ಯಾವ ಮಾರ್ಗದಲ್ಲಿದ್ದರೂ ಯೋಗಿಯೇ ಸರಿ. ಆತನು ನನ್ನಲ್ಲಿಯೇ, ಎಂದರೆ ನಿತ್ಯ ಮುಕ್ತನು."

ಅರ್ಜುನನಿಗೆ ಸರ್ವಸಮದರ್ಶನ ಇಂತಿರಬೇಕೆಂದು ಹೇಳಿದ್ದು ಮಾತ್ರವೇ ಅಲ್ಲ, ತಾನೇ ಸರ್ವಜೀವಿಗಳ ಬಗ್ಗೆ ಹೇಗೆ ನಡೆದುಕೊಳ್ಳುವೆನೆಂದು ತಿಳಿಸಿದ್ದಾನೆ ಶ್ರೀಕೃಷ್ಣ :

ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ | ೯-೨೯

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ | ೯–೩೦

—"ನಾನು ಎಲ್ಲರಲ್ಲಿಯೂ ಸಮನು. ನನಗೆ ದ್ವೇಷಿಗಳೂ ಇಲ್ಲ, ಪ್ರಿಯರೂ ಇಲ್ಲ. ಆದರೆ ಯಾರು ಪ್ರೇಮದಿಂದ (ಸರ್ವಜೀವಿಗಳಲ್ಲೂ ವ್ಯಕ್ತನಾದ ಸರ್ವ ಸಮದರ್ಶಕನಾದ) ನನ್ನನ್ನು ಭಜಿಸುವರೋ ಅವರು ನನ್ನಲ್ಲಿರುವರು, ನಾನು ಅವರಲ್ಲಿರುವೆನು. ಎಂತಹ ದುರ್ನಡತೆಯವನೇ ಆಗಿದ್ದರೂ ಬೇರೇನನ್ನೂ ಚಿಂತಿಸದೆ (ಸರ್ವಸಮದರ್ಶಿಯಾದ) ನನ್ನನ್ನೇ ಭಜಿಸಿದರೆ ಅವನು ಸಾಧುವೇ ಆಗಿಬಿಡುವನು." ಹೀಗೆಂದು ಹೇಳಿ ಶ್ರೀಕೃಷ್ಣನು ತಾನೇ ಸರ್ವಸಮದರ್ಶನಕ್ಕೆ ಮೊತ್ತಮೊದಲ ಸಾಕ್ಷಿಯಾಗಿದ್ದಾನೆ.

ತಾನು ಎಲ್ಲರಲ್ಲಿಯೂ ಇರುವೆನೆಂದೂ, ತನಗೆ ಯಾವ ಭೇದಬುದ್ಧಿಯೂ ಇಲ್ಲವೆಂದೂ, ಎಲ್ಲ ಚರಾಚರ ವಸ್ತುಗಳಲ್ಲಡಗಿರುವವ ತಾನೇ ಎಂದೂ ಹೇಳಿದ ಪರಮಾತ್ಮ ಅದನ್ನು ಉದಾಹರಿಸುತ್ತಾನೆ. ಇದನ್ನು ಗೀತೆಯ ಹತ್ತನೆಯ ಅಧ್ಯಾಯದಲ್ಲಿ ೨೦ರಿಂದ ೪೨ರ ವರೆಗಿನ ಶ್ಲೋಕಗಳಲ್ಲಿ ಕಾಣಬಹುದು. ಈ ಶ್ಲೋಕಗಳ ಕೊನೆಯಲ್ಲಿ ಶ್ರೀಕೃಷ್ಣ ಹೀಗೆ ಬೋಧಿಸುತ್ತಾನೆ :

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ
ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶಸಂಭವಮ್ || ೧೦–೪೧
ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ || ೧೦–೪೨

—"ಎಂದರೆ ಪ್ರತಿಯೊಂದು ಪದಾರ್ಥದ, ಪ್ರಾಣಿಯ, ಭಾವದ, ಅಂತ ಶ್ಶಕ್ತಿಯ ಹೆಚ್ಚಿಗೆಯೆಲ್ಲಾ ನಾನೇ, ನನ್ನದೇ. ಜಗತ್ತಿನ ಮೂಲ ಕಾರಣನೇ ನಾನು. ನಿಲ್ಲುವ ನಡೆಯುವ, ಜಡ ಚೇತನಗಳಾವುವೂ ನನ್ನನ್ನು ಬಿಟ್ಟಿಲ್ಲ. ನನ್ನ ವಿಭೂತಿಗಳಿಗೆ ಕೊನೆಮೊದಲಿಲ್ಲ. ಒಟ್ಟಿನಲ್ಲಿ ಸಂಗ್ರಹಿಸಿ ಹೇಳುವುದಾದರೆ—ಯಾವಯಾವುದು ತೇಜೋಮಯವಾಗಿ, ಉತ್ಸಾಹಪೂರಿತವಾಗಿ, ಮಂಗಳಕರವಾಗಿ ಇರುವುದೋ ಅದೆಲ್ಲವೂ ನನ್ನ ಅಗಾಧವಾದ ಬೆಳಕಿನ ಕಿಡಿಯೊಂದರಿಂದಲೇ ಹುಟ್ಟಿತೆಂದರೆ ಸಾಕು. ಇದುವರೆಗೂ ತಿಳಿಸಿದ ಸಮಸ್ತ ಜಗತ್ಸ್ವರೂಪವನ್ನೆಲ್ಲ ನನ್ನ ಅಪಾರ ಮಹಿಮೆಯ ಒಂದೇ ಅಂಶದಿಂದ ನಿಲ್ಲಿಸಿದ್ದೇನೆ."

ಇನ್ನು ಇಂತಹ ಜ್ಞಾನ ಎಂತಹದು, ಅದರ ಪರಿಣಾಮ ಯಾವ ಬಗೆಯದು ಎಂಬುದರ ಬಗ್ಗೆ ಈ ಶ್ಲೋಕಗಳಲ್ಲಿ ಹೆಚ್ಚು ಬೆಳಕು ಕಾಣಬಹುದು :

ಯದಾ ಭೂತಪೃಥಗ್ಭಾವಂ ಏಕಸ್ಥಮನುಪಶ್ಯತಿ |
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ || ೧೩–೩೧
ಸರ್ವಭೂತೇಷು ಏನ್ಯೈಕಂ ಭಾವಮವ್ಯಯಮೀಕ್ಷತೇ |
ಅವಿಭಕ್ತಂ ವಿಭಕ್ತೇಷು ತತ್ ಜ್ಞಾನಂ ವಿದ್ಧಿ ಸಾತ್ತ್ವಿಕಂ || ೧೮–೨೦

" ಯಾವಾತನು, ಬೇರೆ ಬೇರೆಯಾಗಿ ಕಾಣುವ ಪಾಂಚಭೌತಿಕ ವಿಕಾರ ಯುಕ್ತವಾದ ಜಗತ್ತು ಏಕರೂಪನಾದ ಆತ್ಮನಲ್ಲಿ ನಿಂತಿರುವುದೆಂದೂ, ಆ ಆತ್ಮ ವಸ್ತುವೇ ಜಗದಾಕಾರವಾಗಿ ಹರಡಿಕೊಂಡಿರುವುದೆಂದೂ ತಿಳಿಯುವನೋ ಆತ ಆಗ ಬ್ರಹ್ಮಾತ್ಮಾನುಭವ ರೂಪವಾದ ಮೋಕ್ಷವನ್ನು ಹೊಂದುತ್ತಾನೆ.

ಈ ಜಗತ್ತಿನಲ್ಲಿ ಮನುಷ್ಯ ಪಶುಪಕ್ಷಿ ಮುಂತಾದ ವಿವಿಧರೂಪಗಳಲ್ಲಿ ಕಾಣುವ ಸಮಸ್ತ ಭೂತಗಳಲ್ಲಿಯೂ ತುಂಬಿರುವ ಸರ್ವವ್ಯಾಪಿಯಾದ ಪರಮಾತ್ಮನನ್ನು ಎಂತಹ ತಿಳಿವಳಿಕೆಯಿಂದ ಗೊತ್ತುಮಾಡುವೆವೋ ಅದು ಸಾತ್ತ್ವಿಕ ಜ್ಞಾನ."

ಈ ಸಾತ್ತ್ವಿಕ ಜ್ಞಾನ ಪಡೆದುಕೊಳ್ಳುವುದು ಕಷ್ಟ. ಅದರಂತೆಯೇ ಇದನ್ನು ಪಡೆಯದೆ ಇರುವುದಂತೂ ಹುಚ್ಚುತನ. ತಾಮಸಜ್ಞಾನವನ್ನು ಬೇಕಾದರೆ ಬಹು ಬೇಗ ಬೇಕಾದಷ್ಟು ಬೆಳೆಸಿಕೊಂಡುಬಿಡಬಹುದು. ಈ ದೇಹ, ಇದರ ಆಕಾರ, ಇದರ ಸ್ವರೂಪಗಳನ್ನು ಮಾತ್ರ ಪರಿಗಣಿಸಿ, ಇವುಗಳ ಕೋಟಿಪಾಲಿನಷ್ಟು ಪ್ರಮುಖವಾದ, ಎಲ್ಲರಲ್ಲಿಯೂ ಒಂದೇ ತೆರನಾಗಿ ಇರುವ, ದೈವಸ್ವರೂಪವಾದ ಆತ್ಮಸಮನ್ವಯವನ್ನು ದುರ್ಲಕ್ಷಿಸಿದರೆ ಇದಕ್ಕಿಂತ ಹೆಚ್ಚಿನ ಅಜ್ಞಾನ ಇನ್ನಿಲ್ಲ. ಇದನ್ನೇ ತಾಮಸಜ್ಞಾನ ಎನ್ನುವರು. ಇಂತಹ ಜ್ಞಾನ ನಮ್ಮಲ್ಲಿರಬಾರದೆಂದು ಶ್ರೀಕೃಷ್ಣಪರಮಾತ್ಮ ಒತ್ತೊತ್ತಿ ಹೇಳಿದ್ದಾನೆ. ನೂರಾರು ಶ್ಲೋಕಗಳಲ್ಲಿ ಇದನ್ನೇ ಅರುಹಿ ಬೋಧಿಸಿದ್ದಾನೆ. ಕೀಲುಬೊಂಬೆಗಳಲ್ಲಿ ರಾಜನಂತಿದ್ದ ಬೊಂಬೆ ನಾಯಿಯಂತಿದ್ದ ಬೊಂಬೆಯನ್ನೂ ಬೆಕ್ಕಿನಂತಿದ್ದ ಬೊಂಬೆಯನ್ನೂ ಇಲ್ಲವೇ ಭಿಕ್ಷುಕನಂತಿದ್ದ ಬೊಂಬೆಯನ್ನೂ ನೋಡಿ ನಕ್ಕಿತಂತೆ! ಆದರೆ ತನ್ನೊಳಗಿನ ಕೀಲಿಲ್ಲದಿದ್ದರೆ ತಾನು ರಾಜನಂತಿದ್ದರೇನು, ಭಿಕ್ಷುಕನಂತಿದ್ದರೇನು ? ಅದನ್ನು ಪರಿಗಣಿಸುವವರಾರು ? ಇದೇ ರೀತಿ ಎಲ್ಲ

ಚರಾಚರವಸ್ತುಗಳಲ್ಲಿಯೂ ಹುದುಗಿ, ತಾನಲ್ಲಿ ನಿಂತು ಸಮಸ್ತ ಕೆಲಸಗಳನ್ನೂ ನೆರವೇರಿಸುತ್ತಿರುವ ದೇವನ ಸ್ವರೂಪವನ್ನು ಎಲ್ಲರೂ ಕಾಣಬೇಕು. ಅದನ್ನು ಅರಿತರೆ, ಅದನ್ನು ಅರಿತಾಗಲೇ, ನಿಜವಾದ ಜ್ಞಾನ, ನಿಜವಾದ ವಿದ್ಯೆ.

ಈ ನಿಜವಾದ ಜ್ಞಾನವನ್ನು ಅರಿತವನೇ, ಕಂಡುಕೊಂಡವನೇ ಪಂಡಿತ, ಯೋಗಿ, ಸಾತ್ತ್ವಿಕ, ದೇವಪ್ರಿಯ, ಬ್ರಹ್ಮಜ್ಞಾನವನ್ನು ಕಂಡುಕೊಂಡವನು. ಈ ಜ್ಞಾನ ನಮಗೆ ಹೊಸತಲ್ಲ; ಹಿಂದೂಜನ ಮೊದಲಿನಿಂದಲೂ ಈ ಜ್ಞಾನ ಕಂಡುಕೊಂಡಿದ್ದರು. ಗೋಪೂಜೆ, ಅಶ್ವಪೂಜೆ, ಗಜಪೂಜೆ, ಕೊನೆಗೆ ವಿಗ್ರಹ ಪೂಜೆ ಇವೆಲ್ಲವನ್ನೂ ಹಿಂದೂಜನ ಅನುಸರಿಸುತ್ತಿರುವುದರಲ್ಲಿ ಇದೇ ಭಾವ, ಇದೇ ಅಂತರ್ಯ ಅಡಗಿದೆ. ಸಚೇತನ, ಅಚೇತನ ವಸ್ತುಗಳಲ್ಲಿ ಪರಬ್ರಹ್ಮನಿರುವನೆಂದು ಕಂಡುಕೊಂಡು, ಈ ರೀತಿಯಾದ ಬ್ರಹ್ಮಸಾಕ್ಷಾತ್ಕಾರವನ್ನು ಮಾಡದೆ, ಮೂಢನಂಬಿಕೆಯಿಂದಲಾದರೂ ಮಾಡುತ್ತಿರುವ ಜನರನ್ನು ಕಂಡು ನಾವು ಹೀಯಾಳಿಸುವುದಕ್ಕಿಂತ ಅವರ ಆ ಭಕ್ತಿಯನ್ನು ಮೆಚ್ಚಬೇಕು. ಈ ಜ್ಞಾನ ನಮ್ಮಲ್ಲಿ ಪ್ರಾಚೀನವಾಗಿ ಬೆಳೆದುಬಂದಿದ್ದರೂ ಇದನ್ನು ಅರಿಯಲು ಸರ್ವಸಮನ್ವಯ ದೃಷ್ಟಿ ಬೇಕು, ಗೀತೆಯ ಕೈಗನ್ನಡಿ ಬೇಕು, ಮೇಲೆ ಹೇಳಿದಂತಹ ಶ್ಲೋಕಗಳ ಸೂರ್ಯರಶ್ಮಿ ಬೀಳಬೇಕು, ಅಷ್ಟೆ.

ಈಶ್ವರಸ್ಸರ್ವಭೂತಾನಾಂ ಹೃದ್ದೇಶೇऽರ್ಜುನ ತಿಷ್ಠತಿ |
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ||

ಗೀತೆ : ೧೮–೬೧.

—ಹಾ. ರಂ. ನಾಗೇಶರಾವ್.

## ೩. 'ಯೋ ಮಾಂ ಪಶ್ಯತಿ ಸರ್ವತ್ರ....'

ಸೃಷ್ಟಿಯಲ್ಲಿ ಲೆಕ್ಕವಿಲ್ಲದಷ್ಟು ವಸ್ತುಗಳೂ ಜೀವಿಗಳೂ ಉಂಟು. ಅವೆಲ್ಲ ನಮ್ಮ ಇಂದ್ರಿಯಗಳಿಗೆ ಗೋಚರಿಸತಕ್ಕವು. ಇಂದ್ರಿಯಗಳಿಗೆ ಗೋಚರಿಸುವ ನಮ್ಮ ಸುತ್ತುಮುತ್ತಲಿನ ಚರಾಚರ ವಸ್ತುಗಳೆಲ್ಲ ಕ್ಷಣಕ್ಷಣಕ್ಕೂ ರೂಪಾಂತರ ಹೊಂದುತ್ತವೆ. ನೆಲದಲ್ಲಿ ಬಿದ್ದ ಬೀಜ ಮೊಳೆತು, ಸಸಿಯಾಗಿ, ಗಿಡವಾಗಿ, ಹೂ ಹಣ್ಣು ಬಿಟ್ಟು, ಗಾಳಿ ಮಳೆ ಬಿಸಿಲುಗಳ ಹೊಡೆತಕ್ಕೆ ಸಿಕ್ಕಿ ನಾಶವಾಗುವುದು. ಗರ್ಭದಲ್ಲಿ ಅಣುವೊಂದು ಅಲ್ಲೆ ಬಳೆಬಳೆದು ರೂಪುಗೊಂಡು, ಹೊರ

ಬಿದ್ದು ಮಗುವಾಗಿ ದಿನದಿನಕ್ಕೂ ಬಳೆಬಳೆದು ಹರೆಯ ನಡುವಯಸ್ಸುಗಳನ್ನು ಕಂಡು, ಮುಪ್ಪಡಸಿ, ಕಡೆಗೆ ಚಲನವೆ ನಿಂತು, ದೇಹ ಮಣ್ಣು ಪಾಲಾಗುವುದು. ನಮಗೆ ಕಾಣಿಸುವ ಬಂಡೆಯೊಂದು ಮಳೆ ಗಾಳಿ ಬಿಸಿಲುಗಳಿಗೆ ಸಿಕ್ಕು, ಕ್ಷಣ ಕ್ಷಣಕ್ಕೂ ಕರಕರಗಿ ಅಣುವಾಗಿ ಕಣವಾಗಿ ಕಾಲಾನಂತರ ಕಣ್ಣಿಗೆ ಕಾಣದಾಗುವುದು. ಹೀಗೆ ನಮ್ಮ ಸುತ್ತುಮುತ್ತಲಿನ ಚರಾಚರ ವಸ್ತುಗಳೆಲ್ಲ ಹುಟ್ಟು, ಉಳಿವು, ಅಳಿವುಗಳ ಸುಳಿವಿಗೆ ಸಿಕ್ಕಿ ಸೊರಗುವುವು. ಆದರೆ ಈ ಹುಟ್ಟು, ಉಳಿವು, ಅಳಿವುಗಳೆಂಬ ನಿತ್ಯ ರೂಪಾಂತರಗಳ ಅಂತರಾಳದಲ್ಲಿ ಹುಟ್ಟಿಲ್ಲದ, ಅಳಿವಿಲ್ಲದ, ರೂಪಾಂತರವೊಂದನ್ನೂ ಕಾಣದ, ನಿತ್ಯವಾದ, ಸತ್ಯವಾದ ಹಾಗೂ ಅನಂತವಾದ ಸಜೀವಶಕ್ತಿಯೊಂದು ಇದೆ. ಈ ಶಕ್ತಿಯೇ ಸೃಷ್ಟಿಯನ್ನೆಲ್ಲ ಒಂದಾಗಿ ಹಿಡಿದು ನಿಲ್ಲಿಸಿದೆ. ಸೃಷ್ಟಿಸುವ ಶಕ್ತಿಯೂ ಅದೇ, ಸೃಷ್ಟಿಯೂ ಅದೇ. ಇಂದ್ರಿಯಗಳಿಗೆ ಗೋಚರಿಸುವುದೆಲ್ಲ ಅನಿತ್ಯವಾದ ಕಾರಣ ಆ ಶಕ್ತಿಯೊಂದೇ ನಿತ್ಯವಾದುದು, ಸತ್ಯವಾದುದು. ಈ ಸರ್ವಶಕ್ತಿಯನ್ನೇ ಸತ್ಯ, ಜ್ಯೋತಿ, ದೇವರು, ಸರ್ವವ್ಯಾಪಿ, ಸರ್ವಶಕ್ತ, ಬ್ರಹ್ಮ, ಪರಮಾತ್ಮ ಎಂದು ಕರೆವರು.

ಸೃಷ್ಟಿಕರ್ತನು ಪರಮಾತ್ಮ, ಸೃಷ್ಟಿ ಪರಮಾತ್ಮ. ಸೃಷ್ಟಿಯಿಂದ ಪರಮಾತ್ಮ ಬೇರೆ ಅಲ್ಲ, ಪರಮಾತ್ಮನಿಂದ ಸೃಷ್ಟಿ ಬೇರೆ ಅಲ್ಲ. ಸೃಷ್ಟಿಯಲ್ಲಿ ಬೇರೆ ಬೇರೆ ರೂಪಗಳು ಬೇರೆ ಬೇರೆ ಬದಲಾವಣೆಗಳು ಕಂಡುಬಂದರೂ, ಬದಲಾವಣೆಯೇ ಇಲ್ಲದ ಸತ್ಯವಾದ, ನಿತ್ಯವಾದ, ಏಕಮೇವಾದ್ವಿತೀಯನಾದ ಪರಮಾತ್ಮ ಎಲ್ಲದರಲ್ಲಿಯೂ ಇದ್ದಾನೆ; ಎಲ್ಲವೂ ಅವನೇ. ರೂಪ ಭೇದವಾದ ಮಾತ್ರಕ್ಕೇ ವಸ್ತು ಭೇದವಿರಲಾರದು. ಗುಳ್ಳೆಯಾಗಿ ಮೇಲೆದ್ದ ಮಾತ್ರಕ್ಕೆ ಅದು ನೀರಿನಿಂದ ಬೇರೆಯಾಗಲಾರದು. ಮಡಕೆ ಕುಡಿಕೆಗಳು ಬೇರೆ ಬೇರೆ ಆಕಾರ ಹೊಂದಿದ್ದರೂ ಎಲ್ಲವೂ ಮಣ್ಣೆ. ಗೋವು ಬೇರೆ ಬೇರೆ ಬಣ್ಣ, ಬೇರೆ ಬೇರೆ ಆಕಾರ, ಬೇರೆ ಬೇರೆ ವಯಸ್ಸಿನವಾದರೂ ಅವು ಕೊಡುವ ಹಾಲು ಒಂದೇ. ಅಂತೆಯೇ, ಸೃಷ್ಟಿಯಲ್ಲಿ ಬಹು ರೂಪಗಳಿದ್ದರೂ ಎಲ್ಲವೂ ಪರಮಾತ್ಮನೇ, ಎಲ್ಲದರಲ್ಲಿಯೂ ಅವನೆ. ಅವನು ಸರ್ವವ್ಯಾಪಿ, ಏಕಮೇವಾದ್ವಿತೀಯ. ಇರುವವನು ಅವನೊಬ್ಬನೆ. ವಿವಿಧತೆಯ ಅರಿವು ಇಂದ್ರಿಯಗಳಿಗೆ ಮಾತ್ರ. ಇಂದ್ರಿಯಗಳನ್ನು ದಾಟಿದವನಿಗೆ ಪರಮಾತ್ಮನು ಹೊರತು ಮತ್ತೇನೂ ಕಾಣಿಸದು. ಇದೇ ಆತ್ಮ ಸಾಕ್ಷಾತ್ಕಾರ, ಸರ್ವದರಲ್ಲಿಯೂ ಆತ್ಮನನ್ನೆ ಕಾಣುವುದು.

ಆತ್ಮ ಸಾಕ್ಷಾತ್ಕಾರ ಪಡೆದವನಿಗೆ ತನ್ನ ಪ್ರತ್ಯೇಕ ಇರವಿನ ಅರಿವಾಗದು. ಸತ್ಯವಾಗಿ, ನಿತ್ಯವಾಗಿ, ಒಂದೇ ಆಗಿ ಇರುವವನು ಪರಮಾತ್ಮನೊಬ್ಬನೆ, ಅವನ ಪಾಲಿಗೆ. ಪರಮಾತ್ಮನಿಂದ ಅವನು ಬೇರೆ ಅಲ್ಲ, ಅವನಿಂದ ಪರಮಾತ್ಮ ಬೇರೆ ಅಲ್ಲ. ಅವನು ಅನಂತ ಸಾಗರದಲ್ಲಿ ಬಿದ್ದ ಸಣ್ಣ ಹನಿಯೊಂದು. ಹನಿಯಿಂದ ಸಾಗರವನ್ನು ಬೇರ್ಪಡಿಸುವಂತಿಲ್ಲ. ಆದ್ದರಿಂದ, ಆತ್ಮ ಸಾಕ್ಷಾತ್ಕಾರ ಪಡೆದವನು, ಎಂದರೆ ಎಲ್ಲೆಲ್ಲಿಯೂ ಪರಮಾತ್ಮನನ್ನು ಕಾಣುವವನು, ಆತ್ಮವು ಅಮರವೂ ಅನಂತವೂ ಸತ್ಯವೂ ಆದಕಾರಣ ತಾನೂ ಅಮರನೂ ಅನಂತನೂ ಸತ್ಯನೂ ಆಗುವನು. ಆತ್ಮವು ಅವನ ದೃಷ್ಟಿಯಿಂದಲೂ ಅವನ ದೃಷ್ಟಿಯಿಂದ ಆತ್ಮವೂ ನಾಶವಾಗುವುದಿಲ್ಲ. ಎಲ್ಲವೂ ಪರಮಾತ್ಮ. ಎಲ್ಲೆಲ್ಲಿಯೂ ಅವನೇ ಏಕಮೇವಾದ್ವಿತೀಯನಾಗಿ ನಿತ್ಯನಾಗಿ ನಿಂತಿದ್ದಾನೆ. "ಯಾರು ಎಲ್ಲೆಲ್ಲಿಯೂ ನನ್ನನ್ನು ಕಾಣುವರೊ ಅವರು ನನ್ನ ದೃಷ್ಟಿಯಿಂದಲೂ ಅವರ ದೃಷ್ಟಿಯಿಂದ ನಾನೂ ಅಮರರು" ಎಂದು ಕೃಷ್ಣ ಪರಮಾತ್ಮನು ಅರ್ಜುನನಿಗೆ ಹೇಳಿರುವುದರ ಅರ್ಥವಾದರೂ ಇಷ್ಟೆ.

ಸರ್ವಸ್ವವೂ ಪರಮಾತ್ಮನೆಂದೂ, ಅವನು ಏಕಮೇವಾದ್ವಿತೀಯನೆಂದೂ, ಅವನು ಸರ್ವವ್ಯಾಪಿ ಎಂದೂ, ಸೃಷ್ಟಿಯೂ ಅವನೇ ಅದಕ್ಕೆ ಕಾರಣನೂ ಅವನೇ ಎಂದೂ ಎಂದ ಮೇಲೆ—ಏನು ಇದೆ ಎಂದು ಹೇಳಬಹುದೋ ಅದೆಲ್ಲ ಅವನಲ್ಲಿಯೇ ಇದೆ, ಅವನಿಂದ ಬೇರೆ ಯಾವುದೂ ಇಲ್ಲ. ಸೃಷ್ಟಿ ಅವನೇ, ಅವನಿಂದಲೇ; ಸ್ಥಿತಿ ಅವನೆ, ಅವನಿಂದಲೆ; ಲಯವೂ ಅವನೇ, ಅವನಲ್ಲಿಗೇ. ಎಲ್ಲವೂ ಅವನೇ, ಅವನಿಂದಲೆ ಎಲ್ಲವೂ; ಎಂದ ಮೇಲೆ ಎಲ್ಲವೂ ಅವನಲ್ಲಿಯೆ. ಇದನ್ನರಿತವನು, ಎಂದರೆ ಆತ್ಮಸ್ವರೂಪ ಬಲ್ಲವನು, ಎಂದರೆ ಆತ್ಮಸಾಕ್ಷಾತ್ಕಾರ ಪಡೆದವನು ಎಲ್ಲವೂ ತಾನೆ ಆಗುವನು. ಎಲ್ಲವನ್ನೂ ತನ್ನಲ್ಲಿಯೇ ಕಾಣುವನು. ಆತ್ಮನೇ ಅವನು, ಅವನೆ ಆತ್ಮನು. ಆತ್ಮನಿಂದ ಅವನು ಬೇರೆ ಅಲ್ಲ, ಅವನಿಂದ ಆತ್ಮ ಬೇರೆಯಲ್ಲ. ಎಲ್ಲವೂ ಅವನೆ, ಎಲ್ಲದರಲ್ಲಿ ಅವನೆ, ಎಲ್ಲವೂ ಅವನಲ್ಲಿಯೆ. ಅವನು ಅಮರನಾಗುವನು, ಸತ್ಯನಾಗುವನು, ಸರ್ವವ್ಯಾಪಿಯಾಗುವನು. ಇದೇ ಕೃಷ್ಣ ಪರಮಾತ್ಮ ಅರ್ಜುನನಿಗೆ, "ಯಾರು ಎಲ್ಲವನ್ನೂ ನನ್ನಲ್ಲಿ ಕಾಣುವರೊ ಅವರು ನನ್ನ ದೃಷ್ಟಿಯಿಂದಲೂ ನನ್ನ ದೃಷ್ಟಿಯಿಂದ ಅವರೂ ನಾಶಹೊಂದರು" ಎಂದು ಬೋಧಿಸಿದುದರ ಭಾವ.

—ಬಿ. ಎಸ್. ರಾಮಚಂದ್ರರಾವ್.

## ೪. " ನ ಹಿ ವೇರೇನ ವೇರಾನಿ ಸಮ್ಮನ್ತಿ "

"ವೈರದಿಂದ ವೈರ ಇಲ್ಲಿ ಎಂದೂ ಶಾಂತವಾಗುವುದೇ ಇಲ್ಲ. ಅವೈರದಿಂದ (ಮೈತ್ರಿಯಿಂದ) ಶಾಂತವಾಗುತ್ತದೆ. ಇದು ಸನಾತನ ಧರ್ಮ" ಎಂದು, ಲೋಕಕಲ್ಯಾಣಕ್ಕಾಗಿ ಜನಿಸಿದ, ಲೋಕಗುರುವಾದ ಬುದ್ಧದೇವ ನುಡಿದನು. ನಮ್ಮ ಭಾರತೀಯ ಸಂಸ್ಕೃತಿಯ ಮೂಲತತ್ತ್ವ ಇದು. ಸ್ವರಾಜ್ಯ ಸಂಸ್ಥಾಪನೆಗೆ ಮುನ್ನಡೆಯಲು ದಾರಿ ತೋರುವ ಜಗಜ್ಜ್ಯೋತಿ ಇದು. ಜಗದಚ್ಚರಿಯನ್ನೂ ಜಗದ ಗೌರವವನ್ನೂ ಸೂರೆಗೊಂಡಿರುವ ನಮ್ಮ 'ಮಹಾತ್ಮ'ರಿಗೆ 'ಬಾಳ ಹೆದ್ದಾರಿಯನು ಹಿಡಿದೆತ್ತಿ' ತೋರುತ್ತಿರುವ ಸನಾತನ ಧರ್ಮ ಇದು. ನಮ್ಮ ಜನಗಳಿಗಿದು ಅರ್ಥವಾಗಿದೆ, ಕೆಲವರು ಅನುಸರಿಸುತ್ತಿದಾರೆ.

ಈ ಸನಾತನ ಧರ್ಮವನ್ನು ನೆನೆಯುವಾಗ ನಮಗೆ ಮತ್ತೊಬ್ಬ 'ಲೋಕಗುರು'ವಿನ ನೆನಪು ಬರದೆ ಇರದು. ಆತ ಕ್ರಿಸ್ತ. ನಮಗೆ ದೂರದಲ್ಲಿ ಹೊರಗಿನವನಾದರೂ, ಬಲು ಆತ್ಮೀಯ. ಆತನೂ ಈ ಸನಾತನ ಧರ್ಮವನ್ನೇ ಸಾರಿದ, ಆದರೆ ಮತ್ತೊಂದು ವಿಧದಲ್ಲಿ. "ಒಂದು ಕೆನ್ನೆಗೆ ಹೊಡೆದರೆ, ನೀನು ಹಿಂದಿರುಗಿ ಹೊಡೆಯಬೇಡ. ಮತ್ತೊಂದು ಕೆನ್ನೆ ತೋರು" ಎಂದ. ಇವೆರಡರಿಂದಲೂ ನಮಗೆ ತಿಳಿಯುವುದು 'ವೈರ ಪ್ರತೀಕಾರಗಳಿಂದ ನಾವು ಮುನ್ನಡೆಯಲಾರೆವು' ಎಂಬುದು. 'ದ್ವೇಷ ಮಾಡಿಕೊಳ್ಳುವುದು ತಪ್ಪು. ತಿಳಿಯದವರು ಮಾಡುತ್ತಾರೆ. ತಿಳಿದವರು ಅದನ್ನು ಆರಿಸಬೇಕು' ಎಂಬುದು.

ದ್ವೇಷದಿಂದಾಗಲಿ ಪ್ರತೀಕಾರದಿಂದಾಗಲಿ ಮೊದಲವರ ದ್ವೇಷ ಕಡಮೆಯಾಗುವುದಿಲ್ಲ. 'ಉಷ್ಣಂ ಉಷ್ಣೇನ ಶೀತಲಂ' ಎಂಬ ಸಾಮತಿ ಇಲ್ಲಿ ಸರಿಹೋಗುವುದಿಲ್ಲ. ಬದಲಾಗಿ, ತಿಳಿದವರು ಆ ದ್ವೇಷಿಗೆ ಮೈತ್ರಿಯ ಹಸ್ತವನ್ನು ನೀಡಬೇಕು. ಆ ದ್ವೇಷದಿಂದಿರುವವನು ಒಮ್ಮೆ ಆ ಕೈಯನ್ನು ತಳ್ಳಿಯಾನು! ಮತ್ತೊಮ್ಮೆ ತಳ್ಳಿಯಾನು! ಆದರೆ ಮೂರನೆಯ ಬಾರಿ ಅವನು ತಳ್ಳಲಾರ! ತನ್ನ ಆತ್ಮಕ್ಕೆ ದ್ರೋಹವೆಣಿಸಲಾರ; ಅವನೇ ದ್ವೇಷ ಬಿಡುತ್ತಾನೆ, ಮೈತ್ರೀಭಾವ ಹೊಂದುತ್ತಾನೆ. ಈ ವಿಧವಾದ ಅವೈರದಿಂದ ಅನೇಕ ಆತ್ಮಗಳು ಪರಿಶುದ್ಧಿಹೊಂದಿ ಪ್ರಕಾಶಿಸುತ್ತಿವೆ.

ಶ್ರೀ 'ಹೊಯಿಸಳ'ರ ಕೃತಿ ನೆನಪಿಗೆ ಬರುತ್ತದೆ ಇಲ್ಲಿ. ಅಬು ಬೆನ್

ಆಥರ್ನ್‌ನ ಹೂವಿನ ಹಾಸಿಗೆಯಲ್ಲಿ ತಿಳಿಯದೆ ಒಂದು ಕ್ಷಣ ಮಲಗಿದ್ದಕ್ಕೆ ಆ ಮುದುಕಿಗೆ ಐವತ್ತು ಛಡಿ ಪೆಟ್ಟು ಬಿತ್ತು. ಮುದುಕಿ ದೇವರಲ್ಲಿ ಪ್ರಾರ್ಥಿಸಿದಳು: ಆಥರ್ನ್‌ನ ಮೇಲೆ ಸೇಡಿಗಲ್ಲ, ಅವನನ್ನು ಕ್ಷಮಿಸೆಂದು; ಅವನಿಗೆ ಯಾವ ಶಿಕ್ಷೆಯನ್ನೂ ಕೊಡದಿರೆಂದು. ದೊರೆಯಾದ ಆಥರ್ನ್ ಅದನ್ನು ಕೇಳಿದ. ಅವನ ಹೃದಯ ಕರಗಿತು. ಆತ್ಮ ಪರಿಶುದ್ಧತೆ ಹೊಂದಿತು. ಅವನೊಬ್ಬ ಮಾನವ ಶ್ರೇಷ್ಠನಾದ. ಇದೇ ರೀತಿಯ ಅನೇಕ ಉದಾಹರಣೆಗಳು ಕೊಡಬಹುದು.

ಒಟ್ಟಿನಲ್ಲಿ ಹೇಳುವುದಾದರೆ: ಅಹಿಂಸೆ ಪರಮಧರ್ಮ; ಪ್ರತೀಕಾರ ಮಾಡದಿರುವುದೇ ಶ್ರೇಷ್ಠಧರ್ಮ, ಸನಾತನಧರ್ಮ. ಸಂಸ್ಕಾರ ಹೊಂದಿದ ಜೀವಗಳು ಇದನ್ನು ಬೇಗ ಅರ್ಥಮಾಡಿಕೊಂಡು ಜೀವನದಲ್ಲಿ ಅನುಸರಣೆಗೆ ತರುತ್ತವೆ. ಹೀಗೆ ಅನುಭವದಿಂದ ಕಂಡೇ "ವೈರದಿಂದ ವೈರ ಇಲ್ಲಿ ಎಂದೂ ಶಾಂತವಾಗಲಾರದು" ಎಂದ ಬುದ್ಧ. ಅಹಿಂಸಾ ತತ್ವಕ್ಕೆ ಇದಕ್ಕಿಂತ ಸುಲಭವಾದ ಸೂತ್ರ ಕೊಡಲಾರೆವು.

—ಸಿ. ಎಸ್. ರಾಮರಾವ್

## ೫. ವ್ಯಕ್ತಿಜೀವನದಲ್ಲಿ ಅಹಿಂಸಾತತ್ತ್ವ

[ಈ ಲೇಖನ ವ್ಯಾಸಂಗಗೋಷ್ಠಿಗಾಗಿ ಬರೆದುದಲ್ಲ. ತುಮಕೂರು ಇಂಟರ್ ಮೀಡಿಯೆಟ್ ಕಾಲೇಜು ಸಂಘದವರು ಏರ್ಪಡಿಸಿದ ಕನ್ನಡ ಪ್ರಬಂಧ ಸ್ಪರ್ಧೆಗಾಗಿ ಬರೆದುದು. ಸಂಘದವರ ಅನುಮತಿಯಿಂದ ಇದನ್ನು ಇಲ್ಲಿ ಪ್ರಕಟಿಸಿದೆ.]

"ವೈರದಿಂದ ವೈರ ಎಂದಿಗೂ ಶಾಂತವಾಗುವುದಿಲ್ಲ. ಅವೈರದಿಂದ ವೈರ ಶಾಂತವಾಗುತ್ತದೆ."

ಬುದ್ಧದೇವನು ತನ್ನ ಜೀವನದ ಪ್ರಯೋಗಶಾಲೆಯಲ್ಲಿ ನಡಸಿದ ಪ್ರಯೋಗಗಳ ಫಲಿತಾಂಶವನ್ನು ಮೇಲಿನ ಮಾತುಗಳಲ್ಲಿ ಅಡಕವಾಗಿ ಹೇಳಿದನು. ಈ ಅಭಿಪ್ರಾಯ ಆತನ ಮನಸ್ಸಿನ ಮೇಲೆ ಆಗಬೇಕಾದರೆ ಆತ ತನ್ನ ಸುತ್ತುಮುತ್ತಿನ ಜನಗಳ ದ್ವೇಷ, ಕಡಿದಾಟ, ಬಡಿದಾಟಗಳನ್ನು ಕಂಡು ಬೇಸತ್ತು, ಅವರಿಗೆ ಜೀವನದ ತತ್ತ್ವಗಳನ್ನು ತಿಳಿಸಲು ಪ್ರಯತ್ನ ಪಟ್ಟಿರಬೇಕು. ಆ ಪ್ರಯತ್ನದ ವಿಜಯವೇ ಅಹಿಂಸಾತತ್ತ್ವದರ್ಶನ.

ಮನುಷ್ಯ ಪ್ರಪಂಚದ ಆದಿಯಲ್ಲಿ ತುಂಬಾ ಅನಾಗರಿಕನಾಗಿದ್ದ. ದೇಹದ

ಬೆಳೆವಣಿಗೆ ಸಾಕಷ್ಟು ಇದ್ದಿದ್ದರೂ ಮನಸ್ಸಿನ ಬೆಳೆವಣಿಗೆ ಲವಲೇಶವಾದರೂ ಇರಲಿಲ್ಲವೆನ್ನಬೇಕು. ಏಕೆಂದರೆ ಆಗ ಅವನ ಗಮನವೆಲ್ಲಾ ತನ್ನ ದೇಹ, ತನ್ನ ಹೊಟ್ಟೆ, ತನ್ನ ಬಟ್ಟೆ ಇವುಗಳ ಮೇಲೆ ಕೇಂದ್ರೀಕೃತವಾಗಿತ್ತು. ಅವುಗಳನ್ನು ಪಡೆಯಲು ಅವನು ಕಂಡುಕೊಂಡಿದ್ದುದು ಒಂದೇ ದಾರಿ; ತನ್ನ ಶಕ್ತಿಪ್ರಯೋಗ ದಿಂದ. ಆದರೆ ಆ ರೀತಿಯ ಜೀವನ ಅವನಿಗೆ ದಕ್ಕಲಿಲ್ಲ. ಏಕೆಂದರೆ ಅವನ ಶಕ್ತಿಗಿಂತ ನೂರುಪಾಲು, ಸಾವಿರಪಾಲು ಹೆಚ್ಚಾದ—ಏಕೆ? ಅವನಿಗೇ ಶಕ್ತಿ ದಾಯಕವಾದ—ಪ್ರಕೃತಿಯ ಶಕ್ತಿಯ ಮುಂದೆ ಅವನ ಆಟವೇನೂ ನಡೆಯುವ ಹಾಗಿರಲಿಲ್ಲ. ಆಗ ಅವನಿಗೆ ಎನ್ನಿಸಿತು: "ಓಹೋ! ನನಗಿಂತ ಹೆಚ್ಚಿನ ಒಂದು ಶಕ್ತಿಯಿದೆ. ಅದನ್ನು ನಾನು ಎದುರಿಸಿ ಬದುಕಲಾರೆ. ಅದನ್ನು ನನ್ನ ಒಲ ವಿಗೆ ಎಳೆದುಕೊಳ್ಳಬೇಕು. ಆಗ ಅದು ನನಗೆ ಸಹಾಯ ಮಾಡೀತು, ಅಡ್ಡ ಬರಲಾರದು" ಎಂದು. ಆನಂದದಿಂದ ಅವನು ಪ್ರಕೃತಿಯನ್ನು ಹೊಗಳಿ ತನ್ನ ಕೆಲಸವನ್ನು ಸಾಧಿಸಿಕೊಳ್ಳಲು ಪ್ರಯತ್ನಿಸಿದ. ಇದರಿಂದ ಅವನಿಗೆ ತನ್ನ ಹಿಂಸಾಭಾವ ಕುಗ್ಗಿ ಅಹಿಂಸಾಭಾವದ ಅಂಕುರವುಂಟಾಯಿತು.

ಕೆಲವು ಸಾವಿರ ವರ್ಷಗಳು ಕಳೆದವು. ಮನುಷ್ಯರ ಸಂಖ್ಯೆ ಹೆಚ್ಚಿತು. ಅದರೊಂದಿಗೆ ಅವನಿಗೆ ಪ್ರಕೃತಿಯ ಮೇಲೆ ಸ್ವಲ್ಪ ಅಧಿಕಾರ ಬಂದಿತು. ತನ್ನ ಜೀವನವನ್ನು ಸುಖವಾಗಿ ನಡಸಲು ಅವನು ಪ್ರಕೃತಿಯನ್ನು ಸ್ವಲ್ಪ ಸ್ವಲ್ಪವಾಗಿ ಉಪಯೋಗಿಸಿಕೊಳ್ಳಲಾರಂಭಿಸಿದನು. ಇದರಿಂದ ಅವನ ಯೋಚಿಸುವ ಶಕ್ತಿ ಬೆಳೆಯಲು ಕಾರಣವಾಯಿತು. ಯಾವನ ಯೋಚನಾಶಕ್ತಿ ಹೆಚ್ಚಾಗಿದ್ದಿತೋ ಅವನ ಸೌಖ್ಯವೂ ಹೆಚ್ಚಾಗಿತ್ತು. ಹೀಗೆ ಪ್ರತಿಯೊಬ್ಬನೂ ತನ್ನ ಸೌಖ್ಯದ ಕಡೆಗೆ ಗಮನ ಕೊಟ್ಟಹಾಗೆಲ್ಲಾ ಅವನ ಮನಸ್ಸಿನ ಬೆಳೆವಣಿಗೆಯೂ ಹೆಚ್ಚಿತು. ಜನತೆಯಲ್ಲಿ ಕೀಳು ಮೇಲು ಎಂಬ ಭಾವನೆ ಬಂದಿತು. ತಿರುಗಿ ಮನುಷ್ಯನು ತನ್ನ ಆದಿಪುರುಷರ ಸ್ವಭಾವಗಳಿಗೆ ತನ್ನಲ್ಲಿ ಮನೆ ಮಾಡಿಕೊಟ್ಟು ಅವರಿಗಿಂತ ಹೆಚ್ಚಾದ ಕೇಡನ್ನು ಪ್ರಪಂಚಕ್ಕೂ ತನಗೂ ಮಾಡಿಕೊಂಡನು.

ಇಷ್ಟೆಲ್ಲಾ ಪೂರ್ವದ ಮಾತು. ಆದರೆ ನಾಗರಿಕತೆ ಅತ್ಯುಚ್ಚಾಗ್ರಯ ಸ್ಥಿತಿಯಲ್ಲಿದೆ ಎಂದು ಭಾವಿಸುವ ನಮ್ಮ ಈ ಇಪ್ಪತ್ತನೇ ಶತಮಾನಕ್ಕೂ ಇದು ಅಕ್ಷರಶಃ ಅನ್ವಯಿಸುತ್ತದೆ. ಮನುಷ್ಯ ತನ್ನೊಬ್ಬನ ಸುಖಕ್ಕಾಗಿ ಪ್ರಪಂಚ ವನ್ನೇ ಆಹುತಿಗೊಳ್ಳಲು ಹಾತೊರೆಯುತ್ತಿದ್ದಾನೆ. ಪ್ರಕೃತಿಯ ಉಪಯೋಗ

ಗಳನ್ನು ದುರುಪಯೋಗಪಡಿಸಿಕೊಂಡು ತನ್ನ ಜಾತಿಯನ್ನು ತಾನೆ ಕೊಲೆ ಮಾಡುತ್ತಿದ್ದಾನೆ, ಪಾಶ್ಚಾತ್ಯ ದೇಶಗಳಲ್ಲಿ. ಪೌರ್ವಾತ್ಯ ದೇಶಗಳು ಈ ಪಾಪ ದಲ್ಲಿ ಅಷ್ಟು ಭಾಗಿಯಾಗಿಲ್ಲ. ಏಕೆಂದರೆ ಅವು ಈ ಅಹಿಂಸಾ ತತ್ತ್ವಗಳನ್ನು ಸಾರಿದವರ ಬೀಡು. ಅವರ ಪ್ರತಿಯೊಂದು ತತ್ತ್ವವೂ ಅವರಿಗೆ ರಕ್ತಗತವಾ ಗಿರುವುದರಿಂದ ಅವರು ಹಿಂಸೆಯಿಂದ ಆದಷ್ಟು ದೂರವಾಗಿದ್ದಾರೆ.

ಮನುಷ್ಯನಿಗೆ ದೈಹಿಕಶಕ್ತಿ ಪಾಶವೀಶಕ್ತಿಯಾಗಿ ಪರಿಣಮಿಸುತ್ತದೆ. ಆದರೆ ನೈತಿಕಶಕ್ತಿ ಹಾಗಲ್ಲ; ಅದು ಅವನಿಗೆ ದೈವಿಕಶಕ್ತಿಯನ್ನು ಕೊಡುತ್ತದೆ. ನೈತಿಕಶಕ್ತಿ ಅವನಿಗೆ ದೈಹಿಕಶಕ್ತಿಯ ಸದುಪಯೋಗವನ್ನು ತೋರಿಸಿ, ಅವ ನಲ್ಲಿರುವ ಮೃಗಭಾವನೆಗಳನ್ನು ಹೊಡೆದೋಡಿಸುತ್ತದೆ. ಅವನಲ್ಲಿ ದೈವಿಕ ಹಾಗೂ ದೈಹಿಕ ಶಕ್ತಿಗಳು ಹೆಚ್ಚಿದಷ್ಟೂ ಅವನು ಪ್ರಗತಿಪರನಾಗುತ್ತಾನೆ. ಮನುಷ್ಯನ ಜೀವನದ ಗುರಿ ಪ್ರಗತಿ. ಅದನ್ನು ಹೊಂದಬೇಕಾದ ದಾರಿ ಅಹಿಂಸೆ. ಇದನ್ನು ಪ್ರತಿಯೊಬ್ಬ ಆಚಾರ್ಯಪುರುಷನೂ ಕಂಡುಕೊಂಡಿದ್ದಾನೆ. ಮಹಾವೀರ, ಬುದ್ಧ, ಯೇಸುಕ್ರಿಸ್ತ, ಮಹಾತ್ಮಾಗಾಂಧಿ—ಈ ಎಲ್ಲರೂ ತಮ್ಮ ಅನುಭವಗಳಿಂದ ಹೊಂದಿದ ಸಾರ, ತತ್ತ್ವ, ಅಹಿಂಸೆ ಎಂದು ಸಾರಿ ಹೇಳುತ್ತಿ ದ್ದಾರೆ. ಹಿಂದೂದೇಶದ ಜನಗಳು ಮತಕ್ಕಾಗಿ ಯಾವ ಬಲಿದಾನವಾದರೂ ಮಾಡಿಯಾರು. ಅದಕ್ಕೆ ಕಾರಣ : ಸಂಖ್ಯೆಗೆ ಮೀರಿದ ಅವರ ಮತಾಚಾರ್ಯರ ಪ್ರಭಾವ. ಇಷ್ಟೆಲ್ಲಾ ಅಹಿಂಸೆಯನ್ನು ಏಕೆ ನಮ್ಮ ಪ್ರಮುಖರು, ನಮ್ಮ ರಾಷ್ಟ್ರನಾಯಕರು ಕೂಗಿ ಹೇಳುತ್ತಿದ್ದಾರೆ ಎಂದರೆ: ಅವರಿಗೆ "ಅಹಿಂಸೆ ಶಾಶ್ವತ ವಾದದ್ದು. ಹಿಂಸೆ ಅಶಾಶ್ವತ" ಎಂದು ಗೊತ್ತಾಗಿದೆ.

ದೇಹದ ಮೇಲಿನ ಪರಿಣಾಮಗಳಿಗಿಂತ ಮನಸ್ಸಿನ ಮೇಲಿನ ಪರಿಣಾಮ ಬಹಳ ತೀವ್ರ, ಮತ್ತು ಫಲಕಾರಿ. ದೇಹದ ಮೇಲಿನ ಪರಿಣಾಮಗಳು ಮನು ಷ್ಯನ ರಾಕ್ಷಸೀಭಾವನೆಗಳನ್ನು ಹೆಚ್ಚಿಸಿದರೆ, ಮನಸ್ಸಿನ ಮೇಲಿನ ಪರಿಣಾಮ ಗಳು ಅವನಲ್ಲಿ ಶಾಂತಭಾವನೆಯನ್ನು ಹೆಚ್ಚಿಸುತ್ತವೆ. ಮನಸ್ಸಿನ ಮೇಲೆ ಅಹಿಂಸೆಯ ವ್ಯಾಪ್ತಿ ಬಹಳ. ವಿಚಾರಿಸಿ ನೋಡಿದರೆ, ಹಿಂಸೆ ದೇಹದ ಮೇಲೆ ಆಗುವ ಕಷ್ಟಗಳಿಗೆ ಸಂಬಂಧಿಸಿದ್ದಾದರೆ ಅಹಿಂಸೆ ಮನಸ್ಸಿನ ಮೇಲೆ ನಡೆಯುವ ಹಿಂಸೆಯಾಗಿ ಪರಿಣಮಿಸಿದೆ.

ಇಂದು ನಾವು ಒಂದು ಸತ್ಯವನ್ನು ಕಾಣುತ್ತೇವೆ. ಜನಗಳೆಲ್ಲಾ ಅದಕ್ಕೆ

ತೀರಾ ವ್ಯತಿರಿಕ್ತವಾಗಿ ಹೋಗುವುದನ್ನೂ ಕಾಣುತ್ತೇವೆ. ಜನರ ಅಧೋಗತಿಯನ್ನು ಕಂಡು, ನಮ್ಮ ಮನಸ್ಸಿಗೆ ತುಂಬಾ ನೋವುಂಟಾಗಿ ಅವರನ್ನು ಊರ್ಧ್ವಗತಿಗೆ ಎಳೆಯಬೇಕೆಂಬ ಒತ್ತಡ ಉಂಟಾಗುತ್ತದೆ. ಇದನ್ನು ಕಾರ್ಯತಃ ತರಲು ಎರಡು ರೀತಿಯುಂಟು. ಒಂದು ಸೈನ್ಯಾಧಿಕಾರಿಯಂತೆ "ಈ ರೀತಿ ನಡೆದರೆ ಉಂಟು. ಇಲ್ಲದಿದ್ದರೆ ಸಾವು ಸಿದ್ಧ" ಎಂದು ಆಜ್ಞೆಮಾಡಿ ಬಲವಂತಪಡಿಸುವುದರಿಂದ. ಜನ ತಮ್ಮ ಪ್ರಾಣವನ್ನು ಜೋಪಾನಮಾಡಲು ಹೇಳಿದ ಹಾಗೆ ಕೇಳುತ್ತಾರೆ. ಆದರೆ ಎಷ್ಟು ದಿನ? ಆ ಆಜ್ಞೆಮಾಡುವ ಅಧಿಕಾರ ಜೀವಂತವಾಗಿರುವಷ್ಟು ಕಾಲ. ಆಮೇಲೆ ಆ ಆಧಿಕಾರದ ನಾಶದೊಂದಿಗೆ ಅದರ ತತ್ತ್ವಗಳೂ ನಾಶವಾಗುತ್ತವೆ. ಮತ್ತೊಂದು ದಾರಿ: ಜನತೆಯ ಸ್ನೇಹಿತನಂತೆ, ತಂದೆಯಂತೆ, ತಾಯಿಯಂತೆ "ನೀವು ತಪ್ಪು ದಾರಿಯಲ್ಲಿದ್ದೀರಿ. ಇದನ್ನು ಬಿಟ್ಟು ನ್ಯಾಯವಾದ ಜೀವನವನ್ನು ನಡಸಬೇಕು. ಸತ್ಯಕ್ಕೆ ಬೆಂಬಲ ಕೊಡಬೇಕು. ಇದಕ್ಕೆ ನೀವು ಬೆಂಬಲ ಕೊಡದಿದ್ದರೆ ಅದು ನಿಮ್ಮ ತಪ್ಪಲ್ಲ, ನನ್ನ ತಪ್ಪು. ಅದು ಕರಗುವವರೆಗೂ ನಾನು ನನ್ನನ್ನು ದಂಡಿಸಿಕೊಳ್ಳುತ್ತೇನೆ" ಎಂದು ದೇಹದಂಡನೆ ಮಾಡಿಕೊಳ್ಳುವುದು. ಇದರ ಪರಿಣಾಮ ಎಂದೆಂದಿಗೂ ಶಾಶ್ವತವಾದದ್ದು. ಏಕೆಂದರೆ ತನ್ನ ಸ್ನೇಹಿತ ಅಥವಾ ತಂದೆ ಅಥವಾ ತಾಯಿ ತನ್ನ ತಾನೆ ದಂಡಿಸಿಕೊಳ್ಳುವುದನ್ನು ಯಾವ ಸ್ನೇಹಿತನಾಗಲಿ, ಮಗನಾಗಲಿ, ಮಗಳಾಗಲಿ ಸಹಿಸುವುದು ಅಸಾಧ್ಯ. ಅದರ ನಿವಾರಣೆಗಾಗಿ ಅವರೂ ಸತ್ಯದ ದಾರಿಗೆ ಬರುತ್ತಾರೆ. ಬಂದರೂ ಅದರಲ್ಲಿ ಶಾಶ್ವತವಾಗಿ ನಿಲ್ಲುತ್ತಾರೆ. ಒಂದು ವೇಳೆ ಆ ದೇಹ ಬಿದ್ದರೂ ಅದರ ಆತ್ಮದ ಹಾಗೂ ತಮ್ಮ ಆತ್ಮದ ತೃಪ್ತಿಗಾಗಿ ಒಳ್ಳೆಯ ದಾರಿಯಿಂದ ಆಚೆ ಆಗುವುದಿಲ್ಲ.

ಬಲವಂತದಿಂದ, ಕ್ರೌರ್ಯದಿಂದ ನಡಸುವ ಕಾರ್ಯಗಳು ನೆಲೆಯಾಗಿ ನಿಲ್ಲದಿರುವುದಕ್ಕೆ ಮತ್ತೊಂದು ಕಾರಣ: ಮನುಷ್ಯನ ಸ್ವತಂತ್ರಭಾವನೆ. ಆ ಭಾವನೆ ಬಲವಂತದಿಂದ ಬರುವ ದಾಸ್ಯದಿಂದ ತಪ್ಪಿಸಿಕೊಳ್ಳಲು ಸದಾ ಕಾತರಿಸುತ್ತಿರುತ್ತದೆ. ಈ ಬಂಧನದಿಂದ ಎಂದು ಬಿಡಿಸಿಕೊಂಡೇನು? ಯಾವಾಗ ಸ್ವತಂತ್ರನಾಗಿ ಉಸಿರಾಡೇನು? ಎಂದು ಕಟ್ಟಿಗೆ ಬಿದ್ದ ಆನೆಯಂತೆ ಒದ್ದಾಡುತ್ತಿರುತ್ತದೆ. ಸ್ವಾತಂತ್ರ್ಯ ಸಂಪಾದನೆಗಾಗಿ ಅದು ಮಾಡುವ ಪ್ರಯತ್ನಗಳೆಲ್ಲಾ ಗುಪ್ತವಾಗಿರುತ್ತವೆ. "ಈ ಅಧಿಕಾರವನ್ನು ಎಂದು ಉರುಳಿಸೇನು?" ಎಂದು

ಹಲ್ಲು ಮಸೆಯುತ್ತಿರುತ್ತದೆ. ಈ ಎಲ್ಲ ಪ್ರಯತ್ನದ ಕೊನೆ ಕೊಲೆ, ಅಶಾಂತಿ, ಮಾನವಜೀವನದ ಅಧೋಗತಿ.

ರಾಜಕೋಟೆಯ ಪ್ರಕರಣ ತೆಗೆದುಕೊಳ್ಳೋಣ. ಗಾಂಧೀಜಿ ಮೂರು ದಿನ ಮಾಡಿದ ಉಪವಾಸ ದೇಶವನ್ನು ಅಲ್ಲೋಲಕಲ್ಲೋಲಪಡಿಸಿತು. ವೈಸ್ರಾಯರು ತಮ್ಮ ಮಿಕ್ಕ ಕೆಲಸಗಳಿಗೆ ಮುಟ್ಟುಗೋಲು ಹಾಕಿ ರಾಜ ಕೋಟೆಯ ರಾಜಾಸ್ಥಾನದ ಅನ್ಯಾಯಗಳಿಗೆ ಅಂತ್ಯ ಕಾಣಿಸಿದರು. ಭನ್ಸಾಲಿ ಭಾಯಿಯವರು ಚೀಮೂರಿನ ಪ್ರಕರಣದಲ್ಲಿ ಆದ ಹೆಂಗಸರ ಮಾನಭಂಗದ ವಿಚಾರದಲ್ಲಿ ಉಪವಾಸ ಮಾಡದಿದ್ದರೆ ಅದು ಎಂದೆಂದಿಗೂ ನ್ಯಾಯಾಸ್ಥಾನದ ವರೆಗೂ ಹೋಗುತ್ತಿರಲಿಲ್ಲ. ಉಪವಾಸ ಅಹಿಂಸೆಯ ಒಂದು ಮುಖ್ಯಭಾಗ. ಅದೇ, ನಮ್ಮ ನಾಯಕರನ್ನು ಸಾವಿರದ ಒಂಬೈನೂರ ನಲವತ್ತೆರಡು ಆಗಸ್ಟಿನಲ್ಲಿ ಬಂಧಿಸಿದಾಗ ಜನ ಕೆರಳಿ ದೊಂಬಿ ನಡಸಿದುದರ ಫಲವನ್ನು ನೋಡೋಣ. ಏನನ್ನು ಸಾಧಿಸಿತು ಈ ದೊಂಬಿ, ಈ ಕೊಲೆ, ಈ ಕೂಗು ? ಸರ್ಕಾರದ ವಿವೇ ಚನೆ ಹೋಗಿ ಕೆಲವು ನರಹತ್ಯೆಗೆ ಕಾರಣವಾಯಿತು. ನರಹತ್ಯೆಯಾದೊಡ ನೆಯೇ ಸದ್ದಡಗಿತು. ಆದರೆ ಪ್ರತಿಯೊಬ್ಬ ದೇಶಭಕ್ತನೂ ಒಗ್ಗಟ್ಟಿನಿಂದ ಅಹಿಂಸಾಚರಣೆಯನ್ನು ಆಚರಿಸದಿದ್ದರೆ—ಆ ಸರ್ಕಾರವೆಷ್ಟೆ ಕೆಟ್ಟದ್ದಾಗಿರಲಿ— ಪ್ರಮುಖರನ್ನೂ ನಾಯಕರನ್ನೂ ಇಂದು ಹೀಗೆ ಸೆರೆಯಲ್ಲಿ ಕೊಳೆಯಿಸು ತ್ತಿರಲಿಲ್ಲ.

ಇಂದು ಗಾಂಧೀಜಿ ನಮ್ಮೆಲ್ಲರ ಕಣ್ಣಮಣಿಯಾಗಿರುವುದಕ್ಕೆ ಕಾರಣ : ಅವರು ಹೊರಟಿರುವ ಸ್ವಾತಂತ್ರ್ಯ ಸಂಪಾದನೆಗಿಂತ ಅವರ ಸತ್ಯದ ಬಾಯಾ ರಿಕೆ, ಅದನ್ನು ಆರಿಸಲು ಅವರು ಕುಡಿಯುವ ಅಹಿಂಸೆಯ ಅಮೃತ. ಇವೆರಡು ನಮ್ಮ ಸ್ವತ್ತೇ ಅಲ್ಲ, ಪ್ರಪಂಚದ ಸ್ವತ್ತು. ಅಹಿಂಸೆಯ ಆಚರಣೆ ತುಂಬಾ ಕಷ್ಟವಾದದ್ದು. ಸಾಧಿಸಿದ ಮೇಲೆ ಅದರ ಉಪಯೋಗಕ್ಕೆ ಮಿತಿಯಿಲ್ಲ. ಮನುಷ್ಯನಿಗೆ ತ್ಯಾಗ, ಸಹನೆ, ಪ್ರೀತಿ ಇವುಗಳ ಗುಂಪಿಗೆ ಗುಂಪೇ ಅಡಿಯಾಳಾ ಗುತ್ತವೆ. ವ್ಯಕ್ತಿಜೀವನ ಉತ್ತಮೋತ್ತಮವಾಗಿ ಪರಿಣಮಿಸಿ ಪರಿಮಳಿಸುತ್ತದೆ. ಪ್ರಪಂಚದ ಪ್ರತಿಯೊಂದು ವ್ಯಕ್ತಿಗೂ ತನ್ನ ನೆರೆಹೊರೆಯ ಪ್ರಾಣಿಗಳಲ್ಲಿ ಸಹೋದರಭಾವನೆ ಹುಟ್ಟಿ, ಅವರ ಕಷ್ಟದಲ್ಲಿ ಅನುಕಂಪ ಮೂಡಿ, ಕಷ್ಟನಿವಾ ರಣೆಯಾಗುತ್ತದೆ. ಸುಖದಲ್ಲಿ ಭಾಗಿಯಾಗಿ, ಆನಂದವನ್ನು ಇಮ್ಮಡಿಮಾಡಿ,

ತನ್ನ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುತ್ತದೆ. ಮನುಷ್ಯಜೀವನದ ಗುರಿ ತಾನೆ ಏನು? ಸುಖವನ್ನು ಅರಸುವುದು ತಾನೆ! ಅದು ಅಹಿಂಸೆಯಿಂದಲ್ಲದೆ ಮತ್ತಾವುದರಿಂದಲೂ ಸಾಧ್ಯವಿಲ್ಲ.

—ಎಂ. ಜಿ. ಶ್ರೀನಿವಾಸನ್.

## ೬. 'ಅರಿತರೆ ಶರಣ, ಮರೆತರೆ ಮಾನವ'

ಮಾನವ ದೇವನಾಗಬಹುದು, ಮಾನವನಾಗಿಯೆ ಇರಬಹುದು; ಅಮರನಾದರೂ ಆಗಬಹುದು, ಮರ್ತ್ಯನಾಗಿಯೆ ಇರಬಹುದು; ಮಾಯೆಯನ್ನು ಮೀರಿ ಶರಣನಾದರೂ ಆಗಬಹುದು, ಮಾಯಾಪ್ರಪಂಚದಲ್ಲಿ ಮಾನವಕೀಟವಾಗಿಯೆ ಉಳಿಯಬಹುದು. · ದೇವತ್ವಕ್ಕೆ, ಅಮರತೆಗೆ, ಹಾಗೂ ಶರಣತೆಗೆ ದಾರಿ ಅರಿವು; ಮಾನವತೆಗೆ, ಮೃತ್ಯುವಿಗೆ ದಾರಿ ಮರೆವು. ಅಜ್ಞಾನದಿಂದ ನರ ನರನಾಗಿಯೆ ಉಳಿಯುವನು; ಜ್ಞಾನದಿಂದ ಅವನು ಅಮರನಾಗುವನು, ಶರಣನಾಗುವನು. ಅಜ್ಞಾನದಿಂದ ಮಾನವನು ಮಮಕಾರದ ಮಹಾ ಕೋಟೆಯನ್ನು ಕಟ್ಟಿ, ತನ್ನನ್ನು ರಕ್ಷಿಸಿಕೊಳ್ಳುವುದಕ್ಕೆ ಬದಲಾಗಿ ತನ್ನನ್ನೇ ಬಂಧಿಸಿಕೊಳ್ಳುವನು. ಪರಮಾತ್ಮನಿಗೂ ತನಗೂ ಮಧ್ಯೆ ಅಭೇದ್ಯವಾದ ಅಜ್ಞಾನದ ಗೋಡೆಯನ್ನು ಕಟ್ಟಿ ಅಸುರಲೋಕವೊಂದನ್ನು ನಿರ್ಮಿಸಿಕೊಳ್ಳುವನು. ಹುಟ್ಟು ಸಾವುಗಳ ಸಂಸಾರದ ದಂದುಗಕ್ಕೆ ಸಿಕ್ಕು ನರಳುವನು. ಆತ್ಮವಿನಾಶ ಹೊಂದುವನು. ಜಗದ ಮಾಯಾಜಾಲಕ್ಕೆ ಸಿಕ್ಕು ಮಿಲಿಮಿಲಿ ಒದ್ದಾಡುವನು.

"ಸರ್ವ ಕಾರಣಕರ್ತ ಪರಮಾತ್ಮ; ಅವನು ಸರ್ವಾಂತರ್ಯಾಮಿ, ಸರ್ವಶಕ್ತ; ಎಲ್ಲವೂ ಅವನೆ, ಎಲ್ಲೆಲ್ಲಿಯೂ ಅವನೆ" ಎಂದು ದೃಢವಾಗಿ ನಂಬಿ, 'ತೇನ ವಿನಾ ತೃಣಮಪಿ ನ ಚಲತಿ' ಎಂದು ಅವನ ಸರ್ವಾಧಿಕಾರವನ್ನು ಒಪ್ಪಿದ ಮನುಷ್ಯನು ತನ್ನ ಸರ್ವಸ್ವವನ್ನೂ ಕ್ಷಣಕ್ಷಣಕ್ಕೂ ಪರಮಾತ್ಮನಿಗೆ ನಿವೇದನ ಮಾಡುವನು. ಅವನಲ್ಲಿ ಶರಣಾಗುವನು. ಪ್ರಪಂಚದ ಯಾವೊಂದು ವಸ್ತುವೂ ನಶ್ವರವಾದ ಕಾರಣ ಅವುಗಳಲ್ಲಿ ತನಗೆ ಸಿಕ್ಕುವ ಶರಣೂ ಅವುಗಳಷ್ಟೆ ನಶ್ವರವೆಂದು ನಂಬಿ ನಿತ್ಯನಾದ ಪರಮಾತ್ಮನಲ್ಲಿ ಶರಣಾಗಿ ನಿತ್ಯವಾದ ಶರಣನ್ನು ಪಡೆಯುವನು. ಇದು ಅರಿತವನ ಬಾಳು; ಅರಿತು ಶರಣಾದವನ ಬಾಳು.

"ತನು ನಿನ್ನದು ಜೀವನ ನಿನ್ನದೈಯ" ಎಂದು ದಾಸರು ಪರಮಾತ್ಮನಿಗೆ ಆತ್ಮನಿವೇದನದ ಅಮರಗಾನವನ್ನು ಹಾಡಿ, ಜಗದ್ರಕ್ಷಕನಾದ ಭಗವಂತನಲ್ಲಿ ಶರಣುಪಡೆದು ಅಮರರಾದರು. ರವೀಂದ್ರರು ಸರ್ವಕಲಾಸಂಪನ್ನನೂ ಸರ್ವ ಕಾವ್ಯವಿದ್ಯಾಗುರುವೂ ಗಾನವಿಶಾರದನೂ ಆದ ಪರಮಾತ್ಮನನ್ನು ಔಪಾಸನ ಮಾಡಿದರು. ತಮ್ಮ ದೇಹವೆ ಅವನ ಆವಾಸಸ್ಥಾನವೆಂದು ಅರಿತು ಅದನ್ನು ಶುದ್ಧಿಮಾಡಿ ಅವನಿಗೆ ನಿವೇದಿಸಿದರು. ಅವನ ಅಮರ ಅಮೃತಗಾನಕ್ಕೆ ತಾವೊಂದು ವಾದ್ಯ ಮಾತ್ರವೆಂದೆಣಿಸಿ ತಮ್ಮ ಮೂಲಕ ಆ ಅಮರಗಾನವನ್ನು ಕೇಳುವ ಪುಣ್ಯವನ್ನು ಪ್ರಪಂಚಕ್ಕೆ ಒದಗಿಸಿದರು, ತಾವು ಗಾನದ ಅಮರತೆ ಯಲ್ಲಿ ಅಮರರಾದರು. ಮಹದೇವಿ ಎಳಮೆಯಲ್ಲೆ ಜೀವದ ಜಂಜಡಕ್ಕೆ, ನಿಸ್ಸಾರ ಸಂಸಾರಕ್ಕೆ, ಹುಟ್ಟು ಸಾವಿನ ಕೋಟಲೆಗಳ ದಂದುಗಕ್ಕೆ ಬೇಸತ್ತು ಚನ್ನನ ಅರಿವಿಗಾಗಿ ಮರ ಗಿಡ ಮೃಗಪಕ್ಷಿಗಳನೆಲ್ಲ 'ನೀವು ಕಾಣಿರೆ, ತೋರಿರೆ ಚನ್ನಮಲ್ಲಿಕಾರ್ಜುನನ' ಎಂದು ಅರಸುತ್ತ ಹೊರಟಳು. 'ತನು ನಿಮ್ಮ ರೂಪು, ಮನ ನಿಮ್ಮ ರೂಪು, ಪ್ರಾಣ ನಿಮ್ಮ ರೂಪು' ಎಂದು ಚನ್ನನ ರೂಪ ದಲ್ಲಿ ಸಮರಸಳಾದಳು. 'ಅರಿವನರಿದೆ, ಮರೆವ ಮರೆದೆ, ಚನ್ನಮಲ್ಲಿಕಾರ್ಜುನ ನಿಮ್ಮನರಿದು ಸೀಮೆಗೆಟ್ಟೆನು' ಎಂದು ಅರಿವನ್ನು ಪಡೆದು ಮಹದೇವಿ ಶರಣ ಸ್ಥಲವನ್ನು ಪಡೆದಳು; ಅರಿವನ್ನು ಪಡೆದು ನಾಡಿಗೆ ಅಕ್ಕನಾದಳು. ಬಸವನು ಕೂಡಲಸಂಗಮನಲ್ಲಿ ಮನನೆಟ್ಟು, ಆತ್ಮನಿವೇದನ ಮಾಡಿ, ಶರಣನಾಗಿ ನಾಡಿಗೆ ಅಣ್ಣನಾದನು; 'ಅರಿತರೆ ಶರಣ ಮರೆತರೆ ಮಾನವ' ಎಂಬ ಅಮರ ವಚನ ವನ್ನು ಅನುಭವದಿಂದ ನುಡಿದು ಅಮರನಾದನು.

—ಬಿ. ಎಸ್. ರಾಮಚಂದ್ರರಾವ್.

## ೭. ಕಲ್ಯಾಣಕರ್ತನಿಗೆ ದುರ್ಗತಿಯಿಲ್ಲ

ಪ್ರಪಂಚದಲ್ಲಿ ಪ್ರತಿಯೊಂದೂ ಒಂದೊಂದು ವಿಧವಾದ ವಿಶಿಷ್ಟಮಾರ್ಗ ವನ್ನನುಸರಿಸಿದೆ. ಕಾರ್ಯದ ಗೌರವದಿಂದ ಮಾನದ ಗೌರವ ಹೆಚ್ಚುವುದು. ಉತ್ತಮ ಕೆಲಸಗಳಿಂದ ಉನ್ನತಿ ದೊರಕುವುದು. ಸರ್ವಜ್ಞಮೂರ್ತಿ—

ಕೊಟ್ಟದ್ದು ತನಗೆ ಬೈತಿಟ್ಟದ್ದು ಪರರಿಂಗೆ |
ಕೊಟ್ಟದ್ದು ಕೆಟ್ಟತೆನಬೇಡ—ಅದು ಮುಂದೆ |
ಕಟ್ಟಿಹುದು ಬುತ್ತಿ—ಸರ್ವಜ್ಞ

ಎಂದೂ

ಸಿರಿಬಂದ ಕಾಲಕ್ಕೆ ಕರೆದು ದಾನವ ಮಾಡು |
ಪರಿಣಾಮವಕ್ಕು ಪದವಕ್ಕು—ಸ್ವರ್ಗವಾ |
ನೆರೆಮನೆಯದಕ್ಕು—ಸರ್ವಜ್ಞ

ಎಂದೂ ಹೇಳಿರುವನು. ಎಂದರೆ, ಮಾಡಿದ ಸತ್ಕರ್ಮ ಮುಂದೆ ಕಷ್ಟಕಾಲದಲ್ಲಿ ಸಹಾಯ ಮಾಡುವುದು. ಹಸಿದು ಬಂದವನಿಗೆ ಸಕಾಲದಲ್ಲಿ ಒಳ್ಳೆಯ ಮನಸ್ಸಿನಿಂದ ಒಂದು ತುತ್ತು ನೀಡುವುದಾದರೆ, ಅದೇ ತುತ್ತು ಮುಂದೆ ಕಷ್ಟಕಾಲದಲ್ಲಿ ಬುತ್ತಿಯಾಗಿ ಕಾಯುವುದು. ಅಂತೆಯೇ ಮಾಡಿದ ಸತ್ಕರ್ಮದ ಫಲವಾಗಿ, ಪರಿಣಾಮದಲ್ಲಿ ಸ್ವರ್ಗವೂ ಸಹ ನೆರೆಮನೆಯಂತೆ ಹತ್ತಿರವಾಗುವುದು. ಆದುದರಿಂದ ಒಳ್ಳೆಯ ಕೆಲಸವನ್ನು ಒಳ್ಳೆಯ ನಿರ್ಮಲ ಮನಸ್ಸಿನಿಂದ ಮಾಡಿದ ಯಾವನೂ ದುರ್ಗತಿಗಿಳಿಯುವುದೆ ಇಲ್ಲ.

ಜನಸೇವೆಯೇ ಈಶಸೇವೆಯೆಂದು ತಿಳಿದು, ಉತ್ತಮ ಕೆಲಸಗಳನ್ನು ಉದಾತ್ತ ಭಾವನೆಯಿಂದ ಜನಸಾಮಾನ್ಯದ ಮೇಲ್ಮೆಗಾಗಿ ಮಾಡುವುದಾದರೆ, ಸತ್ಯಪಥದಲ್ಲಿ ನಡೆದು ಉತ್ತಮ ಧರ್ಮವನ್ನಾಚರಿಸಿ ದೀನ ದರಿದ್ರರ ಬಂಧುವಾಗಿ ಅವರಿಗೆ ಸಹಾಯಗಳನ್ನು ಮಾಡುವುದಾದರೆ, ಅಂಥವನು ಎಂದೆಂದಿಗೂ ದುರ್ಗತಿಗಿಳಿಯಲಾರನು. ಆತನನ್ನು ಸರ್ವರೂ ಒಳ್ಳೆಯ ಮನೋಭಾವದಿಂದ ಗೌರವಿಸುವರು. ಅದರಲ್ಲೂ ದೇಶಸೇವೆಯಂಥ ಸತ್ಕರ್ಮ ಮಾಡಿದವನನ್ನು ಎಂದೆಂದಿಗೂ ಎಲ್ಲರೂ ಆತನು ಇರುವಾಗಲೂ ಆತನ ದೇಹ ನಾಶವಾದ ಮೇಲೂ ಭಕ್ತಿಯಿಂದ ಸ್ಮರಿಸುವರು. ಉದಾಹರಣೆಗೆ ಗಾಂಧೀಜಿಯನ್ನು ಅವರು ಇರುವಾಗಲೇ ದೇವರಿಗಿಂತಲೂ ಅಧಿಕವಾಗಿ ಪೂಜಿಸುವರು, ಸ್ಮರಿಸುವರು.

ಶ್ರೀ ರಾಮತೀರ್ಥರು "ಉನ್ನತಿಯ ವಾತಾವರಣ ಸೇವೆ ಮತ್ತು ಪ್ರೇಮಗಳಿಂದಲ್ಲದೆ ಆಜ್ಞೆ ಮತ್ತು ಅಧಿಕಾರದಿಂದಾಗಲಾರದು. ಎಂದರೆ, ಸೇವೆ ಮತ್ತು ಪ್ರೇಮಗಳಿಂದಲೇ ಉನ್ನತಿ. ವಿಧಿಸುವುದೂ ಆಜ್ಞೆಮಾಡುವುದೂ ಉನ್ನತಿಯ ಮಾರ್ಗಗಳಲ್ಲ" ಎಂಬುದಾಗಿ ಹೇಳಿರುವರು. ಶ್ರೀ ವಿವೇಕಾನಂದರು

"ಜಾತಿಧರ್ಮದ ಭಾವಗಳನ್ನು ತೊರೆದು, ಯಾವ ಭೇದವನ್ನೂ ಮಾಡದೆ, ಯಾವನು ಒಬ್ಬನಾದರೂ ದೀನನಿಗೆ ಸಹಾಯ ಮಾಡುವನೋ ಅಂಥ ಸತ್ಕರ್ಮಿಯನ್ನಲ್ಲದೆ, ನಿತ್ಯವೂ ದೇವಸ್ಥಾನಕ್ಕೆ ಹೋಗಿ ಪೂಜೆಮಾಡುವುದು ತನ್ನ ದಿನದ ಕರ್ತವ್ಯವೆಂದು ತಿಳಿದು ಯಂತ್ರದಂತೆ ಪೂಜೆ ಮಾಡುವವನನ್ನು ದೇವರು ಎಂದಿಗೂ ಪ್ರೀತಿಸುವುದಿಲ್ಲ" ಎಂಬುದಾಗಿ ಹೇಳಿರುವರು. ಎಂದರೆ, ಸತ್ಕರ್ಮಿಗಳನ್ನು ಪರಮಾತ್ಮನೂ ಸಹ ಅತಿಯಾಗಿ ಪ್ರೀತಿಸುವನು. ಎಂದಮೇಲೆ ಪರಮಾತ್ಮನ ಕರುಣೆ ಸತ್ಕರ್ಮಿಯ ಮೇಲೆ ಬೀಳುವಾಗ ಆತನಿಗೆ ದುರ್ಗತಿ ಎಲ್ಲಿಂದ ಬಂತು? ಆದುದರಿಂದಲೇ ಶ್ರೀಕೃಷ್ಣ ಹೇಳಿರುವುದು—"ಸತ್ಕರ್ಮಿಗೆ ಎಂದೆಂದಿಗೂ ಸದ್ಗತಿಯೂ ಉನ್ನತಿಯೂ ಅಲ್ಲದೆ ದುರ್ಗತಿಯೂ ಅವನತಿಯೂ ಆಗಲಾರದು" ಎಂಬುದಾಗಿ.

—ಸಿ. ಜಿ. ಪರಮಶಿವಯ್ಯ.

## ೮. ಗಾಂಧೀಜಿಯೊಡನೆ ಒಂದು ಗಂಟೆ

ಗಾಂಧೀಜಿ ನನ್ನ ಬಳಿ ಬರುತ್ತಾರೆ.

ನಾನವರನ್ನು ಮಾತನಾಡಿಸ ಹೋಗುವೆ. ನನಗೆ ಮಾತೇ ಬಾರದು. ಗಾಂಧೀಜಿ ಸಿಕ್ಕರೆ ಸಾಕು, ಅವರನ್ನು ವಾದದಲ್ಲಿ ಕೆಡಹುವೆ ಎನ್ನುತ್ತಿದ್ದ ನಾನು, ಅವರೇ ಬಂದು ನನ್ನ ಮುಂದೆ ನಿಂತಿದ್ದಾರೆ, ಮಾತಾಡಲರಿಯೆ.

ಕೆಲವು ನಿಮಿಷ ಹೀಗೆಯೇ. ಕೊನೆಗೆ ಆ ವ್ಯಕ್ತಿ ನುಡಿಯುತ್ತದೆ: "ಮಾತಾಡು. ಭಯವೇಕೆ?" ಆ ಮಾತಿನೊಡನೊಂದು ಸ್ಫೂರ್ತಿ ಬಂತು. ನಾನೆಂದೆ "ಬಾಪೂಜೀ!"

"ಏನು?"

"ಮೊನ್ನೆ ತಾನೆ ಮಹೋಪವಾಸ ಮಾಡಿದಿರಲ್ಲಾ, ಅದರ ಫಲವೇನು ಬಂತು?"

ಬಾಪೂಜಿ ನಕ್ಕರು: "ಫಲವೆಂದರೇನು?" ಎಂದರು.

"ಈ ಉಪವಾಸದಿಂದ ನಿಮ್ಮೆಲ್ಲರ ಬಿಡುಗಡೆಯಾಗುವುದೆಂದು ದೇಶ ಹಂಬಲಿಸಿತ್ತು."

"ಹಾಗಾದರೆ ಬಿಡುಗಡೆಯೇ ಫಲವೆಂದೆಣಿಸಿದೆಯಾ? ನನ್ನ ಸುತ್ತ

ನೂರಾರು ಪಾತಕಗಳ ರಾಶಿ ತುಂಬಿತ್ತು. ಅಮೆರಿಯವರ ಹೇಳಿಕೆ, ಅಮೆರಿಕದ ಕೇಳಿಕೆ, ಭಾರತ ಸರ್ಕಾರದ 'ಐವತ್ತು ಸತ್ಯಗಳು', ಚಳುವಳಿಯ ಪಾತಕದ ಹೊಣೆ, ಇವೆಲ್ಲಾ ನನ್ನ ಸುತ್ತುವರಿದು ನಿಂತು ನಾನೇ ಪಾತಕದ ಕೂಪವೆಂದು ಇಂಗ್ಲೆಂಡಿನ, ಅಮೆರಿಕದ ಜನ ತಿಳಿದರು. ಈ ಪಾತಕದ ರಾಶಿಯಿಂದ ನಾನೆದ್ದು ಬರಲೆ? ಇಲ್ಲವೆ 'ಪಾತಕದ ಕೂಪ'ವಾಗೇ ಉಳಿದಿರಲೆ? ಈ ಪಾತಕದ ರಾಶಿಯನ್ನು ಸುಟ್ಟು ಬೂದಿಮಾಡು ಎಂದಿತು ಮನಸ್ಸು. ಅದೊಂದೇ ಧ್ಯೇಯ ದಿಂದ ಈ ಉಪವಾಸ ಮಾಡಿದೆ. ನನ್ನ ಸುತ್ತಣ ಪಾಪ ಸುಟ್ಟು ಹಾರಿ ಹೋಯಿತು. ಈಗಲಾದರೂ ಅಲ್ಲಿನ ಜನ ಗಾಂಧೀ ಸತ್ಯಬೋಧ ಎಂದಾರು. ಅವನಲ್ಲ ಪಾಪಿ, ಎಂದು ತಿಳಿದಾರು. ಇದಕ್ಕಿಂತ ಫಲ ಬೇಕೆ?"

ಏನೋ ನನಗೆ ತೋಚಲಿಲ್ಲ. ಮತ್ತೆ ನಾನೆಂದೆ: "ಬಾಪೂಜೀ"

"ಏನು?"

"ಹಾಗಾದರೆ ಈ ಪಾತಕವನ್ನು ನಿಮ್ಮ ಮೇಲೆ ಹೊರಿಸಿದವರಾರು?"

"ನಾ ನಂಬಿದ ನನ್ನ ಜನ. ನಾ ಬೆವರು ಸುರಿಸಿದ ನನ್ನ ಜನ. ಯಾರ ಎದೆಯ ಮೇಲೆ ಕೈಯಿಟ್ಟು, ಅದರ ಬಡಿತವನ್ನು ಲೆಕ್ಕಿಸದೆ, ಸ್ವಾತಂತ್ರ್ಯ ಯುದ್ಧಕ್ಕೆ ಮುನ್ನುಗ್ಗಿರೆಂದು ಉಪದೇಶಿಸಿದೆನೋ ಅದೇ ನನ್ನವರು, ನನ್ನ ಅಣ್ಣ ತಮ್ಮಂದಿರು, ಬಂಧು ಭಗಿನಿಯರು ಈ ಪಾಪದ ಕೂಪವಾಗಿ ಮಾಡಿದರು ನನ್ನನ್ನು. ನಾ ಹೇಳಿದ ದಾರಿ ತಪ್ಪಿದರು. ನಾನಿತ್ತ ಉಪದೇಶ ಮರೆತರು. ಹಿಂಸೆಗೆ ಕೈ ಹಾಕಿ, ಕೊಲೆಗಡುಕತನ ನಡಸಿ, ಪಾಪಭೀತಿಯಿಲ್ಲದೆ ನನಗೆ ಆ ರಕ್ತದ ಕಲೆ ಹಚ್ಚಿದರು. ಆ ಕಲೆಯನ್ನು ಕಂಡ ನನ್ನ ಅಮೆರಿಕದ, ಇಂಗ್ಲೆಂಡಿನ ಬಾಂಧವರು ನಾನೇ ಕೊಲೆಗಡುಕ ಎಂದರು. ಅದಕ್ಕಾಗಿ ನಾನು ಪ್ರಾಯೋ ಪವೇಶ ಮಾಡಿದೆ. ನನ್ನವರು ಮಾಡಿದ ಅಪರಾಧಕ್ಕಾಗಿ ನಾನೇ ಶಿಕ್ಷಿಸಿ ಕೊಂಡೆ. ಸತ್ಯಕ್ಕಾಗಿ ಸತ್ತು ಯೇಸುಕ್ರಿಸ್ತ ಶಿಲುಬೆಯಿಂದ ಎದ್ದ. ಸತ್ಯ ಎಂದೂ ಸೋಲದು. ನಾನವನ ಮಾರ್ಗ ಅನುಸರಿಸಿದೆ. ಕೆಟ್ಟವರ ತಪ್ಪಿಗಾಗಿ ನಾನೇ ಕೆನ್ನೆಗೆ ಹೊಡೆದುಕೊಂಡೆ. ಈಗಲಾದರೂ ನನ್ನವರು ನೆನೆಸಿರಬಹುದು: ಇಂತಹ ತಪ್ಪು ಇನ್ನೆಂದಿಗೂ ಮಾಡೆವೆಂದು."

"ಹಾಗಾದರೆ ಬಾಪೂಜೀ, ನಿಮ್ಮ ವ್ರತ ಪೂರ್ಣ ಜಯಪ್ರದವಾಯಿತು. ಲೋಕ ನಿಮ್ಮನ್ನು ತಪ್ಪೆಂದ ಪಾಪಿಗಳನ್ನು ದೂಷಿಸಿತು."

"ನಾನರಿತೆ. ಮುಂದೆ ನನ್ನ ಜನ, ಭಾರತವೆಲ್ಲ 'ಅನ್ನ, ಅನ್ನ' ಎನ್ನುತ್ತಾ ನರಳಿ ಕೂಗಿಯಾರು, ಸೊರಗಿ ಸತ್ತಾರು. ನಾನವರಿಗೇನು ಮಾಡ ಬಲ್ಲೆ? ಅವರು ಮಾಡಿದ ಪಾಪ ಬಹಳವಿತ್ತು. ಭಗವಂತನಿಗೆ ಈ ಪಾಪ ಸಹಿಸದಾಯಿತು. ದೊಡ್ಡ ಅನ್ನಕ್ಷಾಮ ಕಳುಹಿಸಿದ ದೇವರು. ಆ ಪಾಪರಾಶಿ ಯಲ್ಲಿ ಒಂದು ಸಾಸಿವೆಯ ಕಾಳಿನಷ್ಟಾದರೂ ಹರಿದರೆ ನನ್ನ ಜನ ಬದುಕಿಯಾರು, ಅನ್ನ ಕಂಡಾರು ಎಂಬ ನಂಬುಗೆಯಿತ್ತು ನನಗೆ. ಆ ಸಾಸಿವೆಯ ಕಾಳಿಷ್ಟಾದರೂ ತೀರಲೆಂಬ ಬಯಕೆಯಿಂದ ಉಪವಾಸ ಮಾಡಿದೆ ನಾನು."

ಇದ್ದಕ್ಕಿದ್ದಂತೆ ಬಾಪೂಜಿ ಆವೇಶಗೊಳ್ಳುವರು. ಅವರ ಮುಖ ಕೆಂಪಾ ಗುವುದು. ಅವರ ದನಿ ಕುಂಠಿತವಾಗುವುದು. ತೀವ್ರ ವೇದನೆಯನ್ನು ತಡೆಯ ಲಾರದೆ ನುಡಿವಂತಹ ದನಿಯಲ್ಲಿ ಅವರೆನ್ನುವರು : "ಏನಾದರೂ ನನಗೆ ಶಾಂತಿ ಯಿಲ್ಲ. ನನ್ನ ಹೃದಯದ ತಳಮಳ ನಿಲ್ಲುವಂತಿಲ್ಲ."

"ಅದೇಕೆ, ಬಾಪೂಜೀ ?"

"ಹೇಗೆ ತಾನೇ ನನ್ನ ಮನಸ್ಸು ಶಾಂತವಾದೀತು, ನೀನೇ ಹೇಳು. ನನ್ನ ನಚ್ಚಿನ ಭಕ್ತರು, ಅಚ್ಚುಮೆಚ್ಚಿನ ಶಿಷ್ಯರು ಸೆರೆಮನೆಯಲ್ಲಿ ಕೊಳೆಯುತ್ತಿರುವಾಗ, ನನ್ನ ಪ್ರಾಣಾಪ್ತರು ನರಳುತ್ತಿರುವಾಗ, ನನ್ನ ನಾಡೆಲ್ಲ ಕಂದಿ, ಕುಂದಿ, ಕನಲುತ್ತಿರುವಾಗ, ನನ್ನ ಜನ ವಿಧಿಯ ದಬ್ಬಾಳಿಕೆಗೆ ಸಿಲುಕಿ ಸಾಯುತ್ತಿರು ವಾಗ ನನ್ನ ಹೃದಯ ಸಮಾಧಾನವಾಗಿ ಹೇಗೆ ತಾನೆ ಇದ್ದೀತು? ನೀನೇ ಹೇಳು."

ನಾ ಸುಮ್ಮನಿದ್ದೆ.

"ನನ್ನ ನಲವತ್ತುಕೋಟಿ ಬಾಂಧವರು ಎಲ್ಲ ಕೋಟಲೆಗಳಿಗೂ ಸಿಕ್ಕಿ ನಲುಗಿಹೋಗಿದ್ದಾರೆ. ನಮ್ಮ ಭಾರತಭೂಮಿಯ ಮೇಲೆ ಪ್ರಕೃತಿಮಾತೆ ರೊಚ್ಚಿಗೆದ್ದಿದ್ದಾಳೆ. ಎಲ್ಲಿ ನೋಡಿದರೂ ತೆರವು ; ಎತ್ತ ನೋಡಿದರೂ ಬಯಲು ; ಯಾವ ಕಡೆ ನೋಡಿದರೂ ಭೀಕರಕ್ಷಾಮ. ಬಂಗಾಳದ ಬೀದಿಬೀದಿಗಳಲ್ಲಿ ಸತ್ತವರ ಪ್ರೇತಗಳು ನನ್ನನ್ನು ಮಲಗಗೊಡವು, ಏಳಗೊಡವು, ಕೂಡಗೊಡವು. ಅಷ್ಟು ಜನ ಹೊಟ್ಟೆಗಿಲ್ಲದೆ ಸತ್ತಾಗ ನಾನು ಧೈರ್ಯವಾಗಿ, ಸುಖವಾಗಿ ಅನ್ನ ತಿನ್ನಲೇನು ? ಹಾಗೆ ನಾನು ತಿಂದ ಅನ್ನ ಎಷ್ಟು ಜನರ ಹೊಟ್ಟೆಯಿಂದ ಕಿತ್ತು ಕೊಂಡುದು, ನೀನೇ ಹೇಳು."

ಹಾಗಾದರೆ, ಸುಖವಾಗಿ ಉಂಡುಟ್ಟು ತಿರುಗುವ ನಾನು ಎಂತಹ ಪಾಪಿ ಯೆಂದೆನಿಸಿತು ನನಗೆ.

"ನಾ ಹೇಳಿದಾಗ ನನ್ನವರು ಕೇಳಲಿಲ್ಲ. ನನ್ನನ್ನೇ ದೂಷಿಸಿದರು. ಪ್ರತಿಯೊಬ್ಬರೂ ದಿನಕ್ಕೊಂದು ಮೊಳ ಬಟ್ಟೆಯನ್ನು ನೇಯಿರಿ ಎಂದಾಗ ಅವರು ನನ್ನನ್ನು ಹೀಯಾಳಿಸಿದರು. ಇಂದಾದರೋ ಅವರು ಉಡಲು ಬಟ್ಟೆಯಿಲ್ಲದೆ ಅಲೆಯುತ್ತಿದ್ದಾರೆ. ಬೆತ್ತಲೆ ಮೈ, ಬತ್ತಿದ ಹೊಟ್ಟೆ ಇಟ್ಟುಕೊಂಡು ಭೂಮಿಗೆ ಭಾರವಾಗುತ್ತಿದ್ದಾರೆ. ಇದನ್ನೆಲ್ಲಾ ನೋಡಿ ನಾನು ಹೇಗೆ ತಾನೆ ಸುಮ್ಮನಿರಲಿ?"

"ಇವೆಲ್ಲಾ ಹೇಗೆ ತಿಳಿದಿರಿ ನೀವು, ಬಾಪೂಜಿ?" ಎಂದೆ.

"ಏಕೆ, ಸೆರೆಮನೆಯಲ್ಲಿ ನನಗೆ ಸರ್ಕಾರ ಪತ್ರಿಕೆಗಳನ್ನು ಕೊಡುವುದಿಲ್ಲ ವೇನು? 'ಸ್ಟೇಟ್ಸ್‌ಮನ್' ಪತ್ರಿಕೆಯಲ್ಲಿ ಪ್ರಕಟವಾದ ಬರಗಾಲದ ಭೀಕರ ಚಿತ್ರಗಳನ್ನು ನಾನು ನೋಡಿಲ್ಲವೆಂದೆಣಿಸಿದೆಯಾ ನೀನು? ನಾನೆಲ್ಲವನ್ನೂ ನೋಡಿದ್ದೇನೆ, ಎಲ್ಲವನ್ನೂ ಓದಿದ್ದೇನೆ, ಎಲ್ಲವನ್ನೂ ಅರಿತಿದ್ದೇನೆ. ನನ್ನವರ ಹೊಟ್ಟೆ ಎಷ್ಟು ಹಸಿದಿದೆಯೋ ಅಷ್ಟೇ ನಾನೂ ಹಸಿದಿದ್ದೇನೆ. ಅವರೆಷ್ಟು ಬೆತ್ತಲೆಯೋ ನಾನೂ ಅಷ್ಟು ಬೆತ್ತಲೆಯಾಗಿದ್ದೇನೆ. ಇಲ್ಲದಿದ್ದರೆ ಈ ಕ್ಷಾಮದ ಅರಿವಾದರೂ ನನಗೆಂತು ಆಗಬೇಕು?"

"ಸೆರೆಯಲ್ಲಿ ನಿಮಗೆ ಬೇಕಾದುದು ದೊರೆತಿಲ್ಲವೆ ಬಾಪೂಜಿ?"

"ಸೆರೆಯಲ್ಲಿ ದೊರಕಲಿ, ಬಿಡಲಿ, ನನಗಂತೂ ಅದು ಬೇಡ. ನನ್ನ ಜನಕ್ಕೆ ಹಸಿದ ಹೊಟ್ಟೆಗೆ ತುತ್ತು ಬೇಕೆಂದರೆ ಅದನ್ನು ಕೊಡದಷ್ಟು ಅಸಮರ್ಥ ವಾಗಿದೆ ನಮ್ಮ ಜನ್ಮಭೂಮಿ. ಶೇಖರಿಸಿದ ಹಣವಂತರ ಕೋಠಿಗಳು ಬಡಜನರ ಹಸಿವಿನ ಜ್ವಾಲೆಗೆ ಸಿಕ್ಕಿ ಉರಿದು ಹೋಗುವವರೆಗೂ ನನಗೆಲ್ಲಿಯ ಶಾಂತಿ?"

"ಸರ್ಕಾರ ಇಂದು ಸಾಕಷ್ಟು ಕೆಲಸಮಾಡುತ್ತಿಲ್ಲವೆ, ಬಾಪೂಜಿ? ಜನಕ್ಕೆ ಆದಷ್ಟು ಮಟ್ಟಿಗೆ ಹೊಟ್ಟೆ ತುಂಬುವ ಕಾರ್ಯವನ್ನು ಕೈಕೊಂಡಿಲ್ಲವೆ?"

"ನಿಜ, ಆದರೆ ಅಷ್ಟು ಮಾತ್ರ ಸಾಲದು. ಹಸಿದ ಹೊಟ್ಟೆಗೆ ಒಣ ಸಮ್ಮೇಳನದ ಚರ್ಚೆಗಳನ್ನು ತಂದುಕೊಟ್ಟರೆ ಏನು ತಾನೆ ಆಯಿತು! ದಿನ ದಿನವೂ ವೃತ್ತಪತ್ರಿಕೆಗಳಲ್ಲಿ ಒಣ ಚರ್ಚೆಗಳನ್ನೂ ಹೇಳಿಕೆಗಳನ್ನೂ ಓದುತ್ತಾ ಇದ್ದರೆ ಬಡಬಗ್ಗರ ಹೊಟ್ಟೆ ತುಂಬುವುದೆ? ಮಾತು ಕೃತಿಯಲ್ಲಿರಬೇಕು. ಹೃದಯದಲ್ಲಿದ್ದರೆ ಸಾಲದು. ಇವೆಲ್ಲಕ್ಕಿಂತ . . . "

"ನೀವಾಗಿದ್ದರೆ ಇದಕ್ಕಾಗಿ ಏನು ಮಾಡುತ್ತಿದ್ದಿರಿ?" ಎಂದು ನಾ ಕೇಳಿದೆ.

"ನಾನೇನು ಮಾಡುತ್ತಿದ್ದೆನೋ ಈಗ ಹೇಳಿ ತಾನೇ ಪ್ರಯೋಜನವೇನು?"

"ನೀವು ಹೇಳಿದರೆ ಉಳಿದವರಿಗೆ ದಾರಿ ತೋರಿದಂತಾಗಲಿಲ್ಲವೆ, ಬಾಪೂಜಿ?"

"ಹಾಗಾದರೆ ಕೇಳು. ಹಸಿದ ಹೊಟ್ಟೆಯ ಎಲ್ಲರಿಗೂ ಒಂದು ಕೆಲಸ ಕೊಡುತ್ತಿದ್ದೆ. ನೂಲಿರೆಂದು ಹೇಳುತ್ತಿದ್ದೆ. ಧಾನ್ಯವನ್ನು ಕೂಡಿಟ್ಟು ಕೊಬ್ಬಿದ ಧನಿಕರ, ದಾಸ್ತಾನುಗಾರರ ಮನೆಯ ಬಳಿಗೆ ಹಸಿದವರನ್ನು ಗುಂಪುಕಟ್ಟಿ ಕರೆದುಕೊಂಡು ಹೋಗುತ್ತಿದ್ದೆ. 'ನಿಮಗೆ ಸಾಕಷ್ಟು ಇಟ್ಟುಕೊಂಡು ಉಳಿದುದನ್ನು ಬಡಬಗ್ಗರಿಗೆ ಹಂಚುವವರೆಗೂ ನಾವು ನಿಮ್ಮ ಮನೆ ಬಿಟ್ಟು ಕದಲೆವು. ಸತ್ತರೆ ಇಲ್ಲೇ ಸತ್ತೇವು' ಎಂದು ಪ್ರತಿಜ್ಞೆಯನ್ನು ಘೋಷಿಸಿ, ದೊಡ್ಡ ಅನ್ನ ಸತ್ಯಾಗ್ರಹ ನಡಸುತ್ತಿದ್ದೆ. ಹರಿಜನ ಸಹಾಯನಿಧಿಗೆ ಭಾರತವನ್ನೆಲ್ಲಾ ಸುತ್ತಿ ನಿಧಿ ಕೂಡಿಸಿದಂತೆ, ಈ ಆಹಾರಕ್ಕೂ ಊರೂರು ತಿರುಗಿ ಧಾನ್ಯವನ್ನು ಕೂಡಿ ಹಾಕುತ್ತಿದ್ದೆ. ಜನರು ಎದುವರೆಗೂ ಹಸಿವು ತಡೆಯಬಲ್ಲರೋ ಅದುವರೆಗೂ ಉಪವಾಸವಿದ್ದು, ಇನ್ನು ಊಟಮಾಡದಿದ್ದರೆ ಸಾಗದು ಎನಿಸಿದಾಗಲೇ ಊಟ ಮಾಡಬೇಕೆಂದು ಬೋಧಿಸುತ್ತಿದ್ದೆ. ಹೆಚ್ಚಿಗೆ ತಿಂಡಿಗಳು ಅನಾವಶ್ಯಕ, ದೇಶದ ಕಲ್ಯಾಣಕ್ಕಾಗಿ ಆಹಾರ ವಸ್ತುಗಳನ್ನು ಮಿಗಿಸಿ, ಎಂದು ಜನಕ್ಕೆ ಉಪದೇಶಿಸುತ್ತಿದ್ದೆ. ಇಂದಲ್ಲದೆ ಹೋದರೆ ನಮ್ಮ ಜನ ಆಹಾರಸಂಯಮ ಕಲಿಯುವುದಾದರೂ ಎಂದು? ಹೊಟ್ಟೆಯ ಕೂಗಿಗಾಗಿ ನನ್ನ ಜನ ನೂತ ನೂಲು, ನೇದ ಬಟ್ಟೆ ಭಾರತದ ಎಲ್ಲರಿಗೂ ಸಾಕಾಗುವಷ್ಟು ಆಗುತ್ತಿತ್ತು. ಇಂದಿನ 'ಸ್ಟ್ಯಾಂಡರ್ಡ್ ಕ್ಲಾತ್' ಗೊಂದಲವಿಲ್ಲದೆಯೇ ಯಂತ್ರಕ್ಕೆ ಹೊಟ್ಟೆ ತುಂಬಿಸದೆ, ಬಡ ಕೈಗಳಿಗೆ ಅನ್ನ ನೀಡುತ್ತಿದ್ದೆ; ಜನಕ್ಕೆಲ್ಲಾ ಬಟ್ಟೆಯೊದಗಿಸುತ್ತಿದ್ದೆ. ಆದರೆ ಅಷ್ಟೆಲ್ಲಾ ಮಾಡುವವರು ತಾನೆ ಯಾರು ಈಗ? ಅವರನ್ನು ತಾವೇ ತಾವಾಗಿ ಬಿಟ್ಟುಬಿಟ್ಟರೆ ಚಳುವಳಿಯಲ್ಲಿ ನನ್ನ ಮುಖಕ್ಕೆ ಮಂಗಳಾರತಿ ಎತ್ತಿದಂತೆ ಇದರಲ್ಲೂ ಎತ್ತಿಬಿಟ್ಟಾರು. ಅದೇ ಭಯ ನನಗೆ. ಅದೇ ಯೋಚನೆ ಸದಾ. ಇನ್ನು ನನ್ನ ಆತ್ಮಕ್ಕೆ ಸುಖವೆಲ್ಲಿಂದ ಬರಬೇಕು?"

"ನಿಜವಾಗಿಯೂ ನೀವು ದರಿದ್ರನಾರಾಯಣರು, ಬಾಪೂಜೀ"

ಬಾಪೂಜಿ ಗಹಗಹಿಸಿ ನಕ್ಕರು.

"ಅಯ್ಯೋ ಹುಚ್ಚೀ! ನಾನು ಇದುವರೆಗೂ ಹೇಳಿದುದೆಲ್ಲಾ ಬರೀ ಮಾತು. ನಾನೊಂದನ್ನೂ ಸಾಧಿಸಿಯೇ ಇಲ್ಲ. ನನ್ನ ಅಭಿಪ್ರಾಯ ನಾನು ಹೇಳುತ್ತಾ ಇದ್ದೇನೆ. ಇಷ್ಟಕ್ಕಾಗಲೇ ನಾನು 'ದರಿದ್ರನಾರಾಯಣ'ನಾಗಿ ಹೋದರೆ, ದೊಡ್ಡದಾಗಿ ಆಹಾರ ಸಮ್ಮೇಳನಗಳಲ್ಲಿ ಗಂಟೆಗಟ್ಟಲೆ ಮಾತನಾಡಿ, ಅಸಾಧ್ಯ ಚರ್ಚೆಗಳನ್ನು ನಡಸಿ, ಸೂಚನೆಗೊಂದು ಉಪಸೂಚನೆ, ಗೊತ್ತುವಳಿಗೊಂದು ತಿದ್ದುಪಡಿ ತಂದು ಪತ್ರಿಕೆಗಳ ಅಂಕಣಗಳನ್ನೆಲ್ಲಾ ತುಂಬುವ ಮಹನೀಯರುಗಳೆಲ್ಲಾ 'ಸರ್ವಶಕ್ತ ಭಗವಂತ'ರೇ ಆಗಬೇಕಲ್ಲವೆ? ನನಗೆ ಈ ಬಿರುದು ಬಾವಲಿಗಳ ವರದಿ ಬೇಕಾಗಿಲ್ಲ. ನಾನಿಂದು ಅಖಂಡ ಭಾರತವನ್ನೆಲ್ಲಾ ಬೇಡುತ್ತಿರುವುದು ಒಂದು ತುತ್ತು ಅನ್ನ, ಒಂದು ಮೊಳ ಬಟ್ಟೆ. ನನ್ನ ಜನಕ್ಕಾಗಿ ನಾನಿದನ್ನು ಬೇಡುತ್ತಿದ್ದೇನೆ. ಅವರಿಗೆ ಇಂದು ನಿಲ್ಲಲು ನೆಲೆಯಿಲ್ಲ, ತಿನ್ನಲು ಅನ್ನವಿಲ್ಲ, ಉಡಲು ಬಟ್ಟೆಯಿಲ್ಲ, ಮಲಗಲು ತಾವೇ ಇಲ್ಲ. ಅವರಿಂದು ಪ್ರವಾಹಗಳಲ್ಲಿ ಕೊಚ್ಚಿಹೋಗುತ್ತಿದ್ದಾರೆ, ಬೆಂಕಿಯಲ್ಲಿ ಭಸ್ಮವಾಗುತ್ತಿದ್ದಾರೆ, ಕ್ಷಾಮದಲ್ಲಿ ಪುಡಿಪುಡಿಯಾಗಿದ್ದಾರೆ, ಮನೆಗಳು ಕುಸಿದು ಬಿದ್ದು ಹಾಗೆಯೇ ಮಣ್ಣುಕಂಡಿದ್ದಾರೆ. ಇಷ್ಟಾದರೂ ರಕ್ತದ ಕೋಡಿಯಲ್ಲಿ ಮಿಾಯುವ ಅವರ ಚಪಲ ತಪ್ಪಿಲ್ಲ. ನಾನು ನನ್ನ ಜೀವಮಾನವೆಲ್ಲಾ ಬೋಧಿಸುತ್ತಾ ಬಂದಿರುವ ನೀತಿ ಅವರಿಗೆ ರುಚಿಸಿಲ್ಲ. ಎಲ್ಲಿ ನನ್ನವರಿರುವರೆಂಬ ಭರವಸೆಯಿತ್ತೋ ಅಲ್ಲೆಲ್ಲಾ ನನ್ನವರು ಬೇರೆಯವರಾಗುತ್ತಿದ್ದಾರೆ. ಯಾದವೀ ಕಲಹದಲ್ಲಿ ಪಾಲುಗೊಂಡಿದ್ದಾರೆ. ನನ್ನ ಮುಖಕ್ಕೆ ರಕ್ತವೆರಚುತ್ತಿದ್ದಾರೆ. ನನ್ನ ಹೃದಯ ಇದನ್ನೆಲ್ಲಾ ಕಂಡು ಕೇಳಿ ಶಾಂತವಾಗಿರುವುದೆಂದರೆ ಹೇಗೆ ತಾನೆ ಸಾಧ್ಯ?"

"ಎಲ್ಲಿ?" ಎಂದೆ, ನಾನು ಬೆಚ್ಚಿಬಿದ್ದು.

"ಅಹಮದಾಬಾದಿನಲ್ಲಿ ನನ್ನವರು ಹೇಗೆ ಕಾದಿ ಮಡಿದಿದ್ದಾರೆ ನೋಡು. ಹಿಂದೂ ಮುಸ್ಲಿಂ ಜಗಳದಲ್ಲಿ ಎಷ್ಟೊಂದು ಜನ ರಕ್ತದ ಕೋಡಿ ಹರಿಸಿದ್ದಾರೆ, ನೆನಸಿಕೊ. ಇನ್ನು ಇಂತಹವರನ್ನು ನನ್ನವರು ಎಂದು ಹೇಗೆ ತಾನೇ ಎನ್ನಲಿ? ನನ್ನವರಲ್ಲ ಎಂದು ಹೇಗೆ ತಾನೆ ದೂರವುಳಿಯಲಿ? ನನ್ನ ದೇಶ ಏಕೆ ಹೀಗಾಯ್ತು? ದಾಸ್ಯದ ಒತ್ತಡವೊಂದೆಡೆ, ಶತ್ರುವಿನ ಧಾಳಿ ಮತ್ತೊಂದೆಡೆ, ಕ್ಷಾಮದ ಬಾಧೆಯಿನ್ನೊಂದೆಡೆ, ಪ್ರವಾಹದ ಹಾವಳಿಗಳು ಹಲವೆಡೆ, ಮಳೆಯ ಅನಾಹುತಗಳು ಬೇರೊಂದೆಡೆ, ಅಂತಃಕಲಹಗಳು ಎಲ್ಲೆಡೆ— ಹೀಗೆಒಂದೊಂದೂ

ನನ್ನ ದೇಹವನ್ನು ಕತ್ತಿಯಿಂದ ತಿವಿಯುತ್ತಿದೆಯಲ್ಲಾ, ಇವೆಲ್ಲಾ ಸಹಿಸಿಕೊಂಡು ಶಾಂತವಾಗಿರಲೇನು ನಾನು?"

"ಬಾಪೂಜೀ, ಇದು ನಮ್ಮ ದುರದೃಷ್ಟ. ನಿಮ್ಮಂತಹ ಲೋಕನಾಯಕರನ್ನು ಪಡೆದೂ ಸಹ ನಾವು ಈ ದುರವಸ್ಥೆ ಪಡಬೇಕೆಂದರೆ ಮಹಾ ಪಾಪಿಗಳು ನಾವು. ಹೀಗೆಂದು, ಬಾಪೂಜೀ, ನೀವು ನಮ್ಮ ಕೈಬಿಡುತ್ತೀರಾ?"

"ಕೈಬಿಡುವುದಕ್ಕಾಗಿಯಲ್ಲ ನಾನು ಹುಟ್ಟಿರುವುದು. ನನ್ನ ಜನ್ಮವನ್ನೆಲ್ಲ ಸೇವಕನಂತೆ ಸವೆಸಬೇಕೆಂದು ಇಚ್ಛಿಸಿದ್ದೇನೆ. ಎಲ್ಲ ಸೇವಕರಲ್ಲೂ ಸೇವಕನೆನಿಸಿ...."

"ಎಲ್ಲ ಮಹಾತ್ಮರಲ್ಲೂ ಮಹಾತ್ಮರೆನಿಸಿ...." ಎಂದೆ, ನಾನು.

"....ಹಾಗೆನ್ನಬೇಡ....ಎಲ್ಲರ ಪಾಪಕ್ಕಾಗಿ ನರಳಿ, ದೇವನ ಕ್ಷಮಾಪಣೆಯನ್ನು ದೇಶಕ್ಕೆ ದೊರಕಿಸಿಕೊಡುವುದೇ ನನ್ನ ಅಭೀಷ್ಟ. ಅದು ನೆರವೇರಿದರೆ...."

"ದೇಶವೇ ಉದ್ಧಾರವಾಗುವುದು ಅಲ್ಲವೆ, ಬಾಪೂಜಿ?"

"ಅಷ್ಟರಿಂದ ಮಾತ್ರ ಉದ್ಧಾರವಾಗದು, ನನ್ನ ನಾಡು. ಅದು ಇಂದಲ್ಲ, ನಾಳೆ ಸ್ವಾತಂತ್ರ್ಯದ ಕಹಳೆ ಊದಲೇ ಬೇಕು. ಸ್ವಾತಂತ್ರ್ಯ ಸಂಗರದಲ್ಲಿ ನಾವು ಗೆಲ್ಲಲೇ ಬೇಕು...."

"ಮತ್ತಾವ ಸ್ವಾತಂತ್ರ್ಯ ಸಂಗರ, ಬಾಪೂಜೀ? ಹೋದ ಸಲದ ಸ್ವಾತಂತ್ರ್ಯ ಸಂಗರವೇ ನಿಮ್ಮ ಜೀವಮಾನದಲ್ಲಿ ಕೊನೆಯ ಸಂಗ್ರಾಮವೆನ್ನುತ್ತಿದ್ದಿರಲ್ಲಾ, ಬಾಪೂಜೀ!"

"ಹೌದು, ಅಲ್ಲವೆಂದವರಾರು? ಅಥವಾ ಆ ಸಂಗ್ರಾಮ ಕೊನೆಗಂಡಿತೆಂದವರಾರು? ಅದು—ನನ್ನ ಜೀವಮಾನದಲ್ಲಿ ಮಾತ್ರವೇ ಅಲ್ಲ, ದೇಶದ ಜೀವಮಾನದಲ್ಲೂ ಅಷ್ಟೆ, ಕೊನೆಯ ಸಂಗ್ರಾಮ. ಮತ್ತೊಂದು ಹೊಸ ಸಂಗ್ರಾಮವೇನೂ ಬೇಕಾಗಿಲ್ಲ. ಹಿಂದಿನದೇ ಮುಂದುವರಿಯುತ್ತದೆ, ಅಷ್ಟೆ. ಎಂದರೆ ಈ ಸಲ ಅದರ ರೀತಿ ಹೊಸದಾದೀತು, ಅದರ ನೀತಿ ಹೊಸದಾದೀತು. ದೇಶವೊಂದೇ . . . ಯುದ್ಧವೊಂದೇ . . . ಸ್ವಾತಂತ್ರ್ಯ ಸಹಾ ಒಂದೇ."

"ನೀವು ಪುನರ್ಜನ್ಮ ಬಯಸುತ್ತೀರಾ, ಬಾಪೂಜೀ?"

"ಅದೇಕೆ ಬಯಸಲಿ? ನಾನು ಹಿಂದೂ, ನಾನು ಮೋಕ್ಷಾಭಿಲಾಷಿ. ಮತ್ತೊಮ್ಮೆ ಹುಟ್ಟುವುದನ್ನು ನಾ ಬಯಸೆನು."

"ಇಲ್ಲ ಬಾಪೂಜೀ, ದೇಶದ ಹಿತಕ್ಕಾಗಿ, ರಾಷ್ಟ್ರದ ಕಲ್ಯಾಣಕ್ಕಾಗಿ, ವಿಶ್ವದ ಸೌಖ್ಯಕ್ಕಾಗಿ, ನೀವು ಮತ್ತೊಮ್ಮೆ ಜನಿಸಲೇಬೇಕು. ನಾವು ಪಾಮರರು. ಈ ಜನ್ಮದಲ್ಲಿ ನಾವು ನಿಮ್ಮನ್ನು ಪೂರ್ತಿಯಾಗಿ ಅನುಸರಿಸಲು ಶಕ್ತರಾಗಲಾರೆವು. ನಮ್ಮ ನಾಡು ಸ್ವತಂತ್ರವಾಗಿ, ನಾವದರ ಸತ್ಪ್ರಜೆಗಳಾಗಿ ಮುಂದುವರಿಯಬೇಕಾದರೆ ನೀವು ಮತ್ತೊಮ್ಮೆ ನಮ್ಮ ನಾಡಿನಲ್ಲೇ ಜನಿಸಿ, ಸ್ವತಂತ್ರರಾದ ಭಾರತೀಯರನ್ನು ಸನ್ಮಾರ್ಗದಲ್ಲಿ ನಡಸಬೇಕು. ಅಷ್ಟಲ್ಲದೆ ನಮ್ಮನ್ನು ಕೈಬಿಟ್ಟರೆಂದರೆ ನಾವಂತೂ ಮುಂಬರಿದು ಜಗತ್ತಿನಲ್ಲಿ ನಮ್ಮ ಸ್ಥಾನಮಾನಗಳನ್ನು ರಕ್ಷಿಸಿಕೊಳ್ಳುವ ಆಸೆ ಇಲ್ಲವೇ ಇಲ್ಲ. ಇದೊಂದು ದೇಶದ ಕೋರಿಕೆ, ಅವಶ್ಯಕತೆ."

"ಇಲ್ಲ, ನನ್ನ ಈ ಜೀವಮಾನದಲ್ಲೇ ಸ್ವತಂತ್ರ ಭಾರತವನ್ನು ಕಂಡೇನು ನಾನು. ಅವರನ್ನು ಸ್ವರ್ಣಪಥದಲ್ಲಿ ನಡೆಸೇನು. ರಾಷ್ಟ್ರದ ನಿಜವಾದ ಸೇವಕನೆನಿಸಿಕೊಂಡೇನು. ನನ್ನ ಬೋಧನೆಯನ್ನು ನನ್ನವರೆಲ್ಲಾ ಕೇಳಿದರೆ ಒಂದೇ ದಿನದಲ್ಲಿ ನಾವು ಏನುಬೇಕಾದರೂ ಆದೇವು. ಆದರೆ ರಾಷ್ಟ್ರದ ದುರದೃಷ್ಟ. ನಾವಿನ್ನೂ ಹಾಗೆ ಆಗಿಲ್ಲ. ಆ ಕಾಲ ಇನ್ನೇನು ದೂರವಿಲ್ಲ. ಹತ್ತಿರ ಬರುತ್ತಿದೆಯೆಂದೇ ನನ್ನ ನಂಬಿಕೆ."

ಆವೇಶಪೂರಿತರಾಗಿ ಗಾಂಧೀಜಿ ಮಾತನಾಡಿ ತುಸುಹೊತ್ತು ಮೌನವಾಗಿ ಕೂಡುವರು. ಅನಂತರ "ಈಗಾಗಲೇ ನಾ ಬಂದು ಒಂದು ಗಂಟೆಯಾಗಿರಬಹುದು. ಬರುತ್ತೇನೆ" ಎಂದು ಹೇಳಿ ಹೊರಡನಿಲ್ಲುವರು.

"ತಮ್ಮ ದರ್ಶನ ಭಾಗ್ಯ ಮತ್ತೆಂದು ?" ಎನ್ನುವೆ.

"ಸ್ವತಂತ್ರ ಭಾರತದಲ್ಲಿ!" ಎಂದು ಉತ್ತರ ಬರುವುದು.

ಆ ದನಿಯನ್ನಾಲಿಸಿ ಅನುಸರಿಸುವ ಹೊತ್ತಿಗಾಗಲೇ ಅಗಾಖಾನ್ ಅರಮನೆಯಲ್ಲಿ ಅದು ಮಾರ್ದನಿಗೊಡುವುದು.

**ಹಾ. ರಂ. ನಾಗೇಶರಾವ್.**

## ೯. ಯಾವ ಸಿದ್ಧಿಗೆ ಏನು ಸಾಧನೆ ?

ನನಗೆ ಇಂಥದು ಬೇಕೆಂದು ನಿರ್ದಿಷ್ಟವಾಗಿ ಬಗೆದು ಅದಕ್ಕಾಗಿ ದುಡಿದರಲ್ಲವೆ ಅದು ಕರಗತವಾದೀತು ? ದುಡಿಮೆಯೆಲ್ಲ ಸಾರ್ಥಕವಾದೀತು ? ಸದ್ಯಕ್ಕೆ

ಉದ್ದೇಶ ಸಾಧನೆಯಾಗದಿದ್ದರೂ ನಾನು ಮಾಡುವುದೆಲ್ಲ ಅದರ ಬಗೆಗೇ ಆದೀತು? ಆದ್ದರಿಂದ 'ನನಗೆ ಬೇಕಾಗಿರುವುದೇನು? ನನ್ನ ಬಾಳು ಗುರಿ ಯುಳ್ಳದ್ದೆ? ಮಾಡುವ ಕೆಲಸಕ್ಕೂ ಬಯಸುವ ಭಾಗ್ಯಕ್ಕೂ ಏನಾದರೂ ಸಂಬಂಧವಿದೆಯೆ? ಅದರ ಬಗ್ಗೆ ನಾನು ಜಾಗೃತನೆ?' ಎಂದು ತಿಳಿಯಬೇಕಾಗಿದೆ.

ನನ್ನ ಬಯಕೆ ಈಗ ಬದಲಿಸಿದೆ. ಹುಡುಗನಾಗಿದ್ದಾಗ ಒಂದು ವಿಧದ ಆಸೆ! ಕಿಂಚಿತ್ತು ವಿಕಾಸವಾದಾಗ ಒಂದು! ಹೀಗೆ ಬೇರೆ ಬೇರೆಯಾಗಿದೆ ನನ್ನ ಬಯಕೆ. ಆದರೆ ಈಗ ನನಗೆ ಬೇಕೆನ್ನಿಸುವ ಭವಿಷ್ಯದ ಸ್ವರೂಪವೇ ಬೇರೆ. ಇದು ಕಾಲಾನಂತರ ಬೇರೆ ರೂಪನ್ನು ತಾಳಬಹುದಾದರೂ ಈಗ ಬಯಸುವ ಭವಿಷ್ಯಕ್ಕೆ ಅಧ್ಯಾತ್ಮದ ತಳಹದಿಯಿದೆ. ಜೀವನದ ನಿಜವಾದ ನಿತ್ಯವಾದ ಗುರಿ ಎಂದರೆ ಅದೇ. ಆಗಾಗ ಮನಸ್ಸು ಮಂಕುತನದಿಂದ ತನ್ನನ್ನು ತಾನು ಮರೆತು ಮಣ್ಣು ಮುಕ್ಕಹೋದರೂ ಅದಕ್ಕೆ ಕಡೆಯ ಶರಣು ಎಂದಿಗೂ ಅಧ್ಯಾತ್ಮವೆ. ಆದ್ದರಿಂದ ನನಗೆ ಬೇಕಾದ ಭವಿಷ್ಯ ಎಂದರೆ ಪ್ರಪಂಚದ ದೃಷ್ಟಿಯಿಂದ ಒಂದು ಜೀವನಮಾರ್ಗವಾದರೂ ಅದು ಅಧ್ಯಾತ್ಮದ ಗುರಿಯ ಸಾಧನೆಗೆ ಸಹಕಾರಿ ಯಾಗಿರಬೇಕು. ಬಯಸುವುದು ಹಾಗೆ. ನಾನು ಬಯಸಿದ್ದೆ ದೊರೆಯುವುದೆಂದು ಹೇಳಲುಂಟೆ, ಈ ಪ್ರಪಂಚದಲ್ಲಿ? ನಾನು ಮಹಾರಾಜನಾಗಬಯಸಬಹುದು. ಆಗಲು ಸಾಧ್ಯವೆ? ಈ ಪ್ರಪಂಚದಲ್ಲಿ ಏನಾದರಾಗಲಿ, ಜೀವನಕ್ಕೆ ಅಂತಿಮ ಅಧ್ಯಾತ್ಮ ಗುರಿಯೊಂದಿರಬೇಕು. ವಿರೋಧ ಸನ್ನಿವೇಶಗಳು ಬರುವುದು ಸಹಜ. ಅವು ಬಂದರೇ ಮನುಷ್ಯನಿಗೆ ಶಕ್ತಿ. ಬಂದಾಗ ಅವುಗಳನ್ನು ಗೆದ್ದು, ಗುರಿಯನ್ನು ಸಾಧಿಸಬೇಕೆಂಬುದು ಸಂಕಲ್ಪ. ಇಷ್ಟು ಸ್ಥೂಲವಾಗಿ.

"Every soul is potentially divine" ಎಂಬ ಘೋಷಣೆಯ ಲ್ಲಿಯೂ "You are individual God and he is Universal God" ಎಂಬ ವಾಣಿಯಲ್ಲೂ ನನಗೆ ನಂಬಿಕೆ ಇದೆ. ಎಂದರೆ, ದೇವರೆ ಎಲ್ಲದರಲ್ಲೂ ಎಲ್ಲೆಲ್ಲೂ ಇರುವಂತೆ ನನ್ನಲ್ಲಿಯೂ ಇದ್ದಾನೆ. ದೇವರು ನನ್ನಲ್ಲಿರುವನೆಂದರೆ ಎಲ್ಲವೂ ನನ್ನಲ್ಲಿದೆಯೆಂದಾಯಿತು. ಈ ನಂಬಿಕೆಯನ್ನು ದೃಢಪಡಿಸಿ ಅವನ ಇರವನ್ನು ಅನುಭವರೀತ್ಯಾ ಸಾಧಿಸಬೇಕೆಂಬುದೇ ಗುರಿ. ಈ ಆಸೆಯೇ ಜೀವನವನ್ನು ಮುಂದಕ್ಕೆ ಎಳೆಯುವ ಯಂತ್ರ. ಹೀಗೆ ನಾನು ಹೇಳುವುದಕ್ಕೂ ನನ್ನ ಪ್ರಸ್ತುತ ಜೀವನಕ್ಕೂ ಅರ್ಥಾರ್ಥ ಸಂಬಂಧವೇ ಕಾಣಿಸದಲ್ಲವೆ? ಹೌದು;

ಅದು ಕಠೋರ ಸತ್ಯ. ಆ ತತ್ತ್ವದಲ್ಲಿ ನಂಬಿಕೆಯಿದ್ದರೂ ಸದ್ಯಕ್ಕೆ ನನ್ನ ಜೀವನ ಸರದಾರರ ಕೈಲಿದೆ. ರಾಜನನ್ನು ಕೈಗೊಂಬೆಯಾಗಿ ಮಾಡಿಕೊಂಡು ಸ್ವಾರ್ಥವನ್ನು ಸಾಧಿಸುತ್ತಿದ್ದಾರೆ. ಅವರವರಲ್ಲೆ ಕಾದಾಟ. . ಎಲ್ಲೆಲ್ಲೂ ಅಶಾಂತಿ. ರಾಜನು ಸರದಾರರ ಹಿಂದೆ ಇದ್ದರೂ ಶಾಂತವಾಗಿ ಅವರನ್ನು ಕುಗ್ಗಿಸುತ್ತಿದ್ದಾನೆ. ತನಗೆ ಶರಣಾಗುವಂತೆ ಮಾಡಿಕೊಳ್ಳುತ್ತಿದ್ದಾನೆ. ಅವರ ವರಲ್ಲೆ ಕಾದಾಡಿ ಬೇಸತ್ತು ರಾಜನನ್ನು ಮಧ್ಯಸ್ಥಿಕೆಗೆ ಕರೆದು ಅವನಿಗೆ ಎಲ್ಲರೂ ಅಧಿಕಾರ ಒಪ್ಪಿಸುವ ಕಾಲ ಇಂದಲ್ಲ, ಮುಂದಾದರೂ ಬಂದೇ ತೀರುವುದು. ಆದರೆ ಸದ್ಯಕ್ಕೆ ಅವರಲ್ಲಿ ಯಾರಾದರೂ ಏನಾದರೂ ಬೇಕೆಂದಾಗ ರಾಜನು 'ಏಕೆ ಬೇಕು? ಅದಿಲ್ಲದೆ ಇರಲು ಸಾಧ್ಯವಿಲ್ಲವೆ!' ಎಂದು ಪ್ರಶ್ನಿಸುವಷ್ಟು ಬಲಯುತನಾಗಿದ್ದಾನೆ. ಈ ಮಧ್ಯೆ ಸ್ವಭಾವ, ಸನ್ನಿವೇಶ, ವಾಸನೆ ಮುಂತಾದ ಪಾಳೆಯಗಾರರ ಹಾವಳಿ ಬೇರೆ. ರಾಜ ಸರ್ವಶಕ್ತನಾಗಿ ಎಲ್ಲರನ್ನೂ ತನ್ನ ಪದತಲದಲ್ಲಿಟ್ಟು ಶಾಂತಿಯನ್ನು ನೆಲೆಗೊಳಿಸಿ ರಾಜ್ಯವಾಳುವ ಕಾಲ ಬರಲಿ! ಮನೋರಾಜ್ಯದಲ್ಲಿ ಈ ಶಾಂತಿಸ್ಥಾಪನೆ ಆದ ಮೇಲೆಯೇ ಹಿರಿಯ ಧ್ಯೇಯ ಸಾಧನೆಗಳು ಸಾಧ್ಯ.

ಪ್ರಪಂಚದ ದೃಷ್ಟಿಯಿಂದ ನಾನು ಕಲ್ಪಿಸಿಕೊಂಡಿರುವ ಭವಿಷ್ಯ ಎಂದರೆ ಸಾತ್ವಿಕ ಜೀವನಕ್ಕೆ ಅನುಕೂಲವಾಗುವ, ನನ್ನ ಧ್ಯೇಯಸಾಧನೆಗೆ ಅನುಕೂಲಿಸುವ ಒಂದು ವೃತ್ತಿ. ಸದ್ಯದಲ್ಲೆ ಸ್ಥಾಪಿತವಾಗಲಿರುವ ಆಶ್ರಮವೊಂದರಲ್ಲಿ ನನಗೆ ತಿಳಿದಮಟ್ಟಿಗೆ ವಿದ್ಯಾರ್ಥಿಗಳಿಗೆ ಪಾಠ ಹೇಳುವ ಕೆಲಸಕ್ಕೆ ಸೇರಬೇಕೆಂದಿರುವೆನು. ಆಶ್ರಮವೆಂದರೆ ಪೂರ್ಣವಾಗಿ ಪುರಾತನ ರೀತಿಯದಲ್ಲ; ಇಂದಿನ ಇಂಗ್ಲಿಷ್ ವಿದ್ಯಾಭ್ಯಾಸಕ್ರಮವನ್ನು ಅನುಸರಿಸಿದರೂ ನಮ್ಮ ಸಂಸ್ಕೃತಿ, ನಮ್ಮ ಧರ್ಮಗಳ ತಳಹದಿಯ ಮೇಲೆ ಅದು ನಿರ್ಮಿತವಾಗಲಿದೆ. ಪ್ರಯೋಗಶಾಲೆಯಲ್ಲಿ ವಿಜ್ಞಾನಿ ಪ್ರಯೋಗಗಳನ್ನು ದಿನದಿನವೂ ಹೊಸಹೊಸದಾಗಿ ನಡಸಿ ಹೊಸಹೊಸ ಗುಟ್ಟನ್ನು ತಿಳಿಯುವಂತೆ ಶಾಂತವಾದ ಯೋಗಶಾಲೆಯಲ್ಲಿ ಏಕಾಂತವಾಗಿ ಕುಳಿತು ಅಂತರ್ಮುಖಿಯಾಗಬೇಕು. ಕಂಡುಂಡ ಸತ್ಯವನ್ನು ಆಸೆಯುಳ್ಳವರಿಗೆ ತಿಳಿಸಬೇಕು.

ಇನ್ನು ಆ ಭವಿಷ್ಯದ ಸಿದ್ಧಿಗಾಗಿ ನಾನು ಮಾಡುತ್ತಿರುವ ಸಾಧನೆ ಏನು? . . . ಈ ಚುಕ್ಕಿಗಳ ಅರ್ಥ? ಒಂದು ಎತ್ತು ಮುಂದುವರಿದು

ಇನ್ನೊಂದು ಹಿಂದೆ ಬೀಳಬಾರದು; ಸತ್ಯಕ್ಕಿಂತ ಮಾತು ಮುಂದಾದೀತು ಎಂದು ತಡೆ.

ನಾನು ನಡಸುತ್ತಿರುವ ವಿದ್ಯಾಭ್ಯಾಸ ಈ ಬಗೆಗೆ ಒಂದು ಸಾಧನವೆ? ಸಂಪೂರ್ಣವಾಗಿ ಅಲ್ಲವೆನ್ನುವಂತಿಲ್ಲ. ಈ ವಿದ್ಯಾಭ್ಯಾಸಕ್ರಮ ನ್ಯೂನತಾ ಯುಕ್ತವಾದರೂ ಇದರಲ್ಲಿ ದೋಷಗಳನ್ನು ಕಾಣಬಹುದೇ ವಿನಾ ಸದ್ಯಕ್ಕೆ ಇದನ್ನು ಪೂರ್ಣವಾಗಿ ಬಿಡುವಂತಿಲ್ಲ ಎಂದು ನನ್ನ ಮಟ್ಟಿನ ಭಾವನೆ. ಇರುವಷ್ಟು ಕಾಲದಲ್ಲಿ ನನಗೆ ಬೇಕಾದ ವಿಷಯ ತಿಳಿಯುವ ಅವಕಾಶ ಇದೆ. ಅದಷ್ಟನ್ನೂ ಪೂರ್ತಿಯಾಗಿ ನಾನು ಉಪಯೋಗಿಸುತ್ತಿಲ್ಲ. ಅಂತೂ ಈ ವಿದ್ಯಾಭ್ಯಾಸದ ಅಂತಿಮಗುರಿ ಎಂದರೆ ಪದವೀಪತ್ರ. ಈ ಮಧ್ಯೆ ನಾನು ಆತ್ಮದ ಬೆಳೆವಣಿಗೆಗೆ ಕಿಂಚಿತ್ತಾಗಲಿ ನಡಸುವ ಕೆಲಸವೇ ಶಾಶ್ವತ. ಆದರೆ ಮಾಡುತ್ತಿರುವ ಅಭ್ಯಾಸ ಅಲ್ಪವಾಗಿದೆ. ಅದರ ಸುಖವಂತೂ ಕ್ಷಣಮಾತ್ರ ಮಿಂಚಿ ಮಾಯವಾಗುವುದಾಗಿದೆ. ಅವು ಅಮೃತಗಳಿಗೆಗಳೆಂದೇ ಹೇಳಬೇಕು. ಆ ಗಳಿಗೆಗಳು ಯಾಮಗಳಾಗಿ, ಯಾಮಗಳು ದಿನಗಳಾಗಿ, ದಿನಗಳು ವರ್ಷಗಳಾಗಬಾರದೆ?

—ಬಿ. ಎಸ್. ರಾಮಚಂದ್ರರಾವ್.

## ೧೦. ನನ್ನ ಎರಡು ಸ್ವತಂತ್ರ ಶಕ್ತಿಗಳು

ನನಗೆ ನಾನೇ ಪ್ರಶ್ನೆ ಹಾಕಿಕೊಳ್ಳುತ್ತೇನೆ, "ನನಗೆ ಸ್ವತಂತ್ರವಾದ ವಿಚಾರಶಕ್ತಿ ಇದೆಯೇ?" ಎಂದು. "ಇದೆ" ಎಂದು ನನ್ನ ಮನಸ್ಸೇನೋ ನಿಸ್ಸಂದೇಹವಾಗಿ ಹೇಳುತ್ತಿದೆ. ಆದರೆ ಅದು ಎಷ್ಟು ಮಟ್ಟಿಗೆ ಸತ್ಯ? ನನಗೇನೋ ಸ್ವತಂತ್ರ ವಿಚಾರಶಕ್ತಿ ಇದೆಯೆಂದು ಹೇಳಬಲ್ಲೆ. ಏಕೆಂದರೆ ಎಷ್ಟೋ ಸಂದರ್ಭಗಳಲ್ಲಿ ಎಷ್ಟೋ ವಿಷಯಗಳ ಮೇಲೆ ಸ್ವತಂತ್ರವಾಗಿ ವಿಚಾರ ಮಾಡಿದ್ದೇನೆ. ಕಳೆದ ವರುಷದ ಮಹಾಮುಷ್ಕರದ ವಿಷಯದಲ್ಲಿ ನಾನು ಮಾಡಿದ ಸ್ವತಂತ್ರ ವಿಚಾರವನ್ನು ತಿಳಿಸುತ್ತೇನೆ: ಗಾಂಧೀಜಿ ಮತ್ತು ಇತರ ರಾಜಕೀಯ ಮುಖಂಡರುಗಳ ದಸ್ತಗಿರಿಯಾದ ಮಾರನೇ ದಿನವೆ ನಾವೆಲ್ಲರೂ ಶಾಲೆಗೆ ಬರದೆ ಮುಷ್ಕರ ಹಿಡಿದೆವು. ಗಾಂಧೀಜಿ ಮತ್ತು ಇತರ ಮುಖಂಡರುಗಳ ಬಿಡುಗಡೆಯವರೆಗೂ ನಾವು ಶಾಲೆಯ ಹೊಸಲು ತುಳಿಯುವುದಿಲ್ಲ ಎಂದು

ಪ್ರತಿಜ್ಞೆ ಮಾಡಿದೆವು. ಅಷ್ಟೇ ಅಲ್ಲ, ಗಾಂಧೀಜಿಯವರು ಹಾಕಿಕೊಟ್ಟ ಕೆಲವು ಕಾರ್ಯಗಳನ್ನು ಮಾಡಬೇಕೆಂದೂ ನಿರ್ಧರಿಸಿದೆವು. ಅಂತೂ ಕಾಲೇಜನ್ನೋ ಬಿಟ್ಟು ಮನೆಗೆ ಬಂದೆವು. ದಿನಗಳು ಉರುಳುತ್ತಿದ್ದುವಾದರೂ ನಾವು ಮಾಡುತ್ತಿದ್ದ ಕೆಲಸವಾದರೂ ಏನು ? ದಾರಿಯಲ್ಲಿ ಬರುವವರ ಫರಂಗಿ ಟೋಪಿಯನ್ನು, ಅವರು ಬೇಡಿಕೊಂಡರೂ ಬಿಡದೆ, ಬಲಾತ್ಕಾರದಿಂದ ಕಿತ್ತುಕೊಂಡು ಬೆಂಕಿ ಹಚ್ಚುವುದು; ರೈಲುಗಳಲ್ಲಿ ಟಿಕೆಟ್ ಇಲ್ಲದೆ ಕುಳಿತು ಮಧ್ಯದಾರಿಯಲ್ಲಿ ರೈಲನ್ನು ನಿಲ್ಲಿಸುವ ಸರಪಳಿ ಎಳೆದು ರೈಲು ನಿಲ್ಲುವಂತೆ ಮಾಡಿ ದಾಂಧಲೆ ಮಾಡುವುದು; ಟೆಲಿಗ್ರಾಫ್ ಕಂಬಿಗಳನ್ನು ಕತ್ತರಿಸುವುದು ; ಬೀದಿಯ ಲೈಟುಗಳನ್ನು ಚೂರು ಚೂರು ಮಾಡುವುದು; ಕಾಲೇಜಿಗೆ ಬೆಂಕಿ ಇಡಲು ಪ್ರಯತ್ನಿಸುವುದು; ಇನ್ನೂ ಅನೇಕ ವಿಧವಾದ ವಿನಾಶ ಕಾರ್ಯಗಳಲ್ಲಿ ನಿರತರಾಗಿದ್ದೆವು. ಆದರೆ ನಾನು ಮಾತ್ರ ಈ ವಿಧವಾದ ಒಂದು ಕೆಲಸದಲ್ಲಿಯೂ ಪಾತ್ರವಹಿಸಲಿಲ್ಲ. ಅದಕ್ಕೆ ಕಾರಣ : ನನ್ನ ವಿಚಾರ ಶಕ್ತಿ, **ಸ್ವತಂತ್ರ**ವಾದ ವಿಚಾರ ಶಕ್ತಿ. ನನ್ನ ಸ್ನೇಹಿತರೆಲ್ಲಾ ಮೇಲೆ ಹೇಳಿದ ರೀತಿ ಮಾಡುತ್ತಿರುವಾಗ ನನಗೆ ಎನ್ನಿಸಿತು : 'ಇದಕ್ಕೇ ನಾನು ಕಾಲೇಜಿನಿಂದ ಹೊರಗೆ ಬಂದದ್ದು ? ' ಎಂದು. ಹಾಗೆಯೇ ಪರ್ಯಾಲೋಚಿಸಿದೆ. ನಾವು ಕಾಲೇಜಿಗೆ ಹೋಗದೆ ಹೊರಗೆ ಬಂದದ್ದು ಏಕೆ? ಒಂದು : ನಿಷ್ಕಾರಣವಾಗಿ ಕಾರಾಗೃಹಕ್ಕೆ ಒಯ್ಯಲ್ಪಟ್ಟ ರಾಜಕೀಯ ಮುಖಂಡರುಗಳ ಬಿಡುಗಡೆಗೆ; ಎರಡು : ಆ ಮೂಲಕ ದೇಶದ ಸ್ವಾತಂತ್ರ ಸಾಧನೆಗೆ. ಆದರೆ ನಾವು ಮಾಡುತ್ತಿದ್ದುದಕ್ಕೂ ಮಾಡಬೇಕಾದುದಕ್ಕೂ ಸಂಬಂಧವೇ ಇದ್ದಂತೆ ಕಾಣಲಿಲ್ಲ. ಫರಂಗಿ ಟೋಪಿಯನ್ನು ಸುಡುವುದರಿಂದ ರಾಜಕೀಯ ಮುಖಂಡರ ಬಿಡುಗಡೆ ಆದೀತೆ ? ಅಥವಾ ಸ್ವರಾಜ್ಯ ಬಂದೀತೆ? ಬೀದಿಯ ದೀಪಗಳನ್ನು ಒಡೆಯುವುದರ ಮೂಲಕವಾಗಲಿ, ರೈಲಿನಲ್ಲಿ ಟಿಕೆಟ್ ಇಲ್ಲದೆ ಪ್ರಯಾಣ ಮಾಡುವುದರ ಮೂಲಕವಾಗಲಿ, ಇಲ್ಲವೆ ರೈಲು ಕಂಬಿಗಳನ್ನು ಕೀಳುವುದರಿಂದಾಗಲಿ ಕಾರ್ಯಸಾಧನೆಯಾದೀತೆ? ಅದರಿಂದೆಲ್ಲ ಒಂದು ಸಾಧನೆಯಾಯ್ತು: ಜನಗಳಿಗೆ ಈ ಯುದ್ಧದ ತೊಂದರೆಯ ಜೊತೆಗೆ ಮತ್ತೊಂದಷ್ಟು ತೊಂದರೆ. ಅಷ್ಟು ವಿನಾ ಮತ್ತೇನೂ ಅದರಿಂದ ಪ್ರಯೋಜನವಾಗಲಿಲ್ಲ. ಅದರ ಬದಲು ಗಾಂಧೀಜಿ ಹೇಳಿದಂತೆ ಪ್ರತಿ ಹಳ್ಳಿಗೂ ಹೋಗಿ, ಏನೂ ತಿಳಿಯದ ಆ ಸೋದರರಿಗೆ ಪರಿಸ್ಥಿತಿಗಳನ್ನು ಚೆನ್ನಾಗಿ ತಿಳಿಸಿ, ಅವರಿಂದ ಆಗತಕ್ಕ ಕೆಲಸ

ಗಳನ್ನು ಮಾಡಿಸಿದ್ದರೆ ನಮ್ಮ ಉದ್ದೇಶ ಪೂರ್ಣವಾಗುವ ಸಂಭವ ಇತ್ತು. ಆದರೆ ಆ ರೀತಿ ಯೋಚಿಸಿದವರೂ ವಿರಳ. ಒಂದು ವೇಳೆ ಯೋಚಿಸಿದರೂ ಅದರಂತೆ ನಡೆದುಕೊಳ್ಳಲು ಶಕ್ತಿ ಇದ್ದವರು ಇನ್ನೂ ವಿರಳ.

ಹೀಗೆಯೇ ಇನ್ನೊಂದು ಸಂದರ್ಭವೊದಗಿತ್ತು, ಕೇವಲ ಎರಡು ಮೂರು ತಿಂಗಳ ಕೆಳಗೆ. ಅದು ಪ್ರಾರ್ಥನೆಯ ವಿಚಾರದಲ್ಲಿ. ಮುಸ್ಲಿಂ ಸೋದರರು ಹಾಡುವ 'ಹಿಂದೂಸ್ತಾನ್ ಹಮಾರಾ' ನಮಗೆ ವ್ಯತಿರಿಕ್ತವಾದದ್ದು ಎಂದು ಹಿಂದುಗಳಾದ ನಾವೂ, ನಾವು ಹಾಡುತ್ತಿರುವ "ವಂದೇ ಮಾತರಂ" ತಮಗೆ ವ್ಯತಿರಿಕ್ತವಾಗಿದೆ ಎಂಬುದಾಗಿ ಮುಸ್ಲಿಂ ಸೋದರರೂ, ಈ ರೀತಿ ಒಂದು ಪರಸ್ಪರ ಮನಸ್ತಾಪಕ್ಕೆ ಪ್ರಾರಂಭವಾಯಿತು. ನಮ್ಮ ಹಿಂದೂ ವಿದ್ಯಾರ್ಥಿಗಳೆಲ್ಲಾ "ವಂದೇ ಮಾತರಂ" ಹಾಡಲೇಬೇಕೆಂದೂ, ಅವರ ಹಾಡಿನ ಒಂದು ನುಡಿಯನ್ನು ಅವರು ಬಿಡಬೇಕೆಂದೂ ಹಠ ಹಿಡಿದು ಕುಳಿತರು. ನನಗೇಕೋ ಅದು "ಸರಿ" ಎಂದು ಕಾಣಲಿಲ್ಲ. ಕೇವಲ ಒಂದು ಪ್ರಾರ್ಥನೆಯ ವಿಷಯಕ್ಕೇ ಇಷ್ಟು ರಗಳೆಯಾಗಬೇಕೆ ಎಂದು ನನ್ನ ಆಶ್ಚರ್ಯ. ಅದರಲ್ಲೂ ಸರಿಯಾಗಿ ನೋಡಿದರೆ "ವಂದೇ ಮಾತರಂ" ಗೀತೆ ಪ್ರಾರ್ಥನೆಯೇ ಅಲ್ಲ. ಅದು ಸ್ತೋತ್ರ. ಏನಿದ್ದರೂ ಅದು ರಾಷ್ಟ್ರಗೀತೆ ಅಷ್ಟೆ. ಅದೂ ಅಲ್ಲದೆ ನಮ್ಮ ಮುಹಮ್ಮದೀಯ ಸೋದರರು "ಹಿಂದೂಸ್ತಾನ್ ಹಮಾರ" ಎಂದೋ "ಅರಬ್ಬೀಸ್ತಾನ್ ಹಮಾರಾ" ಎಂದೋ ಏನಾದರೂ ಹೇಳಿಕೊಳ್ಳಲಿ, ನಮಗೇನು? ನಮ್ಮ ಪಾಡಿಗೆ ನಾವು ನಮಗೆ ಇಷ್ಟಬಂದ ರಾಷ್ಟ್ರಗೀತೆಯೋ, ಇಲ್ಲವೆ ಗೀತೆಯಲ್ಲಿರುವ ಶ್ಲೋಕವೋ ಏನಾದರೂ ಹೇಳಿಕೊಂಡರೆ ಆಗುತ್ತಿರಲಿಲ್ಲವೆ? ಎಂದು ನನ್ನ ಅಭಿಪ್ರಾಯ. ಹೀಗೆಯೇ ಇನ್ನೂ ಎಷ್ಟೋ ಸಂದರ್ಭಗಳಲ್ಲಿ ನನ್ನ ಸ್ವಂತ ವಿಚಾರಶಕ್ತಿಯನ್ನು ಕಂಡುಕೊಂಡಿದ್ದೇನೆ.

ಎರಡನೆಯ ಪ್ರಶ್ನೆ: 'ನನಗೆ **ಸ್ವತಂತ್ರ ಕ್ರಿಯಾಶಕ್ತಿ** ಇದೆಯೆ?' ಎಂದು. ಇದಕ್ಕೆ ತತ್‌ಕ್ಷಣ ಉತ್ತರ ಬರುತ್ತೆ, "ಇಲ್ಲ" ಎಂದು. ಇದಕ್ಕೆ ಕಾರಣ ನನ್ನ ದಾಸ್ಯಮನೋಭಾವ. ಅದಕ್ಕಿಂತ ಹೆಚ್ಚಾಗಿ ಅಧೈರ್ಯ ಮತ್ತು ನನ್ನಲ್ಲಿ ನನಗೇ ನಂಬಿಕೆ ಇಲ್ಲದಿರುವಿಕೆ. ನಾನು ಮಾಡಿದ ವಿಚಾರ ಸರಿಯಾದದ್ದು ಎಂದು ಅದನ್ನು ಕ್ರಿಯಾರೂಪಕ್ಕೆ ತರುವ ಧೈರ್ಯ ನನಗಿಲ್ಲ. ಅಷ್ಟೇಕೆ, ನಾನು ಮಾಡುವ ಪ್ರತಿಯೊಂದು ಕಾರ್ಯವೂ ನನ್ನ ವಿಚಾರಶಕ್ತಿಯ ಫಲ

ವೆಂದು ಹೇಳಲಾರೆ. ಬಲಾತ್ಕಾರದಿಂದ ಬಂದು ನನ್ನ ಮೇಲೆ ಹೇರಿಕೊಂಡ ಕೆಲಸಗಳನ್ನು ಬೇರೆದಾರಿಯಿಲ್ಲದ ಕಾರಣ ಮಾಡುತ್ತೇನೆಯೆ ಹೊರತು, ನಾನೇ ಯಾವ ಕೆಲಸವನ್ನೂ ಸ್ವತಂತ್ರಿಸಿ ಮಾಡಲಾರೆ. ಹಾಗೆ ಸ್ವತಂತ್ರಿಸಿ ಮಾಡುವುದರಿಂದ ಎಲ್ಲಿ ಕೆಲಸ ಕೆಡುವುದೋ ಎಂದು ಭಯ.

ಒಂದು ಸಣ್ಣ ಉದಾಹರಣೆ: ವ್ಯಾಯಾಮ ಮಾಡಲೇ ಬೇಕು, ಇಲ್ಲದಿದ್ದರೆ ಪ್ರಯೋಜನವಿಲ್ಲ ಎಂದು ನನ್ನ ಅಭಿಪ್ರಾಯ, ನಿಜ. ಆದರೆ ನಾನೇ ಸ್ವತಂತ್ರಿಸಿ ವ್ಯಾಯಾಮಶಾಲೆಗೆ ಹೋಗಲಾರದವನಾದೆ. ಏಕೆಂದರೆ "ನಾನು ವ್ಯಾಯಾಮಶಾಲೆಗೆ ಹೋದರೆ, ತಿನಿಸು ಚೆನ್ನಾಗಿ ತಿನ್ನಬೇಕು. ತಿನಿಸು ಸರಿಯಾಗಿ ತಿನ್ನಲು ಅನುಕೂಲಗಳಿಲ್ಲ. ಆದಕಾರಣ ಕಷ್ಟವಾಗುತ್ತದೆ" ಎಂದು ಹಿಂಜರಿದೆ. ಆದರೆ ಕಾಲೇಜಿನಲ್ಲಿ ವ್ಯಾಯಾಮ ಮಾಡಿಸಲೇಬೇಕು ಎಂದು ಕಾನೂನು ಬಂತು. ಅದರಂತೆ ಮಾಡಿಸುತ್ತಲೂ ಇದಾರೆ. ಹಿಂದೆ ವ್ಯಾಯಾಮಶಾಲೆಗೆ ಹೋಗಲು ಹಿಂಜರಿದ ನಾನೂ ಬಾಯಿಮುಚ್ಚಿಕೊಂಡು ಮಾಡುತ್ತಿದೇನೆ. ಆದರೆ, ಈಗ ಬಲಾತ್ಕಾರದಿಂದ ಬಂದು ಹೇರಿರುವ ಈ ವ್ಯಾಯಾಮವನ್ನು ನಾನೇ ಸ್ವತಂತ್ರವಾಗಿ ಕೈಕೊಳ್ಳಲಾರದೆ ಹೋದೆ. ನನಗೆ ಸ್ವತಂತ್ರವಾದ ವಿಚಾರಶಕ್ತಿ ಇದ್ದರೂ ಸ್ವತಂತ್ರವಾದ ಕ್ರಿಯಾಶಕ್ತಿ ಇಲ್ಲದಿರುವುದಕ್ಕೆ ಇದೇ ನಿದರ್ಶನ.

—ಟಿ. ರಾಮರಾವ್.

## ೧೧. "ಅನ್ನ" ಮತ್ತು "ಸ್ತ್ರೀ"

"ಅನ್ನ" ಎಂದು ಕೇಳಿದ ಕೂಡಲೆ, ಒಂದು ತುತ್ತು ಅನ್ನಕ್ಕಾಗಿ ಪ್ರಾಣ ಬಿಡುತ್ತಿರುವ ಲಕ್ಷಾಂತರ ಜನರ ದೌರ್ಭಾಗ್ಯದ ಕಡೆ ನನ್ನ ಮನಸ್ಸು ಹೋಗುತ್ತದೆ. ಹೊತ್ತಿಗೆ ಒಂದು ರಾಗಿಮುದ್ದೆ ತಿಂದು ಇರುವವರೂ, ಎರಡು ಹೊತ್ತಿಗೆ ಒಂದು ರಾಗೀ ರೊಟ್ಟಿಯಲ್ಲಿ ಕಾಲ ಕಳೆಯುವವರೂ, ಮತ್ತೆ ಮೂರು ದಿನಕ್ಕೆ ಒಂದುಸಲ ಒಂದು ಲೋಟ ರಾಗಿ ಅಂಬಲಿಯಲ್ಲಿ ಜೀವ ಬಿಗಿಹಿಡಿದುಕೊಂಡಿರುವವರೂ, ಕೊನೆಗೆ ಏನೂ ಸಿಕ್ಕದೆ ನಾಲ್ಕಾರು ದಿವಸ ರಾಗಿ ಅಂಬಲಿಯ ಮುಖ ಸಹ ಕಾಣದೆ ಪ್ರಾಣಬಿಡುತ್ತಿರುವವರೂ, ಇವರೆಲ್ಲರೂ ಕಣ್ಣಮುಂದೆ ಬಂದು ನಿಂತಂತೆ ಆಗುತ್ತದೆ. ಅವರ ಈ ದುರವಸ್ಥೆ, ಈ ದೌರ್ಭಾಗ್ಯಗಳನ್ನು ನೆನೆದು

ಕೋಪ ದುಃಖಗಳೆರಡೂ ಒಂದೇ ಬಾರಿಗೆ ಬರುತ್ತವೆ. ದುಃಖವೇನೋ ಬರಬೇಕಾದದ್ದು ಸಹಜ, ಆದರೆ ಕೋಪವೇಕೆ? ಈ ಕಷ್ಟಗಳನ್ನು ಕೊಟ್ಟದ್ದಕ್ಕಾಗಿ ಆ ಪರಮಾತ್ಮನ ಮೇಲೆ ಕೋಪವೆ? ಕೋಪ ಆ ಪರಮಾತ್ಮನ ಮೇಲಲ್ಲ; ಕೋಟ್ಯಂತರ ಜನ ಹೊಟ್ಟೆಗಿಲ್ಲದೆ ಹಾಹಾಕಾರಮಾಡುತ್ತ ಬೀದಿಬೀದಿಗಳಲ್ಲೇ ಬಿದ್ದು ಸಾಯುತ್ತಿರುವಾಗ ತಮ್ಮ ಸ್ವರ್ಗಸದೃಶವಾದ ಭವನಗಳಲ್ಲಿ ಸುಖವಾಗಿ ಕುಳಿತು, ಹೊರಗಡೆಯ ಬಡವರ ಹಾಹಾಕಾರಕ್ಕೆ ಕೊಂಚವಾದರೂ ಕನಿಕರ ಪಡದೆ, ಮೇರೆಯಿಲ್ಲದೆ ಬೆಳೆದಿರುವ ತಮ್ಮ ಬೊಜ್ಜನ್ನು ಮತ್ತಷ್ಟು ಬೆಳೆಸಲು ರುಚಿರುಚಿಯಾದ ಘಮಘಮಿಸುವ ಅನೇಕ ರೀತಿಯ ತಿನಿಸುಗಳನ್ನು ತಿಂದು, ಜೀರ್ಣಶಕ್ತಿ ಕೆಡಿಸಿಕೊಂಡು, ಆಸ್ಪತ್ರೆ ಔಷಧಿ ಕುಡಿಯುವವರ ಮೇಲೆ ಕೋಪ. ಈ ರೀತಿ ಬಡವರ ಅವಸ್ಥೆ, ಶ್ರೀಮಂತರ ಸೌಖ್ಯ ಇವುಗಳನ್ನು ಕುರಿತು ಎರಡು ವಿಧವಾದ ಯೋಚನೆ ಬರುತ್ತದೆ.

ಇವೆರಡರಲ್ಲಿ ಮೊದಲನೆಯದು, ಎಂದರೆ ಬಡವರನ್ನು ಕುರಿತ ಯೋಚನೆ ಯೋಗ್ಯವಾದದ್ದು; ಎರಡನೆಯದು ಅಯೋಗ್ಯವಾದದ್ದು. ನಾವು ಅನ್ನ ತಿನ್ನುವುದರ ಉದ್ದೇಶವೇನು? ಅನ್ನ ತಿನ್ನುವುದು ಬೇಡವಾದರೂ, ಹಸಿವಾಗದೆ ಇದ್ದರೂ, ನಾಲಗೆಯ ಚಪಲಕ್ಕೆ ಬಲವಂತದಿಂದ ಹೊಟ್ಟೆಗೆ ಸೇರಿಸಿ ಅಜೀರ್ಣದಿಂದ ನರಳುವುದಲ್ಲ; ಮನುಷ್ಯ ಹುಟ್ಟಿದ ಮೇಲೆ ಅವನು ಪ್ರಾಣದಿಂದ ಇರಲು ಎಷ್ಟು ಅಗತ್ಯವೋ, ಹಸಿವನ್ನು ತೀರಿಸಲು ಎಷ್ಟು ಬೇಕೋ ಅಷ್ಟು ಮಾತ್ರ ತಿಂದು, ಜೀವ ಬಿಗಿಹಿಡಿದಿರುವುದಕ್ಕೋಸ್ಕರ. ಮನುಷ್ಯ ಜೀವಿಸಿರುವುದು ತಿನ್ನುವುದಕ್ಕಲ್ಲ; ಜೀವಿಸುವುದಕ್ಕೋಸ್ಕರ ತಿನ್ನಬೇಕು ಎಂದು ತಿಳಿದವರು ಹೇಳುತ್ತಾರೆ. ನಮ್ಮ ಬಡವರು, ಏಕೆ ನಾವು ಕೂಡ, ಈ ಗುಂಪಿಗೇ ಸೇರಿದವರೆಂದು ಹೇಳಬೇಕು. ಒಬ್ಬ ರೈತ, ಒಬ್ಬ ಬಡ ಕೂಲಿ, ಬೆಳಗಿನಿಂದ ಸಾಯಂಕಾಲದವರೆದೂ ದುಡಿದು ಬಹಳ ಹಸಿದಿರುತ್ತಾನೆ. ಆಗ ಅವನಿಗೆ ಬೇಕಾದದ್ದು ಜಹಂಗೀರ್, ಮೈಸೂರ್‌ಪಾಕ್, ದಮ್‌ರೋಟ್ ಅಲ್ಲ; ಒಂದು ರಾಗೀ ಮುದ್ದೆ, ಇಷ್ಟು ಕಾರ. ಇದರಲ್ಲಿ ತಿಳಿದುಬರುತ್ತದೆ, ನಮ್ಮ ಬಡವರು ತಿನ್ನುವುದು ಕೇವಲ ಜೀವಿಸಿರುವುದಕ್ಕೆ ಎಷ್ಟು ಅಗತ್ಯವೋ ಅಷ್ಟು ಮಾತ್ರ ಎಂದು. ಅವರಿಗೆ ರುಚಿಯೂ ಬೇಡ. ಹಸಿವು ಅಡಗಿದರೆ ಸಾಕು.

ಆದರೆ ನಮ್ಮ ಶ್ರೀಮಂತರ ಕಡೆ ದೃಷ್ಟಿ ಸ್ವಲ್ಪ ಬೀರೋಣ. ಬಹುಶಃ

ಶ್ರೀಮಂತರಿಗೆ ಹಸಿವೆಂದರೇನು ಎಂದು ಗೊತ್ತಿದೆಯೋ ಇಲ್ಲವೊ! ಅದು ಏನೂ ಹೆಚ್ಚಿನ ಮಾತಲ್ಲ. ಏಕೆಂದರೆ ಅವರಿಗೆ ಬೆಳಗಿನಿಂದ ಸಾಯಂಕಾಲದ ವರೆಗೆ ತಿನ್ನುವ ಕೆಲಸದ ಹೊರತು ಬೇರೆ ಉಂಟೇನು? ಹಾಸಿಗೆಯಲ್ಲಿದ್ದ ಹಾಗೆಯೇ ಕಾಫಿ. ೮ ಗಂಟೆಗೆ ಫಲಾಹಾರ. ೧೧ ಗಂಟೆಗೆ ಊಟ. ೩ ಗಂಟೆಗೆ ಟೀ. ರಾತ್ರಿ ೮ ಗಂಟೆಗೆ ಊಟ. ಈ ರೀತಿ ಒಂದು ಆಗುತ್ತಲೆ ಒಂದು ಬೀಳುತ್ತಲೇ ಇದ್ದರೆ ಅವರಿಗೆ ಹಸಿವಿನ ಮುಖವೆಲ್ಲಿ ಕಂಡೀತು? ಅವರು ತಿನ್ನುವುದು ಹಸಿವಿಗಾಗಿ ಅಲ್ಲ, ನಾಲಗೆ ಚಪಲವನ್ನು ತೃಪ್ತಿಗೊಳಿಸುವುದಕ್ಕೆ. ತಿನ್ನುವುದಕ್ಕಾಗಿ ಬದುಕಿದವರು ನಮ್ಮ ಶ್ರೀಮಂತರು. ಅದರಲ್ಲೂ ಬಡವರ ಅವಸ್ಥೆಯನ್ನು ಕಣ್ಣಾರೆ ನೋಡುತ್ತ ಅವರ ಕಡೆಗೆ ಗಮನವನ್ನೇ ಕೊಡದೆ ತಮ್ಮ ಪಾಡಿಗೆ ತಾವು ಬೊಜ್ಜು ಬೆಳೆಸುವುದರಲ್ಲಿ ನಿರತರಾದರೆ ಅವರನ್ನು ಮಾನವರೆನ್ನಬೇಕೆ? ಇಂಥ ಪಾಷಾಣಹೃದಯದವರಾದ ಶ್ರೀಮಂತರನ್ನು ಕುರಿತ ಯೋಚನೆ ಅಯೋಗ್ಯವಾದದ್ದು. ಇದರ ಪಕ್ಕದಲ್ಲಿ, ರುಚಿರುಚಿಯಾದ ಅನವಶ್ಯಕವಾದ ತಿಂಡಿಗಳಿಗೆ ಆಶಿಸದೆ, ಹಸಿವನ್ನು ತೀರಿಸಿ ಪ್ರಾಣದಿಂದಿರುವಂತೆ ಮಾಡುವ ರಾಗಿಮುದ್ದೆಯಿಂದಲೋ ಅಥವಾ ಅಂಬಲಿಯಿಂದಲೋ ತೃಪ್ತರಾಗಿರುವ ಬಡವರನ್ನು ಕುರಿತ ಯೋಚನೆ ನಿಸ್ಸಂದೇಹವಾಗಿ ಯೋಗ್ಯವಾದದ್ದೆ.

'ಸ್ತ್ರೀ' ಎಂಬ ಮಾತನ್ನು ಕೇಳಿದ ಕೂಡಲೆ ಅನೇಕ ಆಲೋಚನೆಗಳು ಏಳುತ್ತವೆ. ಮೊದಲು ನನ್ನ ಪ್ರೀತಿಯ ತಾಯಿ. ಆ ಬಳಿಕ ನನ್ನ ತಾಯಿಯಂತೆ ನನ್ನನ್ನು ಪ್ರೀತಿಸಿ ಸಲಹಿದ ಮಾತೃಸದೃಶರಾದ ಕೆಲವು ಸ್ತ್ರೀಯರನ್ನು ಕುರಿತದ್ದು. ಮೂರನೆಯದು ನನ್ನ ಒಲವಿನ ಸೋದರಿ. ಬೀದಿಗಳಲ್ಲಿ ಓಡಾಡುವಾಗ ಕುಡಿಗಣ್ಣು ನೋಟದಿಂದ ನೋಡಿಕೊಂಡು ಹೋಗುವ ಕೆಲವು ಸ್ತ್ರೀಯರನ್ನು ಕುರಿತದ್ದು ನಾಲ್ಕನೆಯದು. ಕೊನೆಯದು ಹೊಲಸು ಗಲ್ಲಿಗಳ ಮನೆಗಳ ಮುಂದೆ ನಿಂತು, ಥಳಕು ವೈಯಾರ ಕುಲುಕುಗಳಿಂದ ಮಂಕರನ್ನು ಮರುಳು ಮಾಡುವ ಅದೃಷ್ಟಹೀನ ವೇಶ್ಯೆಯರನ್ನು ಕುರಿತ ಯೋಚನೆ.

ಮೊದಲ ಮೂರು ಯೋಚನೆಗಳು ಯೋಗ್ಯವಾದುವು. ಕೊನೆಯ ಎರಡು ಅಯೋಗ್ಯವಾದುವು. ಮೊದಲ ಮೂರು ಯೋಚನೆಗಳಲ್ಲಿ ಸ್ತ್ರೀ ವ್ಯಕ್ತಿಯ ಉಚ್ಚವಾದ, ಉದಾತ್ತವಾದ, ಪ್ರಶಂಸನೀಯವಾದ ಗುಣಗಳು ಪ್ರತಿಬಿಂಬಿತವಾಗುತ್ತವೆ. ಕೊನೆಯ ಎರಡು ಯೋಚನೆಗಳಲ್ಲಿ ಸ್ತ್ರೀವ್ಯಕ್ತಿಯ ತುಚ್ಛವಾದ,

ಹೇಯವಾದ ಗುಣಗಳು ಪ್ರತಿಬಿಂಬಿತವಾಗುತ್ತವೆ. ಪ್ರೇಮಮೂರ್ತಿಯಾದ, ಕರುಣಾಸಾಗರಳಾದ ನನ್ನ ಒಲವಿನ ತಾಯಿಯನ್ನು ಕುರಿತ ಯೋಚನೆ ಯೋಗ್ಯ ವಾದದ್ದು, ಪವಿತ್ರವಾದದ್ದು, ಪೂಜ್ಯವಾದದ್ದು, ನಿರ್ಮಲವಾದದ್ದು. ನನ್ನ ಊರುಬಿಟ್ಟು, ನನ್ನ ಮನೆ ಬಿಟ್ಟು, ನನ್ನವರನ್ನು ಬಿಟ್ಟು ಬಂದು ಪರಸ್ಥಳದಲ್ಲಿ ಅವಸ್ಥೆ ಪಡುತ್ತಿರುವ ಸಮಯದಲ್ಲಿ, ನನ್ನ ಸ್ಥಿತಿಗೆ ಮರುಗಿ ಪ್ರೀತಿಯಿಂದ ನೋಡಿ ತಾಯಿಯಂತೆ ನನ್ನನ್ನು ಸಲಹಿದ ಕೆಲವಾರು ಸ್ತ್ರೀವ್ಯಕ್ತಿಗಳು ನನ್ನ ತಾಯಿಯ ಸಮಾನರು. ಆದ ಕಾರಣ ಅವರನ್ನು ಕುರಿತ ಯೋಚನೆ ತಾಯಿಯನ್ನು ಕುರಿತ ಯೋಚನೆಯಂತೆ ಯೋಗ್ಯವಾದದ್ದು, ಪವಿತ್ರವಾದದ್ದು. ಅದರಂತೆಯೇ ನಿರ್ಮಲವಾದ ಸೋದರೀಸ್ನೇಹವನ್ನು ಸದಾ ತೋರುವ ನನ್ನ ಒಲವಿನ ಸೋದ ರಿಯ ಯೋಚನೆಯೂ ಯೋಗ್ಯವಾದದ್ದೇ.

ದಾರಿಯಲ್ಲಿ ಹೋಗುವಾಗ ಓರೆಗಣ್ಣಿನ ನೋಟ ಕೆದರಿ ಹೋಗತಕ್ಕ ಸ್ತ್ರೀಯರನ್ನು ಕುರಿತ ಯೋಚನೆ ಅಯೋಗ್ಯವಾದದ್ದು, ಎಂದೆ. ಏಕೆಂದರೆ ಅದು ಸ್ತ್ರೀಯ ಕೆಟ್ಟಗುಣವನ್ನು ತೋರಿಸುವ ಚಿಹ್ನೆ. ನಿರ್ಮಲವಾದ ಹೃದಯ ವುಳ್ಳ ಸ್ತ್ರೀ ಓರೆಗಣ್ಣಿನಿಂದ ನೋಡಬೇಕಾದ ಅಗತ್ಯವೇನು ? ಎಲ್ಲರೂ ನೋಡು ವಂತೆ ಸರಿಯಾಗಿ ನೋಡಬಾರದೇಕೆ ? ಅಂತೆಯೇ ಸತೀತ್ವವನ್ನು ಕಾಪಾಡಿ ಕೊಳ್ಳಲು ಸಾಧ್ಯವಿಲ್ಲದ ಸ್ತ್ರೀಯರ ವಿಚಾರವೂ. ಅವರು ವೇಶ್ಯೆಯರಾಗಲು ಕಾರಣ ಹೊಟ್ಟೆಪಾಡು ಎಂದು ಹೇಳಬಹುದಾದರೂ ದುಡ್ಡಿನಾಶೆಗೆ ಆ ಹೇಯ ವಾದ ಕೆಲಸಕ್ಕೆ ಕೈಹಾಕಿ, ತಮ್ಮ ಸತೀತ್ವವನ್ನು ಕಳೆದುಕೊಂಡು, ಇಡೀ ಸಮಾಜಕ್ಕೇ ಕಳಂಕ ತರುವುದಲ್ಲದೆ, ಇಡೀ ಸ್ತ್ರೀಯರ ಗುಂಪಿಗೇ ಕಳಂಕ ಪ್ರಾಯರಾಗಿರುವ ಆ ಸ್ತ್ರೀಯರ ಯೋಚನೆ ತುಚ್ಛವಾದದ್ದೇ, ಹೇಯ ವಾದದ್ದೇ, ನಿಂದ್ಯವಾದದ್ದೇ. ಆದರೂ ಅವರನ್ನು ಕುರಿತು ಕನಿಕರಿಸುವುದು ಮಾತ್ರ ಯೋಗ್ಯವಾದದ್ದೆಂಬುದಕ್ಕೆ ಸಂಶಯವಿಲ್ಲ.

—ಟಿ. ರಾಮರಾವ್.

## ೧೨. ಪರೀಕ್ಷಾ ಜ್ವರ

ನಾವು—ಎಂದರೆ ವಿದ್ಯಾರ್ಥಿವೃಂದ ದಿನದಿನವೂ ತುತ್ತಾಗುತ್ತಿರುವ ಈ ಪರೀಕ್ಷಾಜ್ವರವನ್ನು ಹೀಗೆಯೇ ಬೆಳೆಯಗೊಡುವುದು ಉಚಿತವಲ್ಲ. ಆದ್ದ

ರಿಂದ ಈ ಸಂಬಂಧವಾಗಿ ಬಲ್ಲವರು, ಕೂಡಲೇ ಆಸಕ್ತಿ ವಹಿಸಿ, ಇದನ್ನು ನಿರ್ಮೂಲ ಮಾಡಬೇಕು.

ಈ ಜ್ವರದ ಲಕ್ಷಣ ಕೆಲವರಲ್ಲಿ ಭಯಂಕರವಾಗಿ, ಮತ್ತೆ ಕೆಲವರಲ್ಲಿ ಸಾಧಾರಣವಾಗಿ, ಇನ್ನೂ ಕೆಲವರಲ್ಲಿ ಬಹುಕಡಿಮೆಯಾಗಿ ಇರುತ್ತದೆ. ಸಾಮಾನ್ಯವಾಗಿ ವಿದ್ಯಾರ್ಥಿಗಳಲ್ಲೇ ಇದು ಹೆಚ್ಚಾಗಿರುವುದು. ಇದು ಎಲ್ಲರಿಗೂ ತಿಳಿದ ಸಂಗತಿ. ಅನೇಕ ಜನ, ಈ ಜ್ವರ ತಮ್ಮಲ್ಲಿ ಹೆಚ್ಚಾಗಿ ಕುದಿದು, ಅದರ ತಾಪವನ್ನು ತಡೆಯಲಾರದೆ, ಅದನ್ನು ಕಡಿಮೆಮಾಡಿಕೊಳ್ಳುವ ಸಲುವಾಗಿ ನೀರು ಹಾರಿದ್ದೂ, ಕೆರೆ ನದಿ ಬಾವಿಗಳ ಪಾಲಾದದ್ದೂ ವೃತ್ತಪತ್ರಿಕೆಗಳ ವಿಶೇಷ ಸುದ್ದಿ ವರದಿಗಳಿಗೇ ಸರಿ. ಇಷ್ಟೊಂದು ಅನಾಹುತವುಂಟುಮಾಡುತ್ತಿರುವ ಪರೀಕ್ಷಾ ಜ್ವರಕ್ಕೆ ಕಾರಣವೆಂದರೆ ಅದರ ಹಿಂದೆ ಅಡಗಿರುವ ಭೀತಿಯೇ ಎಂದೆನ್ನಬಹುದು.

ಈ ಭೀತಿ ಏಕೆ ಬಂತು? ಎಂದರೆ ಹಲವಾರು — ಏಕೆ?— ನೂರಾರು ಕಾರಣಗಳಿವೆ :

೧. ಕೆಲವರಿಗೆ ಪರೀಕ್ಷೆಯೆಂಬ ಸುದ್ದಿಯೇ ಭಯವುಂಟುಮಾಡುತ್ತದೆ.

೨. ಕೆಲವರು ಸ್ವಲ್ಪವೂ ಓದಿರುವುದಿಲ್ಲ, ಈ ಜ್ವರದಿಂದ ಪಾರಾಗುವಂತಿಲ್ಲ.

೩. ಕೆಲವರು ಓದಿರುತ್ತಾರೆ, ಅವರ ಬುರುಡೆಗೆ ಸ್ವಲ್ಪವೂ ಹತ್ತಿರುವುದಿಲ್ಲ. ಅವರಿನ್ನೆಷ್ಟು ದಿನ ಕಣ್ಣಿಗೆ ಎಣ್ಣೆ ಹೊಯ್ದುಕೊಂಡು, ಪುಸ್ತಕ ಹೊಲಸು ಮಾಡಿಕೊಂಡು, ಮಲಗುವಾಗಲೂ ತಲೆದಿಂಬಿಗೆ ಪುಸ್ತಕವಿಟ್ಟುಕೊಂಡು, ಅತ್ಯಂತ ನಿಕಟ ಸಂಪರ್ಕವಿಟ್ಟುಕೊಂಡಿದ್ದರೂ ಹಾಳೆಯ ತುಂಡು ಕೂಡ ಅವರ ಮೈಗಾಗಲಿ ಕೈಗಾಗಲಿ ತಲೆಗಾಗಲಿ ಹತ್ತುವಂತಿಲ್ಲ.

೪. ಇನ್ನೂ ಕೆಲವರು ತರಗತಿಯಲ್ಲಿ ಅಥವಾ ಆ ಊರಿನಲ್ಲಿ ಅಥವಾ ಆ ದೇಶದಲ್ಲಿ 'ಫಸ್ಟೋ', 'ಸೆಕಂಡೋ' ಬರಬೇಕು, ಇಲ್ಲವೆ ಫಸ್ಟು ಕ್ಲಾಸಾದರೂ ಬಾರಿಸಬೇಕು ಎಂಬ ಅಭಿಪ್ರಾಯದಿಂದ ಸುಸ್ತಾಗುವ ತನಕ ಓದಿ, ನಿದ್ದೆಗೆಡಿಸಿಕೊಂಡು, ಆಹಾರದ ವಿಷಯದಲ್ಲಿ ಅಸಡ್ಡೆ ಮಾಡಿ, ಈ ಬಾಹ್ಯ ವ್ಯಾಪಾರವನ್ನೂ, ಶರೀರದ ಮೇಲಣ ಅಭಿಮಾನವನ್ನೂ ಮರೆತು, ಇಂದ್ರಿಯ ನಿಗ್ರಹಮಾಡಿ ಜಯಪಡೆಯಬೇಕೆಂಬ ಸರ್ವಾಂತರ್ಯಾಮಿ ದೃಷ್ಟಿಯಿಂದ ಅಖಂಡ ತಪಶ್ಚರ್ಯ ಮಾಡುವರು.

೫. ಸಾಮಾನ್ಯರಿಗೆ ಪರೀಕ್ಷೆ ಹತ್ತಿರಕ್ಕೆ ಬರಬರುತ್ತಾ ಈ ಜ್ವರ ಹೆಚ್ಚಾಗುವುದು.

ಈ ಜ್ವರದ ಹಿನ್ನೆಲೆ ಯಾವ ಚರಿತ್ರಕಾರನಿಗೂ ತಿಳಿಯದು. ಇದು ಯಾವ ಶಕೆಯಲ್ಲಿ ಯಾವ ಮಹಾಸಾರ್ವಭೌಮನ ಕಾಲದಲ್ಲಿ ಯಾವ ಮಹರ್ಷಿ ಮಹನೀಯರಿಂದ ಪ್ರಾರಂಭವಾಯಿತು ಎಂಬುದು ತಲೆಗೆ ತಗುಲದ, ಕೈಗೆ ನಿಲುಕದ, ಕಾಲ್ಗೆ ತೊಡರದ ಪ್ರಶ್ನೆ. ವೈಶಂಪಾಯನ ಮುನಿಗಳು ಜನಮೇಜಯರಾಯನಿಗಾಗಲಿ, ವ್ಯಾಸಮಹರ್ಷಿಗಳು ಪಾಂಡವರಿಗಾಗಲಿ ಈ ಗುಟ್ಟನ್ನು ತಿಳಿಯಗೊಡಲಿಲ್ಲ. ನಚಿಕೇತನು ಯಮನ ಬಳಿ ಹೋದಾಗ ಮೋಹಪರವಶನಾಗಿ ಜನ್ಮಾಜನ್ಮದ ರಹಸ್ಯವನ್ನು ಕೇಳಿದನೇ ಹೊರತು ಈ ಜ್ವರದ ಪೂರ್ವವೃತ್ತಾಂತವನ್ನು ವಿವೇಚಿಸಲೇ ಇಲ್ಲ. ಆದ್ದರಿಂದ ಈ ಪರೀಕ್ಷಾ ಜ್ವರ ಆರಂಭವಾದದ್ದು ಇಂತಹ ದಿನ, ಗಂಟೆ, ಗಳಿಗೆ ಎಂದು ಸ್ಪಷ್ಟವಾಗಿ ಹೇಳಲು ಬರುವಂತಿಲ್ಲ. ಆದಿಬುನಾದಿಯಿಂದಲೂ ಇತ್ತೆಂದು ಹೇಳಲು ಕೆಲವು ಆಧಾರಗಳಿವೆ.

ಹಿಂದೆ ಭಾರತ ಭೂಮಿಯಲ್ಲಿ ಸ್ವರ್ಣಯುಗ ತಾಂಡವವಾಡುತ್ತಿದ್ದಾಗ, ಫ಼ಾಹಿಯಾನ್, ಹ್ಯೂಯನ್‌ತ್ಸಾಂಗ್ ಮುಂತಾದ ಚೀಣೀಯರು ಇದನ್ನು ನೋಡಿ ಬೆರಗಾದಾಗ, ಭರತಖಂಡದಲ್ಲಿ ಕಾಶಿ, ನಾಲಂದ ಮುಂತಾದ ಕಡೆ ಮಹಾ ಮಹಾ ವಿಶ್ವವಿದ್ಯಾನಿಲಯಗಳು ಇದ್ದುವಂತೆ. ಆ ವಿಶ್ವವಿದ್ಯಾನಿಲಯಗಳ ಪ್ರವೇಶದ್ವಾರದಲ್ಲಿ ಇಬ್ಬರು ಮಹಾಘಟಾನುಘಟಿಗಳು ನಿಲ್ಲುತ್ತಿದ್ದರಂತೆ. ಇವರಿಗೆ ದ್ವಾರಪಂಡಿತರೆಂಬ ಹೆಸರು ಇದ್ದಿತಂತೆ. ಸರ್ವಶಾಸ್ತ್ರಗಳಲ್ಲೂ ಇವರು ಪಾರಂಗತರಾಗಿದ್ದು, ನೋಡುವುದಕ್ಕೆ ಕಟ್ಟಾಳುಗಳಾಗಿದ್ದು, ವಿದ್ಯಾಲಯವನ್ನು ಪ್ರವೇಶಿಸಬರುವ ವಿದ್ಯಾರ್ಥಿಗಳಿಗೆ ಯಮಪ್ರಾಯರಾಗಿದ್ದರಂತೆ. ಪ್ರತಿದಿನವೂ ವ್ಯಾಸಂಗ ಮಾಡಲು ಒಳಹೊಗುವ ವಿದ್ಯಾರ್ಥಿಗಳನ್ನು ಇವರು ನಿಲ್ಲಿಸಿಕೊಂಡ ತತ್‌ಕ್ಷಣವೇ ಆ ವಿದ್ಯಾರ್ಥಿಗಳಿಗೆ ಜ್ವರ ಬರುತ್ತಿತ್ತಂತೆ. ಆ ಮೇಲೆ ಅವರು ಪ್ರಶ್ನೆಗಳನ್ನು ಕೇಳುತ್ತಾ ಇರುವಾಗ ಈ ಜ್ವರ ಅಧಿಕವಾಗುತ್ತಾ ಹೋಗಿ, ಅವರಿಗೆ ಸಾಕೆನ್ನಿಸಿದ ಮೇಲೆ ನೋಡಿದರೆ ಕನಿಷ್ಠಪಕ್ಷ ೧೦೦°ಗಳಷ್ಟಾದರೂ ಜ್ವರ ಇರುತ್ತಿತ್ತಂತೆ. ಅವರ ಪ್ರಶ್ನೆಗಳಿಗೆಲ್ಲಾ ಉತ್ತರ ಕೊಟ್ಟವನಿಗೇ ಪ್ರವೇಶ. ಪ್ರವೇಶಮಾಡಿದವನಿಗೆಲ್ಲಾ ಜ್ವರ! ಹೀಗಾಗಿ ಅಲ್ಲಿನ ವಿದ್ಯಾರ್ಥಿಗಳಿಗೆ ಪ್ರತಿದಿನಸವೂ ಜ್ವರ ಬರುತ್ತಿತ್ತೆಂಬ ಅಂಶವನ್ನು ಫ಼ಾಹಿಯಾನ್ ಮತ್ತು ಹ್ಯೂಯನ್‌ತ್ಸಾಂಗರ ಬರವಣಿಗೆಗಳನ್ನು ಓದಿದಮೇಲೆ ನಾವು ಸುಲಭವಾಗಿ ಊಹಿಸ

ಬಹುದು. ಹಾಗೆಂದಮೇಲೆ ಅಂದಿನ ಜನ ಕಷ್ಟಸಹಿಷ್ಣುಗಳು, 'ಮೆಡಿಕಲ್ ಸರ್ಟಿಫಿಕೇಟ್' ಜಂಟಿಸಿ 'ಪ್ರಮೋಷನ್' ತೆಗೆದುಕೊಳ್ಳುತ್ತಿರಲಿಲ್ಲ ಎಂದು ನಿರ್ಧರಿಸಬಹುದು.

ಹೀಗೆ ನಮ್ಮ• ಸ್ವರ್ಣಯುಗದಲ್ಲೂ ಕಂಡುಬಂದ ಈ ಪರೀಕ್ಷಾ ಜ್ವರ ದಿನಂಪ್ರತಿ ಬರುತ್ತಿದ್ದುದು, ಹೇಗೆ ವರ್ಷಕ್ಕೆರಡು ಮೂರು ಬಾರಿಗಿಂತ ಅಧಿಕ ವಾಗದೆ ವಿದ್ಯಾರ್ಥಿಗಳನ್ನು ಉಳಿಸಿತು ಎಂಬುದನ್ನು ವಿವೇಚಿಸಬೇಕಾಗಿದೆ.

**ಎಷ್ಟೋ ಶತಮಾನಗಳ ಹಿಂದೆ**

ವರ್ಷಕ್ಕೆ ೩೬೫ ಸಲ

| | | | |

**೨೦ನೇ ಶತಮಾನದ ಪೂರ್ವಭಾಗದಲ್ಲಿ ೧೯೦೦—೧೯೪೦**

ವರ್ಷಕ್ಕೆ ಮೂರು ಸಲ

| | |

**೨೦ನೇ ಶತಮಾನದ ಉತ್ತರಭಾಗದಲ್ಲಿ ೧೯೪೨—೪೪ ?**

ವರ್ಷಕ್ಕೆ ಎರಡು ಸಲ

| |

**ಇದೇ ರೀತಿ ಯುದ್ಧ ಮುಂದುವರಿದರೆ ಕ್ರಿ.ಶ. ೨೦೦೦ದ ವರೆಗೆ**

**(?) (?) (?)**

**ಕ್ರಿ.ಶ. ೨೧ನೇ ಶತಮಾನದಲ್ಲಿ**

ಸಂಪೂರ್ಣ ಶೂನ್ಯ

ಮುಂದಿನ ಶತಮಾನದ ವಿದ್ಯಾರ್ಥಿಗಳಾದರೂ ಈ ಜ್ವರದಿಂದ ಪಾರಾಗಿ ಬದುಕಿಕೊಂಡಾರೆಂಬ ನಂಬುಗೆ ಮೇಲಿನ ಅಂಕಿ ಅಂಶಗಳಿಂದ ಅಂಕುರವಾಗುತ್ತದೆ. ಪುರಾಣಪ್ರಸಿದ್ಧವಾದ ಈ ಜ್ವರದ ಮಹಾಗುಣಗಳನ್ನು ಸಂಕ್ಷಿಪ್ತವಾಗಿ ತಿಳಿಸಬಯಸುತ್ತೇನೆ.

ಸಾಮಾನ್ಯವಾಗಿ, ಯಾವಾಗಲೂ ಎದೆ ಡವಡವಗುಟ್ಟುವುದೇ ಈ ಜ್ವರದ ಲಕ್ಷಣವೆಂದು ಹೇಳಬಹುದು. ಮೊದಲಿನಿಂದ ಕಾಲಕಾಲಕ್ಕೆ ಸರಿಯಾಗಿ ಆಯಾ ಹೊತ್ತಿನ ಪಾಠಗಳನ್ನು ಕ್ರಮವಾಗಿ ಓದಿರುವವನಿಗೆ ಪರೀಕ್ಷೆ ಹತ್ತಿರ ವಾದಂತೆಲ್ಲಾ ಇಂತಿಷ್ಟೂ ಈ ಜ್ವರ ಬರುವುದಿಲ್ಲವೆಂದು ಹೇಳಬಹುದು. ಈ

ಜ್ವರ ಮೊದಲಾಗುವ ಕಾಲ, ಮಳೆಗಾಲ ಮುಗಿದು ಚಳಿಗಾಲ ಆರಂಭವಾದ ಮೇಲೆ. ಆಮೇಲೆ ಬೇಸಗೆಯ ವರೆಗೂ, ಹಲವರಲ್ಲಿ ಬೇಸಿಗೆಯಾದ ಮೇಲೂ ಇರುವುದೆಂದು ತಜ್ಞರು ಅಭಿಪ್ರಾಯಪಡುತ್ತಾರೆ. ಚಳಿಯೊಂದಿಗೆ ಆರಂಭ ವಾಗುವ ಈ ಜ್ವರದ ಗಡು ೪ ತಿಂಗಳು ಮಾತ್ರ. ಮೊದಲ ಎರಡು ತಿಂಗಳು ಸಾಧಾರಣವಾಗಿದ್ದು, ಕೊನೆಯ ಎರಡು ತಿಂಗಳಲ್ಲಿ ಏರುತ್ತಾ ಹೋಗಿ, ಕೊನೆಯ ಹದಿನೈದು ದಿನಗಳಲ್ಲಿ ಜ್ವರ ಇನ್ನೂ ಏರುತ್ತಾ ಹೋಗುವುದು.

ಈ ಜ್ವರಪೀಡಿತರಾದವರು ಇದರ ಸಾಮಾನ್ಯ ಅವಸ್ಥೆಯಲ್ಲಿ ಮಿತಿ ಮೀರಿ ಓದುವರು, ರಾತ್ರಿಯ ಹೊತ್ತು ಬೆಚ್ಚಿಬೀಳುವರು, ಕನವರಿಸಿಕೊಳ್ಳುವರು, ಕಿರಿಚಿಕೊಳ್ಳುವರು, 'ಅಯ್ಯೋ ಫೇಲ್!' ಎಂದು ಭಯಂಕರವಾಗಿ ಅರಿಚಿ, ಪರೀಕ್ಷೆಯ ಭೂತದ ಮೇಲೆ ಹಗೆತನ ಸಾಧಿಸುವರು. ಅಂತಹವರಿಗೆ ಹಗಲ ಹೊತ್ತು ಪೇಪರ್ ಓದುತ್ತಿದ್ದಾಗಲೂ, ಸಂಜೆ ಹೊತ್ತು ಆಟವಾಡುತ್ತಿದ್ದಾಗಲೂ ಮನಸ್ಸಮಾಧಾನವಿರುವುದಿಲ್ಲ. ಕಣ್ಣುಗಳು ಯಾವಾಗಲೂ ಕೆಂಪಾಗಿದ್ದು ನಿದ್ದೆಗೆಟ್ಟ ಸಿದ್ಧಿಯನ್ನು ತೋರಿಸುವುವು. ಬೆಳಗಿನ ಜಾವ ಏಕಾಏಕಿ ಎದ್ದು ಓದುವುದೂ ಸಹ ಇದರ ಪರಿಣಾಮ. ಬಟ್ಟೆಗಳು ಸಾಮಾನ್ಯವಾಗಿ ಕೊಳೆಯಾಗಿರುವುವು. ಸಂಜೆ ಏಳು ಗಂಟೆಯಾದ ತತ್‌ಕ್ಷಣವೇ "ಇನ್ನು ಎರಡೇ ತಿಂಗಳು ಪರೀಕ್ಷೆಯಿದೆಯಪ್ಪಾ" ಎಂದು ಹೇಳಿ, ಸ್ನೇಹಿತನ ಮಾರುತ್ತರವನ್ನೂ ಗಮನಿಸದೆ, ಲಕ್ಷಿಸದೆ ಹೊರಟೇಹೋಗುವುದು ಕೂಡ ಈ ಜ್ವರದ ಚಾಳಿ. ಅಂಗಡಿಯಿಂದ ಸಾಮಾನು ತರುವ ಪ್ರಸಂಗ ಬಂದಾಗ, ಆಗಲೆಂದು ಮನೆಯಲ್ಲಿ ಹೇಳಿ ನೆಟ್ಟಗೆ ಅಂಗಡಿಗೆ ಹೋಗಿ, ತರಬೇಕಾದ ಸಾಮಾನನ್ನು ಮರೆತು, ರಾತ್ರಿ ಓದಿದ ಪಾಠಗಳೇ ಜ್ಞಾಪಕಕ್ಕೆ ಬಂದು, ಆ ಅಂಗಡಿಯವನ ಮುಂದೆ ಅವಸ್ಥೆ ಪಟ್ಟು, ಮನೆಗೆ ವಾಪಸು ಹೋಗಬೇಕಾಗುವುದೂ ಈ ಜ್ವರದ ಪ್ರಭಾವದಿಂದಲೇ. ಬೀದಿಯಲ್ಲಿ ಹೋಗುವಾಗ ತಲೆತಗ್ಗಿಸಿಕೊಂಡು ಕೈಬೆರಳುಗಳಿಂದ ವಾಯು ಮಂಡಲದಲ್ಲಿ ಪ್ರಶ್ನೆ, ಉತ್ತರ, ಲೆಕ್ಕ, ಚಿತ್ರ ಎಲ್ಲಾ ಬರೆಯುತ್ತಾ ಮೈಮೇಲಿನ ಪರಿವೆಯಿಲ್ಲದೆಯೆ ಹೋಗುವುದೂ, ಅಕಸ್ಮಾತ್ತಾಗಿ ಮೋಟಾರು 'ಹಾರ್‍ನ್' ಶಬ್ದ, ಸೈಕಲ್ 'ಬೆಲ್' ಶಬ್ದ ಕೇಳಿ ಬೆಚ್ಚಿಬಿದ್ದು, ಪಕ್ಕದಲ್ಲೇ ಬರುವ ಜಟಕಾ ಸಾರಥಿಯಿಂದ 'ಏನ್ಸಾಮಿ, ಮೈಮೇಲೆ ಗ್ಯಾನಾ ಇಲ್ಲಾ?' ಎಂದು ಎನ್ನಿಸಿಕೊಂಡು, ಬೀದಿಯವರ ಮುಂದೆ ಮಾನಭಂಗಪಡುವುದೂ ಇದೇ ಜ್ವರದ ಹಾವಳಿಯಿಂದಲೆ.

ಇನ್ನು ಉಲ್ಬಣಾವಸ್ಥೆಯ ಜ್ವರಪೀಡಿತನ ಬಳಿ ಹೋಗೋಣ. ಅವನನ್ನು ಮಾತನಾಡಿಸಿ; ಅವನು ಮರುಮಾತನಾಡಲಾರ. ಅವನ ಗಂಟಲು ಕಟ್ಟಿದೆ. ಮೂಗು ತೊಂಡೆಕಾಯಿಯಾಗಿದೆ. ಚಾತಕಪಕ್ಷಿಯ ಗಂಟಲು ಕಟ್ಟಿಹೋಗಿ ಹೊಸ ಮೇಘ ಮಳೆಯ ಹನಿ ಸುರಿಸಿದ ಮೇಲೆಯೇ ಅದು ಕೂಗಲು ಶಕ್ತವಾಗುವಂತೆ ಈತನ ಸ್ಥಿತಿಯೂ ಆಗಿದೆ. ಪರೀಕ್ಷೆಯ ಮೇಘ ಬಂದು ಹಲವಾರು ದಿನ ಗುಡುಗಾಡಿ ಕೊನೆಗೊಂದು ದಿನ ರಿಸಲ್ಟ್ ಮಳೆಯನ್ನು ಸುರಿಸಿದ ಮೇಲೆಯೆ ನೀವು ಅದೇ ಬಾಯಿಂದ ಮುತ್ತಿನಂಥ ಮಾತುಗಳನ್ನು ಕೇಳಿ ಕೃತಾರ್ಥರಾಗಬಹುದು.

"ಏನೋ ರಾಮೂ?" ಮಾತಿಲ್ಲ. "ಓದಿದ್ದಾಯ್ತೇನೋ?" "ಇನ್ನೂ ಇಲ್ಲ, ಕಣೋ." "ಎಲ್ಲೀವರೆಗೆ ಓದಿದೆಯೋ?" "ಇನ್ನೂ ಅರ್ಧ ಕೂಡ ಮುಗಿಸಿಲ್ವೋ."

"ಅವನ್ನ ನೋಡೋ, ಎಲ್ಲಾ ಮುಗಿಸಿ ಈವಾಗಾಗಲೇ ಮೂರನೆ ಸರ್ತಿ ರಿವೈಸ್ ಮ್ಯಾಡ್ತಾ ಇದ್ದಾನೆ." "ಅವನಿಗೇನಪ್ಪ! ಮೊದಲಿಂದ ಓದ್ಬಿಟ್ಟ, ಇನ್ನೂ ಏನು ಓದ್ತಾನೋಪ್ಪ ಹಾಳು!"

ಸರಿ, ಇಲ್ಲಿಂದ ಶುರುವಾಗುತ್ತೆ, 'ಅವನ' ಮೇಲೆ ಅಸೂಯೆ! 'ಈವಾಗಾಗಲೇ ಮೂರುಸಲ ರಿವೈಸ್ ಮಾಡಿದ್ದಾನಂತೆ. ನಾನಿನ್ನೂ ಎರಡೇ ಸಲ ರಿವೈಸ್ ಮಾಡಿರೋದು. ಏನಾದರೂ ಮಾಡಿ ಅವನನ್ನು ಕೆಡವಿಬಿಡಬೇಕು' ಎಂಬ ಸಂಕಲ್ಪ! ಪೈಪೋಟಿ! ಯಾರಾದರೂ 'ಓದಿದ್ದೀಯೇನೋ ರಾಮು?' ಎಂದು ಕೇಳಿದರೆ, ಇಲ್ಲಾ ಎನ್ನುವ ಸುಳ್ಳು ಬೇರೆ! ಈ ಜ್ವರದ ಹಿಂದೆ ಇವೆಲ್ಲಾ ಬೆಳೆದುಕೊಂಡು ಹೋಗುತ್ತಾ ಇರುತ್ತದೆ. 'ರಾಮೂ, ಸ್ವಲ್ಪ ಈ ಪ್ರಶ್ನೆಗೆ ಉತ್ತರ ಹೇಳೋ' ಎಂದು ಕೇಳಿದರೆ 'ನಂಗೊತ್ತಿಲ್ಲಾ ಕಣೋ' ಎನ್ನುವ ಸುಳ್ಳು ಬೇರೆ. ಪರೀಕ್ಷೆ ಜ್ವರ ಬರುವ ತನಕ ನಾವು ಯಾರನ್ನು ಏನು ಬೇಕಾದರೂ ಕೇಳಬಹುದು. ಆದರೆ ಆ ಜ್ವರ ಬಂತು ಎಂದಮೇಲೆ ಎಷ್ಟೇ ಸ್ನೇಹಿತರಿರಲಿ, ಒಬ್ಬನಿಗೆ ತಿಳಿದುದನ್ನು ಇನ್ನೊಬ್ಬನಿಗೆ ತಿಳಿಸಲಾರ. ಅಸೂಯೆ ಎಂಬ ದೆವ್ವ ಬಂದು ಮೈಮೇಲೆ ಏರಿಕೊಂಡಿರುತ್ತದೆ!

ಪರೀಕ್ಷೆ ಬಂದೇಬಿಟ್ಟಿತು. ಪರೀಕ್ಷೆಯ ಹಾಲಿಗೆ ಹೋಗಿ ಕೂತದ್ದು ಆಯಿತು. ಮೈಯೆಲ್ಲಾ ಬೆವರುತ್ತಾ ಇದೆ. ಕೈ ನಡುಗುತ್ತಾ ಇದೆ! ತುಟಿ

ಬಾಯಿ ಒಣಗಿಹೋಗಿದೆ! ಮುಖವೆಲ್ಲಾ ಕೆಂಪಾಗಿದೆ! ಕೆಂಗಣ್ಣು ಹೆದರುತ್ತಾ ಇದೆ! ಪರೀಕ್ಷೆಗೆ ಹೊತ್ತಾಗುತ್ತಲ್ಲಾ ಎಂಬ ಭಯದಿಂದ ಅರೆಹೊಟ್ಟೆ ಊಟ ಮಾಡಿ ಬಂದದ್ದರ ಪರಿಣಾಮವಾಗಿ ಹೊಟ್ಟೆ ತಾಳಹಾಕುತ್ತಾ ಇದೆ. ಈ ಅವಸ್ಥೆಯಲ್ಲಿ ಪ್ರಶ್ನಪತ್ರಿಕೆಯನ್ನು ಈಸಿಕೊಂಡಿದ್ದಾಯಿತು. ಇನ್ನೇನು ಬರೆಯಬೇಕು, ಲೇಖಣಿಯು ಮುಳ್ಳು ಅರ್ಧ ಬರೆದು 'ಕರ್‍ರ್‍ಕರ್‍ರ್' ಎನ್ನುತ್ತದೆ, ಮಸಿ ಬಾರಲು ಒಲ್ಲದೆ ನಿಲ್ಲುತ್ತದೆ. ಮೊಟ್ಟಮೊದಲು ಅಪಶಕುನ. ಎದೆ ಮೊದಲಿಗಿಂತಲೂ ನೂರುಮಡಿ ಹೊಡೆದುಕೊಳ್ಳುತ್ತಾ ಇದೆ. ಹೀಗೆಯೇ ಬಿಟ್ಟರೆ ಎದೆ ಒಡೆದು ಹೋದೀತೋ ಎಂಬ ಹೆದರಿಕೆಯುಂಟಾಗುತ್ತದೆ. ಬರುತ್ತಿದ್ದ ಉತ್ತರ, ಉರು ಹಚ್ಚಿದ್ದ ಉತ್ತರ, ಯೋಚಿಸಬೇಕಾದ ಉತ್ತರ ಹೊಳೆಯುವುದಿಲ್ಲ. ಈ ಗಾಬರಿಯಲ್ಲಿ ಪ್ರಶ್ನಪತ್ರಿಕೆ ಹಾರಿಹೋಗುತ್ತದೆ. ಸರಿ, ಹದ್ದಿನಂತೆ ಕಾಯುತ್ತಿದ್ದ 'ಸೂಪರ್‌ವೈಸರ್' ಕಣ್ಣುಬಿತ್ತು. ಸ್ವಲ್ಪ ಹೊತ್ತಿಗಾಗಲೇ ಪಕ್ಕದವನ ಉತ್ತರ ನೋಡಬೇಕೆಂದೆನಿಸುತ್ತದೆ. ಕಣ್ಣು ಮೆಲ್ಲಗೆ ಹುಡುಕುತ್ತದೆ. ಲೇಖಣಿ ಸದ್ದಿಲ್ಲದೆ ಕದ್ದು ಬರೆಯುತ್ತದೆ. ಎದೆಯ ಡವಡವ ಸ್ವಲ್ಪ ಕಮ್ಮಿಯಾಗುತ್ತದೆ. 'ಗೆದ್ದೆ ನಪ್ಪಾ' ಎನ್ನುವ ಹೊತ್ತಿಗೆ 'ಸೂಪರ್‌ವೈಸರ್' ಬಂದು 'ಕಾಪಿ ಮಾಡುತ್ತಿದ್ದೀಯಾ?' ಎಂದು ಛೀಮಾರಿ ಮಾಡಿ ಆಚೆಗೆ ಅಟ್ಟಬಿಡುತ್ತಾನೆ. ಇಲ್ಲಿಗೆ ಒಂದು ವರುಷದ ಬಾಳು ದುರಂತವಾಗಿ ಕೊನೆಗಾಣುತ್ತದೆ. ಪರೀಕ್ಷಾಜ್ವರದ ಫಲಿತಾಂಶ ಇದು ಒಂದು.

ಮೇಲಿನದೇ ಎಲ್ಲವೂ ಅನುಭವವಾಗುತ್ತದೆ. ಆದರೆ 'ಕಾಪಿ' ಮಾತ್ರ ಮಾಡುವುದಿಲ್ಲ. ಸ್ಫೂರ್ತಿ, ಲೇಖಣಿ, ಎರಡೂ ಒಣಗುತ್ತವೆ. ಬರೆಯಲು ಅಂಶವೇ ಹೊಳೆಯದು, ಹೊಳೆದರೂ ಲೇಖಣಿ ಬರೆಯದು. ರೋಷದಿಂದ ಎತ್ತಿ ಲೇಖಣಿಯನ್ನು ಕುಕ್ಕುತ್ತಾನೆ. ಮಸಿ ಎತ್ತಿ ಕೊಡವುತ್ತಾನೆ. ಹಾಳೆಗೆಲ್ಲಾ ಮಸಿ ಬೀಳುತ್ತದೆ. ಕಾಗದ ಹೊಲಸಾಗುತ್ತದೆ. ದುರದೃಷ್ಟವಶಾತ್ ಮಸಿಯ ಕುಡಿಕೆ ಕೆಳಗೆ ಬಿದ್ದರೂ ಬೀಳಬಹುದು. ಕೈ ಮೈಯೆಲ್ಲಾ ಮಸಿಯಲ್ಲಿ ಮುಳುಗಿಸಿ, ಹುಲಿವೇಷ ಹಾಕಿಕೊಂಡು, ನಡುಗುವ ಕೈಗಳಿಂದ ಹಾಳೆಯನ್ನು ಜೋಡಿಸಿ, "ನನಗೆ ಕಾದು ನಿಂತಿರುವುದೇ 'ಫೇಲು'" ಎಂದಂದುಕೊಂಡು ಬರುವುದು ಎರಡನೆಯ ಮಾದರಿ.

'ರ್‍ಯಾಂಕ್' ಹೊಡೆಯಬೇಕೆಂದಿದ್ದ ವಿದ್ಯಾರ್ಥಿಗೆ, ಅವನು ಮಿತಿಮೀರಿ

ಓದಿರುವುದರಿಂದ ಕೆಲವುವೇಳೆ ಅವನು ಬರೆದ ಉತ್ತರಗಳು, ಅವನ ದುರದೃಷ್ಟದಿಂದ, ಅಸಂಬದ್ಧವಾಗಿ ಅಪ್ರಯೋಜಕವಾಗುವುದು ಪರೀಕ್ಷಾಜ್ವರದಿಂದಾಗಬೇಕಾದ ಸ್ವಾಭಾವಿಕ ಪರಿಣಾಮ. ಆದರೆ ಅವನ ಅದೃಷ್ಟವಶಾತ್, ಉತ್ತರಗಳೆಲ್ಲಾ ಸಮರ್ಪಕವಾಗಿ ಬಂದು, ಅವನ ಜ್ವರ ತುಸುಮಟ್ಟಿಗೆ ಕಡಮೆಯಾಗುತ್ತಾ ಬಂದು, ಪರೀಕ್ಷೆಯೊಂದಿಗೇ ಪೂರ್ತಿಯಾಗಿ ಆ ಜ್ವರ ಆರಿಹೋಗುವುದೂ ಉಂಟು. 'ವಜ್ರ ವಜ್ರವನ್ನು ತುಂಡರಿಸು'ವಂತೆ, ಈ ಜ್ವರ ಜ್ವರವನ್ನು ಕತ್ತರಿಸುತ್ತದೆ. ಇಂತಹ ಪರಿಣಾಮ ಪ್ರತಿಯೊಬ್ಬರ ಮೇಲೂ ಆಗುವುದಾದರೆ ಅವರ ಕೈ ಹಿಡಿಯುವವರಾರು?

ಪರೀಕ್ಷಾಜ್ವರ ಹೀಗೆ ಎಲ್ಲಾ ವಿದ್ಯಾರ್ಥಿಗಳಲ್ಲೂ ನೆಲೆಗೊಂಡು, ಅದರಿಂದ ಅನೇಕ ಉಪಕಾರವನ್ನೂ ಹೆಚ್ಚುಮಟ್ಟಿಗೆ ಅನ್ಯಾಯವನ್ನೂ ಮಾಡುತ್ತಿರುವುದು ಶೋಚನೀಯವಾದ ಸಂಗತಿಯಾಗಿದೆ. ಈ ಜ್ವರವನ್ನು ಹೊಡೆದೋಡಿಸುವುದು ವಿದ್ಯಾರ್ಥಿಗಳೆಲ್ಲರ ಆದ್ಯ ಕರ್ತವ್ಯ. ವಿದ್ಯಾರ್ಥಿಗಳಲ್ಲಿ ಗುಪ್ತವಾಹಿನಿಯಾಗಿ ಇರುವ ಈ ಜ್ವರವನ್ನು ಹೆಚ್ಚಿಸುವವರು ಉಪಾಧ್ಯಾಯರೇ ಎಂದು ಘಂಟಾಘೋಷವಾಗಿ ಹೇಳಬಹುದು. ಏಕೆಂದರೆ ಅವರು 'ನೋಡಿ, ಪರೀಕ್ಷೆಗೆ ಕಷ್ಟವಾದ ಪ್ರಶ್ನೆಗಳು ಬರುತ್ತವೆ. ಈ ವಿಷಯದಲ್ಲಂತೂ ಅತಿ ಕಠಿನವಾದ ಸಮಸ್ಯೆಗಳು ಬರುವುವು. ನೀವು ಹೀಗೆಯೇ ಇದ್ದರೆ, ನಿಮಗೆ ಖಂಡಿತವಾಗಿಯೂ ಪಾಸಾಗುವುದಿಲ್ಲ' ಮುಂತಾಗಿ ಹೆದರಿಸುವುದೇ ಈ ಜ್ವರದ ಉತ್ಪತ್ತಿಗೆ ಮೊತ್ತಮೊದಲ ಕಾರಣ. ಮೊದಲು ಕಣ್ಣಿಗೆ ಕೂಡ ಕಾಣದ ಈ ಜ್ವರದ ವಿಷಕ್ರಿಮಿಗಳು ಉಪಾಧ್ಯಾಯರುಗಳಲ್ಲಿ ಕೆಲವರು ಆಡಿದ ಮಾತು, ಮುಟ್ಟಿದ ಪುಸ್ತಕ ಇವುಗಳ ಮೂಲಕ ವಿದ್ಯಾರ್ಥಿಗಳ ಮೈಗೆ ಬಂದು ಸೇರಲು ಆರಂಭಿಸುತ್ತವೆ. ಈ ಕ್ರಿಮಿಗಳು ಎಲ್ಲಾ ಕಾಲದಲ್ಲಿಯೂ ಇದ್ದರೂ ಪರೀಕ್ಷೆ ಹತ್ತಿರಕ್ಕೆ ಬರುಬರುತ್ತಾ ಇವುಗಳ ವೇಗ ಅತಿಯಾಗಿ ಹೆಚ್ಚಾಗುವುದು. ಆದ್ದರಿಂದ ಯಾವ ವಿದ್ಯಾರ್ಥಿಯೇ ಆಗಲಿ ಈ ವಿಷಕ್ರಿಮಿಗಳಿಂದ ದೂರವಿರಲು ಯತ್ನಿಸಬೇಕು. ಒಂದೂರಿನಲ್ಲಿ ಒಬ್ಬನಿಗೆ ತಗುಲಿದ ಈ ಪರೀಕ್ಷೆಯ ಜ್ವರ ಅವನ ಜತೆಯವರಿಗೆ, ಒಬ್ಬನಿಂದ ಮತ್ತೊಬ್ಬನಿಗೆ, ಒಂದೂರಿನಿಂದ ಇನ್ನೊಂದು ಊರಿಗೆ ಬಂದು, ಕೊನೆಗೆ ದೇಶವನ್ನೆಲ್ಲಾ ಆಕ್ರಮಿಸುವುದು. ಆದ್ದರಿಂದ ಈ ಅನಾಹುತದಿಂದ ದೂರವಿರಬೇಕಾದುದು ಎಲ್ಲರ ಮೊದಲ ಕೆಲಸ. ಈ ಅಂಟು

ರೋಗದ ಹರಡುವಿಕೆ ನಾನಾ ವಿಧವಾಗಿರುವುದು. ಮುಖ್ಯವಾಗಿ ಆ ರೋಗದಿಂದ ಪೀಡಿತರಾದವರ ಸಂಪರ್ಕದಿಂದಲೋ ಅಥವಾ ಅವರಿಂದ ವಿಸರ್ಜಿಸಲ್ಪಟ್ಟ ಪ್ರಶ್ನಪತ್ರ, ನೋಟ್ಸು, ಪುಸ್ತಕ ಮೊದಲಾದವುಗಳು ಓದುಬರಹದ ಮೂಲಕ ಬುರುಡೆಗೆ ಸೇರುವುದರಿಂದಲೋ ಅದು ಇತರರಿಗೂ ತಗುಲುವುದು. ಕೆಲವು ವೇಳೆ ಆ ರೋಗದಿಂದ ನರಳುವವರು ಬಿಡುವ ನಿಟ್ಟುಸಿರು, ಪಡುವ ಸಂಕಟಗಳಿಂದಲೂ ಸಮೀಪದಲ್ಲಿರುವವರಿಗೆ ಆ ರೋಗವು ವ್ಯಾಪಿಸುವುದು. ಒಬ್ಬರ ಜೇಬುಗಳಲ್ಲಿ ತುಂಬಿಕೊಂಡ ಈ ಜ್ವರದ ವಿಷಕ್ರಿಮಿಗಳು ಅವರ ಬಟ್ಟೆಯ ಸಂಪರ್ಕದಿಂದಲೂ ಮತ್ತೊಬ್ಬರಿಗೆ ಹರಡುವುದೆಂದು ಬಲ್ಲವರು ನಂಬಿದ್ದಾರೆ.

**ನಿವಾರಣೋಪಾಯಗಳು :**

೧. ಹೆದರಿಸುವ ಉಪಾಧ್ಯಾಯರುಗಳನ್ನು ಯಾವಾಗಲೂ ದೂರವಿಟ್ಟಿರಬೇಕು.

೨. ತಮ್ಮ ಸ್ವಂತ ಅನುಭವಗಳನ್ನು ಹೇಳಿ, ತಾವು ಹೇಗೆ ಪರೀಕ್ಷೆಯಲ್ಲಿ ಜ್ವರದಿಂದ ನರಳಿದೆವೆಂದು ಗೋಳಾಡುವವರ ಮಾತಿಗೆ ಬೆಲೆಗೊಡಬಾರದು.

೩. ಮಿತಿಮೀರಿ ಓದಿ, ಬರೆದು, ಕಣ್ಣು, ಮನಸ್ಸುಗಳನ್ನು ಕೆಡಿಸಿಕೊಳ್ಳಬಾರದು.

೪. ಯಾವುದಾದರೂ ಹಳೆಯ ಪ್ರಶ್ನಪತ್ರ, ನೋಟ್ಸು, ಪುಸ್ತಕ ಮುಂತಾದವು ಎಲ್ಲಿಯಾದರೂ ದೊರೆತರೆ, ಅವುಗಳ ಮೇಲೆ ಸೀಮೆಯೆಣ್ಣೆಯನ್ನೋ ಪೆಟ್ರೋಲನ್ನೋ ಸುರಿದು, ಬೆಂಕಿ ಹೊತ್ತಿಸಿ, ಪೂರ್ತಿ ಬೂದಿಯಾಗುವವರೆಗೂ ಉರಿಸಬೇಕು.

೫. ಪರೀಕ್ಷೆಯ ಕಾಲದಲ್ಲಿ ಪರೀಕ್ಷೆಗೆ ಕುಳಿತಿರುವ ಮತ್ತೊಬ್ಬ ಸಹಪಾಠಿಯೊಡನೆ ಮಾತಾಡುವುದಾಗಲಿ, ಪತ್ರವ್ಯವಹಾರ ಮಾಡುವುದಾಗಲಿ ಬಿಟ್ಟುಬಿಡಬೇಕು.

೬. ಕ್ರಿಮಿಗಳು ವಿಶೇಷವಾಗಿ ಉತ್ಪತ್ತಿಯಾಗಿ ವ್ಯಾಪಿಸುವ ಜನಭರಿತವಾದೆಡೆಗಳಲ್ಲಿ ಸಂಚರಿಸುವುದನ್ನೂ ಹಾಸ್ಟೆಲ್ ಮುಂತಾದೆಡೆಗಳಲ್ಲಿ ವಾಸಿಸುವುದನ್ನೂ ಬಿಟ್ಟುಬಿಡಬೇಕು.

೭. ಪರೀಕ್ಷೆಗೆ ಕುಳಿತವರ ಸಂಕಟ, ನಿಟ್ಟುಸಿರುಗಳ ಸೋಂಕು ತಗಲದಂತೆ ನೋಡಿಕೊಳ್ಳಬೇಕು.

೮. ಶಕ್ತಿಯಿಲ್ಲದಿದ್ದರೂ ರ್‍ಯಾಂಕು ಅಥವಾ ಫಸ್ಟ್‌ಕ್ಲಾಸ್. ಹೊಡೆಯಬೇಕೆನ್ನುವ ಹಟವನ್ನು ಬಿಟ್ಟುಬಿಡಬೇಕು.

೯. ಜ್ವರದ ಲಕ್ಷಣಗಳು ಸ್ವಲ್ಪ ಕಂಡುಬಂದ ತತ್‌ಕ್ಷಣವೇ ಪರೀಕ್ಷೆಗೆ ಹೋಗುವ ಅಭಿಲಾಷೆಯನ್ನೇ ಬಿಟ್ಟುಬಿಡಬೇಕು.

೧೦. ಎಲ್ಲಕ್ಕಿಂತ ಮುಖ್ಯವಾಗಿ **ಪರೀಕ್ಷೆಗಳನ್ನು ನಿಲ್ಲಿಸಿಬಿಡುವುದೇ** ಉತ್ತಮವಾದ ನಿವಾರಣೋಪಾಯ.

ಈ ನಿವಾರಣೋಪಾಯಗಳಲ್ಲಿ ಕನಿಷ್ಟಪಕ್ಷ ಆರನ್ನಾಗಲಿ ಇಲ್ಲವೆ ಕೊನೆಯ ಒಂದನ್ನಾಗಲಿ ಆಚರಿಸಿದಲ್ಲಿ ಈ ಜ್ವರಕ್ಕಾಗಿ ಯಾರೂ ಭಯಪಡಬೇಕಾಗಿಯೆ ಇಲ್ಲ. ಈಗಿನ ಪರಿಸ್ಥಿತಿಯಲ್ಲಿ ಪರೀಕ್ಷೆಗಳನ್ನು ನಿಲ್ಲಿಸುವುದು ಸಾಧ್ಯವಾಗದೆ ಇದ್ದರೂ, ಇದೇ ರೀತಿ ಸುಮಾರು ನೂರು ವರ್ಷಗಳಾದರೂ ಒಂದೇ ಸಮನಾಗಿ ಪ್ರಪಂಚದ ಯುದ್ಧ ನಡೆದಲ್ಲಿ, ಈ ಪರೀಕ್ಷೆಗಳ ಸಂಖ್ಯೆ ಕ್ರಮೇಣ ಕಡಮೆಯಾಗುತ್ತಾ ಹೋಗಿ, ಕೊನೆಗೆ ಇಲ್ಲವೇ ಇಲ್ಲದಂತಾಗಿ, ಹಲವಾರು ವರ್ಷಗಳು ಈ ಅಭ್ಯಾಸ ಮಾನವ ಜಾತಿಯಲ್ಲಿ ಬೆಳೆದು, ಈಗಿನ ಆಹಾರದ ಅಭಾವದ ಪರಿಸ್ಥಿತಿಯಲ್ಲಿ ಉಪವಾಸ ಮನುಷ್ಯರಿಗೆ ಒಗ್ಗಿದ ಹಾಗೆ, ಈ ಪರೀಕ್ಷೆಯಿಲ್ಲದಿರುವುದೂ ಒಗ್ಗಿ, ಈ ಜ್ವರ ಎಂದೆಂದಿಗೂ ಮಾನವ ಜಾತಿಯನ್ನು ಕಾಡಿಸದಿರಲಿ ಎಂಬುದಾಗಿ ದೇವರನ್ನು ಪ್ರಾರ್ಥಿಸೋಣ.

—**ಹಾ. ರಂ. ನಾಗೇಶರಾವ್.**

## ೧೩. ಪರೀಕ್ಷಾ ಜ್ವರ

ವಿದ್ಯಾರ್ಥಿಗಳಲ್ಲಿ ಬಹುಮಂದಿಗೆ ಈ ಜ್ವರ ಬರುವುದು. ಇದರ ಪರಿಣಾಮ ಅವರ ಮನಸ್ಸಿಗೆ ಹಿತವನ್ನುಂಟುಮಾಡದು. ಈ ರೋಗದಿಂದ ನಿವೃತ್ತಿ ಹೊಂದಿದವರಿಗೆ ಇದು ಬಹಳ ಚಿಕ್ಕದೆಂದು ತೋರಿದರೂ ಅನುಭವಿಸುವಾಗ ಮಾತ್ರ ಇದು ಬಹುದೊಡ್ಡ ಬೇನೆ. ಇದು ಮಾನಸಿಕವಾದರೂ ದೇಹಕ್ಕೂ ವ್ಯಾಪಿಸಿ ನಿದ್ರಾಹಾರಗಳನ್ನೂ ವಿರಾಮವನ್ನೂ ವಿನಾಶಮಾಡುತ್ತದೆ. ಇದು

ವರ್ಷದ ಎಲ್ಲಾ ಕಾಲದಲ್ಲಿಯೂ ಇರುವುದಿಲ್ಲ. ವರ್ಷದ ಮೊದಲಿನಲ್ಲಂತೂ ಇದರ ಪರಿವೆಯೇ ಇರುವುದಿಲ್ಲ. ಕಾರಣ: ಇದರಿಂದ ನಿವಾರಣೆ ಹೊಂದಿ ಕೊಂಚ ದಿನ ಮಾತ್ರವಾಗಿರುತ್ತದೆ. ಬೇಸಿಗೆ ರಜದಲ್ಲಿ ಸ್ವಲ್ಪ ವಿಶ್ರಾಂತಿ ಪಡೆ ದಿರುತ್ತೇವೆ. ನವರಾತ್ರಿಯ ಮೊದಲನೇ ಟರ್ಮ್ ಪರೀಕ್ಷೆಯ ಕಾಲಕ್ಕೆ ಈ ರೋಗ ತಲೆದೋರಿದರೂ ವಿಶೇಷವಾಗಿ ತೊಂದರೆಯನ್ನುಂಟುಮಾಡದು. ಕಾಗ ದದ ಅಭಾವದಿಂದ ಈ ಕಾಲದಲ್ಲಿ ಅದು ಕೂಡ ಇಲ್ಲ. ದಸರಾ ರಜ ಮುಗಿಯಿ ತೆಂದರೆ ಇದು ಮೊಳಕೆಯಿಡಲು ಆರಂಭಿಸುತ್ತದೆ. ಕ್ರಿಸ್‌ಮಸ್‌ವರೆಗೆ ಬೆಳೆ ಯುತ್ತಾ ಬರುತ್ತದೆ. ಇದರ ಫಲವಾಗಿ ಕ್ರಿಸ್‌ಮಸ್ ರಜವನ್ನು ನಾವು ನಿರಾ ಯಾಸವಾಗಿ ಕಳೆದರೂ ಮನಸ್ಸಿಗೆ ಮಾತ್ರ ಹಿತವಿರುವುದಿಲ್ಲ. ಫೆಬ್ರುವರಿಗೆ ಪರೀಕ್ಷೆ ಇರುವುದಾದರೆ ಜನವರಿ ಪ್ರಾರಂಭದಲ್ಲಿ ಇದು ಮತ್ತೂ ಪ್ರಭಾವವನ್ನು ಬೀರಿ ಆ ಮಾಸದ ಮಧ್ಯದಲ್ಲಿ ಉಲ್ಬಣಾವಸ್ಥೆಗೆ ಬರುತ್ತದೆ. ಈ ರುಜೆ ನಮಗೆ ಚಿಕ್ಕಂದಿನಲ್ಲಿ ಅಂಟುವುದಿಲ್ಲ. ಇದು ಪ್ರಾರಂಭಿಸುವ ಕಾಲ ಮನುಷ್ಯನ ಆರ್ಥಿಕ ಸ್ಥಿತಿ, ಜ್ಞಾನಾರ್ಜನೆ ಎಂದು ಹೇಳುವುದರ ಆಸೆ, ಇವುಗಳ ಮೇಲೆ ಅವಲಂಬಿ ಸಿರುತ್ತದೆ. ಬಡವನಾದ ವಿದ್ಯಾರ್ಥಿಗೆ ಪ್ರೌಢಶಾಲೆಯ ಪ್ರಥಮ ಪರೀಕ್ಷೆ ಯಲ್ಲೇ ಈ ಜ್ವರ ತನ್ನ ಪ್ರತಾಪವನ್ನು ತೋರುತ್ತದೆ. ದೊಡ್ಡ ದೊಡ್ಡ ತರಗತಿಗೆ ಹೋದಂತೆಲ್ಲಾ ಇದರ ತಾಪವೂ ಹೆಚ್ಚು. ಇದಕ್ಕೆ ಕಾರಣಗಳಷ್ಟನ್ನು ನೋಡೋಣ.

ಇದಕ್ಕೆ ಮುಖ್ಯಕಾರಣ ಮಾನಸಿಕ ಅಶಾಂತಿ, ಆಸೆಗಳಾದರೂ ಸನ್ನಿವೇ ಶಕ್ಕೆ ತಕ್ಕಂತೆ ಇದು ಹರಡುತ್ತದೆ. ನನ್ನಂತಹ ಸಾಮಾನ್ಯ ವಿದ್ಯಾರ್ಥಿಯ ಅನುಭವದಲ್ಲಿ ಓದದೆ ಇರುವುದು ಒಂದು ಕಾರಣ, ನಮಗೆ ಗಮನವಿಲ್ಲದಿದ್ದರೂ ಇನ್ನೊಬ್ಬರ ಮೇಲಿನ ಆಕ್ರೋಶಕ್ಕೆ ಈ ಎಣ್ಣೆಯ ಅಭಾವದ ಕಾಲದಲ್ಲೂ ದಿನಕ್ಕೆ ಆರು ಗಂಟೆಕಾಲ ಓದಬೇಕೆಂಬ ಹಟ. ಆದರೆ ಈ ಹಟಕ್ಕೆ ಪ್ರತಿಕಕ್ಷಿ ಯಾಗಿ ನಿದ್ರೆ. ನಿದ್ರೆ ನಮ್ಮೊಡನೆ ಕಾದಾಡಿ ನಮ್ಮನ್ನು ಸೋಲಿಸಿ ಕಣ್ಣು ಮುಚ್ಚಿಸಿಯೇ ಬಿಡುತ್ತದೆ. ನಿದ್ರೆಯಲ್ಲಾದರೂ ಜ್ವರವನ್ನು ತೀರಿಸೋಣವೆಂದರೆ ಆಗಲೇ ಮನೆಯವರು ಕೂಗಾಡುತ್ತಿರುತ್ತಾರೆ. ಹೊರಗೆ ಹೋಗಿ ನೋಡಿ ದರೆ ಬೆಳಗಿನ ಜಾವ ಎಂಟು ಗಂಟೆ. ಮುಂದಿನ ನಮ್ಮ ಕಾರ್ಯ: ಬೈಯುವ ಉಪಾಧ್ಯಾಯರ ನಾಮಸ್ಮರಣೆ, ಅವರ ಪಾಠದ ಬಾಯಿಪಾಠ. ಸಾಲದುದಕ್ಕೆ

ನಾವು ಅನೇಕ ಕ್ಲಾಸುಗಳಿಗೆ ತಪ್ಪಿಸಿಕೊಂಡಿರುವುದರಿಂದ ಆ ಪಾಠಗಳನ್ನು ಓದಿದರೂ (ಸಾಮಾನ್ಯವಾಗಿ ಓದುವುದಿಲ್ಲ) ಗೊತ್ತಾಗುವುದಿಲ್ಲ. ಇವುಗಳನ್ನೆಲ್ಲಾ ಜ್ಞಾಪಿಸಿಕೊಂಡ ಹಾಗೆಯೇ ಜ್ವರ ಕೆರಳುತ್ತದೆ. ಈ ಕಾಲದ ವಿದ್ಯೆಯಿಂದ ಮುಕ್ತಿ ಹೊಂದಬೇಕಾದರೆ ಪರೀಕ್ಷೆಗೆ ಕುಳಿತು ಬರೆದೇ ತೇರ್ಗಡೆಹೊಂದಬೇಕು. ನಮಗೆ ಗೊತ್ತಿಲ್ಲದಂತೆಯೆ ಯಾವುದೋ ಒಂದು ಯೋಚನೆ ನಮ್ಮನ್ನು ಬಾಧಿಸುತ್ತಿರುತ್ತದೆ. ಮುಂದಿನ ಕಾರಣ: “ಹೇಗಾದರೂ ಪಾಸಾಗಲೇಬೇಕು. ಇದು ನಮಗೆ ಭಗೀರಥ ಪ್ರಯತ್ನವೆ ಸರಿ. ಈ ವರ್ಷ ನಮಗೇನಾದರೂ ವಿಶ್ವವಿದ್ಯಾನಿಲಯದ ಯೋಗ್ಯತಾಪತ್ರ ದೊರೆಯದಿದ್ದರೆ ನಾವು ಸತ್ತಂತೆಯೆ ಸರಿ” ಎನ್ನುವ ಮನೋಭಾವ. ಏಕೆಂದರೆ: ಈ ಪತ್ರವಿಲ್ಲದಿದ್ದರೆ ನಮಗೆ ಕಾರ್ಯ ಸಿಕ್ಕುವುದು ಕಷ್ಟ. ಸಾಲದುದಕ್ಕೆ ತಂದೆತಾಯಿ ಅಥವಾ ಪೋಷಕರು ತಮ್ಮ ಹುಡುಗ ತಮ್ಮ ಗೌರವ ಘನತೆಗಳಿಗೆ ಕುಂದು ತರುತ್ತಾನೆಂದು ತಿಳಿದು ‘ಓದು’ ಎಂದು ಬೈಯುವುದು. ಈ ರೀತಿ ಜೀವನದ ಹೋರಾಟ, ತಾಯ್ತಂದೆಯರ ಬೈಯಾಟ ಇವುಗಳ ಮಧ್ಯೆ ಸಿಕ್ಕಿರುವ ಕೃಪಣ ವಿದ್ಯಾರ್ಥಿಯ ಸ್ಥಿತಿ ಪರಮಾತ್ಮನಿಗೇ ಪ್ರೀತಿ. ಹಾಗೂ ಹುಡುಗ ಧೈರ್ಯಶಾಲಿ ಎನ್ನೋಣ. ದೀನಬಂಧು ಏರ್ ಕ್ರಾಫ್ಟ್ಸನ್ನೋ ಅಥವಾ ಸರ್ವಬಂಧು ರೆಕ್ರೂಟಿಂಗ್ ಆಫೀಸನ್ನೋ ಆಶ್ರಯಿಸುತ್ತಾನೆ ಎನ್ನೋಣ. ಇಂತಹವನಿಗೂ ಇತರರು ಭಯತೋರಿಸಿಯೋ ಅಥವಾ ಆಸೆ ತೋರಿಸಿಯೋ ಪುನಃ ಈ ವಿದ್ಯಾರ್ಜನೆಯ ಮಾರ್ಗಕ್ಕೆ ಎಳೆಯುತ್ತಾರೆ. ಆತನಿಗೆ ಪರೀಕ್ಷೆಯ ಭಯ ಮತ್ತೂ ಜೋರು. ಈ ವಿದ್ಯಾಪ್ರಪಂಚದ ಆಸಕ್ತಿಯನ್ನು ತೊರೆದಾತ ಮತ್ತೆ ಇದರಲ್ಲೇ ಮಗ್ನನಾಗಿ ವಿಚಿತ್ರಾವಸ್ಥೆಗೆ ಗುರಿಯಾಗುತ್ತಾನೆ. ಈ ಜ್ವರಕ್ಕೆ ಕೆಲವು ಉಪಾಧ್ಯಾಯರೂ ಕಾರಣರಾಗಬಹುದು. ಪಾಠವನ್ನು ಚೆನ್ನಾಗಿ ಮಾಡದೆಯೋ ಅಥವಾ ಮುಗಿಸದೆಯೋ ಇದ್ದರಾಯಿತು. ಇಲ್ಲವೆ ಯಾವಾಗಲೂ ಬೈಯುತ್ತಿದ್ದು, ವಿದ್ಯಾರ್ಥಿಗೆ ತಾನು ತೇರ್ಗಡೆ ಹೊಂದಬಲ್ಲೆನೆ ಎಂಬ ಸಂಶಯವನ್ನುಂಟುಮಾಡಬಹುದು. ಇಷ್ಟಕ್ಕೆ ಮೀರಿದ್ದು ಮತ್ತೊಂದಿದೆ; ಅದನ್ನೇ ವಿಧಿ ಅಥವಾ ಅದೃಷ್ಟ ಎಂದು ಮುಂತಾಗಿ ಹೇಳುವುದು. ವಿಧಿಯಲ್ಲಿ ನಂಬಿಕೆಯುಳ್ಳ ನಮ್ಮಂಥವರಿಗೆ ಅದೇ ಸರ್ವದೈವ. ನಾವು ಅದಕ್ಕೆ ಶರಣಾಗುತ್ತೇವೆಯೆ ಹೊರತು ಪುಸ್ತಕವನ್ನು ಓದುವ ಗೋಜಿಗೇ ಹೋಗುವುದಿಲ್ಲ. ಇಲ್ಲಿ ಒಂದು ಸಂಶಯ ಬರಬಹುದು; ಏನೆಂದರೆ, ವಿಧಿಯಲ್ಲಿ

ಇಷ್ಟು ನಂಬಿಕೆಯುಳ್ಳಾತನಿಗೆ ವಿಧಿ ಅನುಕೂಲವಾಗಿ ಪರಿಣಮಿಸಿ ತೇರ್ಗಡೆ ಹೊಂದಿಸಬಹುದು. ಅವನಿಗೆ ಪರೀಕ್ಷೆಯ ಭಯವೇಕೆ? ಇದಕ್ಕೆ ಸಮಾಧಾನ ವಿಷ್ಟೆ: ಮನುಷ್ಯನಿಗೆ ಕೆಟ್ಟ ಪರಿಣಾಮದ ಕಡೆಗೇ ಮನಸ್ಸು. ವಿಧಿ ಅನಾನುಕೂಲವಾಗಿ ಪರಿಣಮಿಸಬಹುದೆಂದೇ ನಮ್ಮ ಯೋಚನೆ. ಅದನ್ನು ಅನುಕೂಲವಾಗುವಂತೆ ಒಲಿಸಿಕೊಳ್ಳಲೋಸುಗವೇ ಸತತವೂ ಅದರ ಭಕ್ತರಾಗುವುದು. ಈ ಕುತ್ತ ಪ್ರಾಪ್ತವಾಗಲು ಮತ್ತೊಂದು ಅಚಾತುರ್ಯ ನಮಗೆ ಅಗೋಚರವಾಗಿ ಸಂಭವಿಸುತ್ತದೆ. ಹಿಂದೆ ಇದ್ದ ಉತ್ತಮ ವರ್ಗದ ವಿದ್ಯಾರ್ಥಿಗಳಿಗೆ ನಮ್ಮನ್ನು ನಾವೇ ಹೋಲಿಸಿ ನೋಡುತ್ತೇವೆ. ಆಗ ನಾವು ಪರೀಕ್ಷೆಯ ಮಟ್ಟವನ್ನು ಗಮನಿಸುವುದಿಲ್ಲ. 'ಅಂತಹ ವಿದ್ಯಾರ್ಥಿಗಳಿಗೇ ಅಪಜಯವಾದ ಮೇಲೆ ನಮಗಿನ್ನೇನು ಗತಿ?' ಎಂದು ಭೀತಿಯುಂಟಾಗುತ್ತದೆ. ಇದು ಜ್ವರಕ್ಕೆ ಮತ್ತೂ ಅನುಕೂಲಿಸಿದಂತೆ. ಇದು ನಮ್ಮ ಮನೋವೃತ್ತಿಯಾಯಿತು. ಅದಕ್ಕೆ ಸಂಬಂಧಿಸಿದ ರೋಗಾನುಕೂಲ ಕಾರಣಗಳನ್ನೂ ತಿಳಿದದ್ದಾಯಿತು. ಇನ್ನು ಪಾಠ ಪ್ರವಚನಗಳಿಗೆ ಸಂಬಂಧಿಸಿದವನ್ನು ನೋಡೋಣ. ನಮಗಿಟ್ಟಿರುವ ಪಠ್ಯ ಪುಸ್ತಕಗಳು ವಿದೇಶದಿಂದ ಬರಬೇಕಾದವು. ಈಗ ಅವು ಬರುವಂತಿಲ್ಲ. ಉಪಾಧ್ಯಾಯರು ಬರೆಸಿದ ನೋಟ್ಸನ್ನು ಬರೆದುಕೊಂಡಿಲ್ಲ. ಬರೆದುಕೊಂಡ ಸ್ವಲ್ಪವನ್ನೂ ಓದಲು ಆಗುವುದಿಲ್ಲ. ಆ ಚರಿತ್ರೆ, ತರ್ಕ ಇವುಗಳಲ್ಲಿ ನಿಯಮಿಸಿರುವ ಭಾಗ ವಿಶೇಷ ಹೆಚ್ಚು. ಓದುವುದಕ್ಕೆ ಕಾಲವೇ ಇಲ್ಲ. ಇದೊಂದು ಭಯ. ಪರೀಕ್ಷಾ ಜ್ವರಕ್ಕೆ ಮಾನಸಿಕ ಅಶಾಂತಿ ಕಾರಣವೆಂದು ಹೇಳಿದುದಾಯಿತು. ಈ ಎಲ್ಲಾ ತರಹದ ಭಯ ಭೀತಿ ಕಷ್ಟ ಕೋಟಲೆಗೆ ಸಿಕ್ಕಿದ ಮನಸ್ಸಿಗೆ ಶಾಂತಿ ಎಲ್ಲಿಂದ ಬರಬೇಕು?

ಮೊತ್ತದಲ್ಲಿ ಹೇಳುವುದಾದರೆ ನೈಜವಾದ ಜ್ಞಾನದ ಮಾರ್ಗವನ್ನು ಬಿಟ್ಟು ಕೇವಲ ಯೋಗ್ಯತಾಪತ್ರ ಪ್ರಾಪ್ತಿಯೇ ನಮ್ಮ ಧ್ಯೇಯವೆಂದು ಭಾವಿಸುವುದೇ ಈ ಪರೀಕ್ಷಾಜ್ವರಕ್ಕೆ ಕಾರಣ. ಆದರೆ ಇದನ್ನು ತಪ್ಪಿಸಿಕೊಳ್ಳಲು ಹೋರಾಡಿ, ಯೋಗ್ಯತಾಪತ್ರವನ್ನು ಪಡೆಯದಿದ್ದರೆ ಅಂತಹವನಿಗೆ ಈ ಕಾಲದ ಐಹಿಕ ಜೀವನದಲ್ಲಿ ಒಳ್ಳೆಯದೆಂದು ಭಾವಿಸಲ್ಪಡುವ ಸ್ಥಾನ ಸಿಕ್ಕುವುದಿಲ್ಲ. ಇದರಿಂದ ಜನಗಳ ದೃಷ್ಟಿಯಲ್ಲಿ ಆ ವ್ಯಕ್ತಿಯ ಘನತೆ ಗೌರವಗಳಿಗೆ ಧಕ್ಕೆಯುಂಟಾದಂತೆಯೇ.

ಈ ರೋಗಕ್ಕೆ ಗುರಿಯಾಗುವವರನ್ನು ನಾವು ಕಾರಣಗಳ ಮೂಲಕ ನೋಡಿದುದಾಯಿತು. ಅದನ್ನೇ ಕೊಂಚ ವಿಮರ್ಶಿಸೋಣ. ಯಾವನು ಪ್ರಪಂಚದ ಬಾಹ್ಯಾಡಂಬರಗಳಿಗೆ ಸಿಲುಕದೆ, ಜ್ಞಾನಾರ್ಜನೆಯೇ ಮುಖ್ಯ ವೆಂದು ತಿಳಿದು ಅದರ ಸಾಧನೆಗಾಗಿ ಓದಿ ಪರೀಕ್ಷೆಗೆ ಕೂಡುತ್ತಾನೋ ಅಂತಹ ವನಿಗೆ ಈ ರೋಗ ತಗುಲುವುದಿಲ್ಲ. ಅಥವಾ ತಗುಲಿದರೂ ಅವನನ್ನು ಭಾಧಿ ಸುವುದಿಲ್ಲ. ಸಾಮಾನ್ಯವಾಗಿ ಶ್ರೀಮಂತ ಹುಡುಗರಿಗೂ ಇದರ ಜ್ವಾಲೆ ತಾಗು ವುದಿಲ್ಲ. ಅವರು ಗೌರವಕ್ಕಾಗಿ ಅಳುಪಿ, ಜ್ವರದ ಪೀಠಿಕೆಯನ್ನು ನೋಡಿದರೂ ತೇರ್ಗಡೆ ಹೊಂದದೆ ಇರುವುದರಲ್ಲೇ ಅವರಿಗೆ ಒಂದು ಹೆಮ್ಮೆ ಉಂಟಾಗಿ ಅಷ್ಟಾಗಿ ಈ ಜ್ವರವನ್ನು ಲಕ್ಷಿಸರು. ರೋಗದ ಬಲಿಯನ್ನು 'ನೇತಿ'ಮಾರ್ಗದಲ್ಲಿ ಅರಸುವು ದಕ್ಕಿಂತ 'ಇತಿ' ಮಾರ್ಗದಲ್ಲಿ ಮೂಡಿಸೋಣ. ವಿದ್ಯಾರ್ಥಿ ಬಡವನಾಗಿದ್ದು ವೇತನವೋ, ಅರ್ಧಮಾತ್ರ ಶುಲ್ಕವೋ ಅಥವಾ ಪೂರ್ಣ ಶುಲ್ಕ ವಜವೋ ಆಗಿದ್ದು ಓದುತ್ತಿದ್ದರೆ ಅವನಿಗೆ ಜ್ವರದ ಪರಿಣಾಮ ಹೆಚ್ಚು. ಮೇಲಾಗಿ ಹೊಸ ದಾಗಿ ಮದುವೆಯಾಗಿ, ಚೆನ್ನಾಗಿ ಓದದವರನ್ನು ಕಂಡರೆ ಈ ರುಜೆಗೆ ಪ್ರೀತಿ ಬಹಳ, ಅವರ ಇಷ್ಟಕ್ಕೆ ವ್ಯತಿರಿಕ್ತವಾಗಿ ಅವರ ಒಳಹೊಗುತ್ತದೆ. ಅಥವಾ ನನ್ನಂತಹ ಬೈಗುಳಿಗಳ್ಳುಕುವ ವ್ಯೆಗಳ್ಳ ವಿದ್ಯಾರ್ಥಿಗಂತೂ ಜ್ವರ ಬರುವುದು ಖಂಡಿತ. ಒಂದೆರಡು ದಂಡಯಾತ್ರೆಗಳನ್ನು ಮಾಡಿದ್ದರೆ ಈ ರೋಗ ನಮ್ಮಲ್ಲಿ ಅಷ್ಟು ಫಲಕಾರಿಯಾಗದು. ಇದು ಸಣ್ಣ ಸಣ್ಣ ಪಾಠಶಾಲೆಗಳ ಉಪಾಧ್ಯಾಯ ರಿಗೂ ತಪ್ಪಿದ್ದಲ್ಲ. ಆದರೆ ಇದನ್ನು "ಪರಿಕ್ಷಾ ಜ್ವರ" ಎಂದು ಹೇಳಲಾಗುವು ದಿಲ್ಲ. ಅದು "ಫಲಿತಾಂಶದ ಜ್ವರ" ಮಾತ್ರ. ಮೊಂಡುಧೈರ್ಯದ ಹುಡುಗರನ್ನೂ ಪರೀಕ್ಷೆ ಎಂದರೆ ಹರ್ಷಿಸುವವರನ್ನೂ ಕಂಡರೆ ಈ ಜ್ವರ ಹಿಂಜರಿಯುತ್ತದೆ.

ಇದರಿಂದ ಪೀಡಿತನಾದ ಹುಡುಗ ಅಥವಾ ವಿದ್ಯಾರ್ಥಿಯ ಲಕ್ಷಣಗಳನ್ನು ಹೇಳುವುದು ಕಷ್ಟ. ಕವಿಗೆ ಅನುಭವ ಅನುಕಂಪ ಹೆಚ್ಚಿದಂತೆಲ್ಲ ಕಾವ್ಯಕ್ಕೆ ಹೇಗೆ ಕಳೆಕಟ್ಟುವುದೋ ಹಾಗೆ ಈ ಜ್ವರದ ತಾಪವನ್ನು ಹೆಚ್ಚು ಹೆಚ್ಚು ಅನು ಭವಿಸಿದಂತೆಲ್ಲಾ ಆತನ ಅರಿವನ್ನು ವ್ಯಕ್ತಪಡಿಸಲು ಸಾಧ್ಯವಾಗುತ್ತದೆ. ಇದಕ್ಕೆ ಗುರಿಯಾಗಿರುವ ವ್ಯಕ್ತಿಗೆ ನಿದ್ರೆಯೆಂಬುದು ಅವ್ಯಕ್ತವಾಗುತ್ತದೆ. ರಾತ್ರಿಯೆಲ್ಲಾ ಪುಸ್ತಕಗಳೆದಿರಿಗೆ ಕುಳಿತು ಒರಲಿದರೂ ಶಾಂತಿಯಿಲ್ಲ. ಕಾಮಾರ್ತರಾದವರು ಪ್ರಕೃತಿಕೃಪಣರಾಗುವಂತೆ ಈತನೂ ನೋಟ್ಸುಗಳ ಮುಂದೆ ದೀನನಾಗಿ

ಹೋಗುತ್ತಾನೆ. ತನ್ನಲ್ಲಿಲ್ಲದ ಪುಸ್ತಕಗಳನ್ನು ತಿರುಪೆ ಮಾಡಿಯಾದರೂ ತಂದು ತಿರುವಿ ಹಾಕುತ್ತಾನೆ. ಜ್ವರ ಹೆಚ್ಚಿದಂತೆಲ್ಲಾ ಇವನ ಸ್ವಾರ್ಥಬುದ್ಧಿಯೂ ಹೆಚ್ಚುತ್ತದೆ. ಇನ್ನೊಬ್ಬರು ಇವನ ನೋಟ್ಸನ್ನೋ ಮತ್ತಾವ ಪುಸ್ತಕವನ್ನೋ ಕೇಳಿದರೆ ಕೊಡಲಾರ.

ನಿಷ್ಕಾರಣವಾಗಿ ಮನೆಯವರ ಮೇಲೆ ತನ್ನ ಕೋಪಾಟೋಪವನ್ನು ಬೀರುತ್ತಾನೆ. ಯಾವುದಾದರೂ ಮಗು ಬಂದು ಮಸಿಯನ್ನು ಚೆಲ್ಲಿ ಅಥವಾ ಪುಸ್ತಕ ಕಿತ್ತು ಬಂದರೆ ಆಯಿತು, ಆ ಮಗುವಿಗೂ ತನ್ಮೂಲಕ ಮಗುವಿನ ಮಾಲೀಕರಿಗೂ ಸಹಸ್ರನಾಮ. ಯಾವಾಗ ನೋಡಿದರೂ ಗಾಬರಿ ಗಾಬರಿ ಯಾಗಿಯೇ ಇರುತ್ತಾನೆ. ಈ ಗಾಬರಿಯಲ್ಲಿ ಜ್ಞಾಪಕಶಕ್ತಿ ಕೊಂಚ ಕಳೆ ಗುಂದುತ್ತದೆ. ಪರೀಕ್ಷಾ ದೃಷ್ಟಿಯಿಂದ ಓದಹೋಗಿ, ನಿಜವಾಗಿ ಅವನು ಓದಿನ ಧ್ಯೇಯವನ್ನೂ, ಓದಬೇಕಾಗಿರುವುದನ್ನೂ ಬಿಟ್ಟು ನಿಷ್ಪ್ರಯೋಜಕವಾದ ಕೆಲವು ಅಂಶಗಳನ್ನು ಬಾಯಿಪಾಠ ಮಾಡುತ್ತಾನೆ. ಈ ಜ್ವರದ ಅವಧಿಯಲ್ಲಿ ಓದು ವುದು ಹೊರತು ಮತ್ತೇನೂ ಗೊತ್ತಾಗುವುದಿಲ್ಲ. ಹೀಗಾಗಿ, ನಾವು ಏತಕ್ಕಾಗಿ ಓದುವುದು, ಏನನ್ನು ಓದುವುದು, ಓದಿ ಏನುಮಾಡುವುದು ಎಂಬ ಯೋಚನೆ ಗಳಿಗೆ ಅವಕಾಶ ಕೊಡುವುದೇ ಇಲ್ಲ. ಈ ಎಲ್ಲಾ ಲಕ್ಷಣಗಳಿಂದ ಒಡಗೂಡಿ ರುವ ವಿದ್ಯಾರ್ಥಿಯನ್ನು ಕಂಡರೆ 'ಪರೀಕ್ಷಾ ಜ್ವರ ಹಿಡಿದಿದೆ' ಎಂದು ಸುಲಭ ವಾಗಿ ಪತ್ತೆ ಮಾಡಬಹುದು.

ಈ ಜ್ವರ ಲಾಭಕಾರಿಯೆ ಅಥವಾ ಅನರ್ಥವನ್ನುಂಟುಮಾಡುವುದೆ ಎಂಬ ಪ್ರಶ್ನೆ. ಸಾಮಾನ್ಯವಾಗಿ ಜ್ವರ ಎಂದರೆ ಅನರ್ಥವನ್ನುಂಟುಮಾಡು ವುದು ಎಂಬ ಜನಾಭಿಪ್ರಾಯವನ್ನು ನಾನೇನೂ ಸಮರ್ಥಿಸಬೇಕಾಗಿಲ್ಲ. ಈ ಜ್ವರದ ಸತ್ಪರಿಣಾಮಗಳು ತೀರ ಕಡಮೆ. ಇರುವ ಕೆಲವೂ ಜ್ವರಪೀಡಿತ ವ್ಯಕ್ತಿಗೇ ಅನುಕೂಲವಾದವು. ಈ ಕುತ್ತಕ್ಕೆ ತುತ್ತಾದ ವಿದ್ಯಾರ್ಥಿ ಹಗಲೂ ರಾತ್ರಿ ಅಭ್ಯಸಿಸುವುದರಿಂದ ಮನೆಯವರಿಗೆ ಇವನ ಮೇಲೆ ಸಂಪೂರ್ಣ ಸಹಾನು ಭೂತಿ ಇರುತ್ತದೆ. ಇವನಿಗೆ ಬೇಕಾದ ಅನುಕೂಲಗಳನ್ನೆಲ್ಲಾ ಅವರು ಕಲ್ಪಿಸಿ ಕೊಡುತ್ತಾರೆ. ಈತನಾದರೂ ಅಷ್ಟೆ. ತಿಳಿಯಲಿ, ತಿಳಿಯದಿರಲಿ, ತನ್ನ ಕರ್ತವ್ಯ ವನ್ನು ನಿರ್ವಹಿಸುತ್ತಾನೆ. ಅವನ ಕರ್ತವ್ಯಪರಿಪಾಲನಾಶಕ್ತಿಯೂ ಹೆಚ್ಚುತ್ತದೆ. ಸೋಮಾರಿತನ ಕಡಮೆಯಾಗುತ್ತಾ ಬರುತ್ತದೆ. ಇನ್ನೊಬ್ಬರನ್ನು ಅನುಸರಿಸಿ

ಪುಸ್ತಕಗಳನ್ನು ತರಲು ಹುಡುಗ ಪ್ರಯತ್ನಿಸುತ್ತಾನೆ. ತತ್ಫಲವಾಗಿ ಸಹನಾ ಗುಣವೂ ಅನುಸರಣಾ ಸಾಮರ್ಥ್ಯವೂ ಹೆಚ್ಚುವುದು. ಪರೀಕ್ಷೆಗಾಗಿ ಸರ್ವ ತ್ಯಾಗ ಮಾಡಲೂ ಸಿದ್ಧನಾಗುತ್ತಾನೆ. ಅಂತೆಯೇ ಈ ಜ್ವರದ ಪರಿಣಾಮ ಕೆಟ್ಟದ್ದೂ ಹೌದು. ಆದರೆ ಈ ಜ್ವರದಿಂದ ಆವೃತನಾದ ವಿದ್ಯಾರ್ಥಿ ಈ ತರಹ ವಿದ್ಯೆ ಮತ್ತು ಪರೀಕ್ಷೆಗಳಲ್ಲಿ ಜುಗುಪ್ಸೆ ಹೊಂದಿ ನಿಜವಾದ ವಿದ್ಯೆಯ ಕಡೆಗೆ ತೆರಳಬಹುದು, ಕಣ್ದೆರೆಯಬಹುದು.

ಈ ಜ್ವರ ಅನೇಕ ದುಷ್ಪರಿಣಾಮಗಳನ್ನೂ ಉಂಟುಮಾಡುತ್ತದೆ, ಈ ಜ್ವರದಿಂದ ಪೀಡಿತನಾದ ಮನುಷ್ಯನಿಗೆ ಮಾನಸಿಕ ಶಾಂತಿ ತಪ್ಪುತ್ತದೆ. ಶಾಂತಿ ತಪ್ಪಿದ ಮೇಲೆ ವಸ್ತುಸ್ಥಿತಿಯನ್ನು ಕೂಲಂಕಷವಾಗಿ ವಿಮರ್ಶಿಸಿ ಯೋಚನೆ ಮಾಡಲಾರ. ಆದುದರಿಂದ ದುರ್ಮಾರ್ಗಪ್ರವೃತ್ತನಾಗಬಹುದು. ಈ ಜ್ವರವೇ ಮುಖ್ಯ ಕಾರಣವಾಗಿ ದೇಶಸೇವೆ, ಸಮಾಜಸುಧಾರಣೆ ಇತ್ಯಾದಿ ಪ್ರಪಂಚದ ಇತರ ವ್ಯವಹಾರಗಳಿಂದ ದೂರನಾಗುತ್ತಾನೆ. ಇಂತಹವನಿಂದ ಜನಾಂಗಕ್ಕೆ ಒಳ್ಳೆಯದಾಗುವುದಿಲ್ಲ. ಇವನ ಕೋಪಾವೇಶಗಳಿಗೆ ಸಿಲುಕಿ ಮನೆಯವರು ಜರ್ಜರಿತರಾಗುತ್ತಾರೆ. ಇವನು ಗಾಬರಿಯಲ್ಲಿ ಏನೋ ಮಾಡಹೋಗಿ ಏನೋ ಮಾಡಿಬಿಡುತ್ತಾನೆ. ಕೊನೆಗೆ ಪರೀಕ್ಷೆಗೆ ಲೇಖನಿಯನ್ನು ತೆಗೆದುಕೊಂಡು ಹೋಗುವುದನ್ನೂ ಮರೆತುಬಿಡುತ್ತಾನೆ.

ಇದರ ಪರಿಹಾರೋಪಾಯಗಳು ಮಾತಿನಲ್ಲಿ ಬಹಳ ಸುಲಭವಾದರೂ ಆಚರಿಸುವುದು ಕಷ್ಟವೇ ಆಗುತ್ತವೆ. ಇದಕ್ಕೆ ತಕ್ಕ ಚಿಕಿತ್ಸೆ ಎಂದರೆ ವಿಷಯ ಗಳನ್ನು ಚೆನ್ನಾಗಿ ಓದಿ ಮನನ ಮಾಡಿಕೊಂಡಿರುವುದು. ಈ ರೀತಿ ಮಾಡಿದ ಮನುಷ್ಯ ಪರೀಕ್ಷೆಗಾಗಿ ಮಾತ್ರವೇ ಓದಿರುವುದಿಲ್ಲ. ಪರೀಕ್ಷೆಯನ್ನೂ ಜೀವನದ ಒಂದು ಘಟನೆ ಎಂದು ತಿಳಿದು ಅದಕ್ಕೆ ಅಷ್ಟು ಪ್ರಾಮುಖ್ಯತೆಯನ್ನು ಕೊಡುವು ದಿಲ್ಲ. ಆ ಪರೀಕ್ಷೆಯನ್ನು ಸುಲಭವಾಗಿ ಸೋಲಿಸುತ್ತೇನೆ ಎಂಬ ಸಂಕಲ್ಪವಿರು ವುದರಿಂದ ಅದಕ್ಕಾಗಿ ಅವನು ಅಂಜಬೇಕಾದುದೂ ಇಲ್ಲ. ಹಾಗೆ ಮಾಡುವುದು ಸಾಧ್ಯವಿಲ್ಲದಿದ್ದರೆ ನಾವು ಇನ್ನೊಂದು ಧೈರ್ಯವನ್ನು ಅವಲಂಬಿಸಬಹುದು. ಇದು ಕೇವಲ ನಿರಾಶೆಯಿಂದ ಬರಬಹುದಾದ ಧೈರ್ಯ. ಹೀಗೆ ಜ್ವರವನ್ನು ಪರಿ ಹಾರ ಮಾಡಿಕೊಳ್ಳುವುದು ಮೊದಲನೆಯದಕ್ಕಿಂತ ಉತ್ತಮತರವಲ್ಲವಾದುದಾ ದರೂ ಸೋಮಾರಿಗಳಿಗೂ ಓದಿನಲ್ಲಿ ಶ್ರದ್ಧಾಭಕ್ತಿಯಿಲ್ಲದವರಿಗೂ ಇದು ಒಂದು

ಮದ್ದಾಗಬಹುದು. ಅಥವಾ ಈಗಿನಂತೆಯೇ ಯುದ್ಧ ಮುಂದುವರಿದರೂ ಅಂತಹವರಿಗೆ ಸೌಖ್ಯವಾಗಬಹುದು. ಏಕೆಂದರೆ, ಯಾವಾಗ ಏನೋ ಎಂಬ ಭಾವನೆ ಅವರನ್ನು ನಿತ್ಯಜೀವನದ ಕಡೆಗೆ ಸೆಳೆಯುತ್ತದೆ. ಇದರಿಂದ ಪರೀಕ್ಷೆಯ ಗಮನ ಸ್ವಲ್ಪ ಕಡಮೆಯಾಗುತ್ತದೆ. ಮೊದಲೇ ಹೇಳಿದಂತೆ ಜೀವನಕ್ಕಾಗಿಯೇ ಓದುವವರಿಗೂ ಈ ಜ್ವರ ಯುದ್ಧಕಾಲದಲ್ಲಿ ನಿವಾರಣೆಯಾದೀತು. ಹೇಗೆಂದರೆ: ಎಲ್ಲಿ ನೋಡಿದರೂ ಸರ್ವಬಂಧು ರೆಕ್ರೂಟಿಂಗ್ ಪ್ರಭಾವವೇ ಕಂಡು, ಕೆಲಸಕ್ಕಾಗಿ ಜನರು ಕಷ್ಟಪಡುವುದು ತಪ್ಪುತ್ತದೆ. ವಿದ್ಯಾರ್ಥಿಗಳಲ್ಲಿ ' ಇನ್ನೇನೂ ಸಾಧ್ಯವಿಲ್ಲದಿರುವುದರಿಂದ ಇದೇ ಗತಿ ' ಎಂಬ " ಶ್ಮಶಾನ ವೇದಾಂತ " ತುಂಬಿ ಅವರು ಧೈರ್ಯಶಾಲಿಗಳಾಗಬಹುದು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳುವುದಾದರೆ, ಈ ಪರೀಕ್ಷೆಗಳು ನಿಂತುಹೋಗಬೇಕು. ವಿದ್ಯಾರ್ಥಿಗಳಿಗೆ ಅವರ ಉಪಾಧ್ಯಾಯರೇ ಪರೀಕ್ಷಕರಾದರೆ ಅನುಕೂಲ. ಅವರಿಗೆ ವಿದ್ಯಾರ್ಥಿಗಳ ಬುದ್ಧಿಶಕ್ತಿ, ಗುಣ, ನಡತೆ, ಆಚಾರ ವ್ಯವಹಾರಗಳು ತಿಳಿದಿರುವುದರಿಂದ ಅವರು ಒಳ್ಳೆಯ ಪರೀಕ್ಷಕರಾಗಬಹುದು. ಇದರಿಂದ ವಿದ್ಯಾರ್ಥಿಗಳ ಯೋಗ್ಯತೆಗೆ ತಕ್ಕ ಮನ್ನಣೆ ದೊರೆಯುವುದರಿಂದ ಭಯವೇನೂ ಪಡಬೇಕಾಗಿಲ್ಲ. ಇವು ಪರೀಕ್ಷಾಜ್ವರದ ಕೆಲವು ಪರಿಹಾರೋಪಾಯಗಳು.

ಈ ಜ್ವರದ ಇತಿಹಾಸವನ್ನು ಗಮನಿಸುವುದಾದರೆ ಇದು ಪುರಾತನ ಕಾಲದ್ದಲ್ಲವೆಂದು ತೋರುತ್ತದೆ. ನಮ್ಮ ದೇಶದ ಹಳೆಯ ವಿದ್ಯಾನಿಲಯಗಳಲ್ಲಿ ಪರೀಕ್ಷೆಗಳೇನೋ ನಡೆಯುತ್ತಿದ್ದುವಾದರೂ ನಡೆಯುವ ರೀತಿ ಬೇರೆ ತರಹದ್ದಾಗಿದ್ದಿತು. ಓದುಗರ ಯೋಗ್ಯತೆ ತಿಳಿದು - ವಿದ್ಯಾಶ್ರಮಗಳಲ್ಲಿ ವಿದ್ಯಾರ್ಥಿಗಳು ಗುರುಗಳನ್ನು ಆಶ್ರಯಿಸಿಕೊಂಡು ಅವರಲ್ಲಿಯೇ ಜೀವನ ಸಾಗಿಸುತ್ತಿದ್ದುದರಿಂದ—ಅವರು ಉತ್ತೀರ್ಣರಾಗುತ್ತಿದ್ದರೆ ಹೊರತು ಈಗಿನಂತೆ ದೈವವಿಲಾಸ, ಧನವಿಲಾಸಗಳಿಂದ ಅಲ್ಲ; ಮತ್ತು ಈಗಿನಂತೆ ಕೇವಲ ಜೀವನಕ್ಕಾಗಿಯೇ ಓದುತ್ತಲೂ ಇರಲಿಲ್ಲ. ನಾಲ್ಕು ವರ್ಣಗಳವರೂ ತಮ್ಮ ತಮ್ಮ ವೃತ್ತಿಗಳನ್ನು ನಡಸಿಕೊಂಡು ಕರ್ಮಕ್ಕೇ ಪ್ರಾಮುಖ್ಯತೆ ಕೊಟ್ಟು ಪರಸ್ಪರ ಐಕ್ಯತೆಯಿಂದ ಜೀವನ ಸಾಗಿಸುತ್ತಿದ್ದುದರಿಂದ ಸಮಾಜದಲ್ಲಿ ಹೊಲಸಿರಲಿಲ್ಲ. ಇದರ ಫಲವಾಗಿ ವ್ಯಕ್ತಿಗೂ ಪುರಸ್ಕಾರವಿತ್ತು. ಅಂತಹವನು ಸರಿಯಾದ ಜ್ಞಾನ ಪಡೆದವನಾದರೆ ಅವನಿಗೆ ಯೋಗ್ಯವಾದ ಸ್ಥಾನ ದೊರೆಯುತ್ತಿತ್ತು. ಆಗ ಒಂದು ವೇಳೆ ಅವನು

ತನ್ನ ಪ್ರಯತ್ನದಲ್ಲಿ ಪರಾಜಯ ಹೊಂದಿದರೂ ನಷ್ಟವೇನೂ ಇರಲಿಲ್ಲ. ಈ ರೀತಿ ಇದ್ದ ಸಮಾಜದಲ್ಲಿ ಪರೀಕ್ಷಾ ಜ್ವರಕ್ಕೆ ಅವಕಾಶವೇ ಇರಲಿಲ್ಲ. ನವೀನ ಕಾಲದ ನಿರ್ಮಾಣವೇ ಈ ಪರೀಕ್ಷಾ ಜ್ವರ. ಇದರಿಂದ ರಕ್ಷಿಸಿಕೊಳ್ಳುವುದು ನಮ್ಮ ಕರ್ತವ್ಯ.

—ಎಲ್. ನಂಜುಂಡರಾವ್.

## ಕಾವ್ಯಾವಲೋಕನ

[ವ್ಯಾಸಂಗಗೋಷ್ಠಿಯ ಪುಸ್ತಕಭಂಡಾರದಿಂದ ಒಯ್ದು ಓದಿದ ಪುಸ್ತಕಗಳನ್ನು ಕುರಿತು ಸದಸ್ಯರು ಬರೆದು ತಂದ ವಿಮರ್ಶೆಗಳಲ್ಲಿ ಒಂದು ನಾಲ್ಕಾರನ್ನು ಆರಿಸಿ ಕೆಳಗೆ ಕೊಟ್ಟಿದೆ.]

### ೧. ಪಂಡಿತ ಜವಹರಲಾಲರ "ಜಗತ್‌ಕಥಾವಲ್ಲರಿ"

(ಶ್ರೀ ಕೃಷ್ಣಶರ್ಮರ ಕನ್ನಡ ಭಾಷಾಂತರ)

"ತ್ಯಜೇತ್ ಕುಲಾರ್ಥೇ ಪುರುಷಂ
ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್
ಗ್ರಾಮಂ ಜನಪದಸ್ಯಾರ್ಥೇ
ಆತ್ಮಾರ್ಥೇ ಪೃಥಿವೀಂ ತ್ಯಜೇತ್"
"ಕುಲದ ಹಿತಕ್ಕಾಗಿ ವ್ಯಕ್ತಿಯನ್ನು ತ್ಯಜಿಸು,
ಗ್ರಾಮದ ಮೇಲ್ಮೆಗಾಗಿ ಕುಲವನ್ನು ತ್ಯಜಿಸು,
ಜನಪದದ ಉದ್ಧಾರಕ್ಕಾಗಿ ಗ್ರಾಮವನ್ನು ತ್ಯಜಿಸು,
ಆತ್ಮೋನ್ನತಿಗಾಗಿ ಜಗತ್ತನ್ನೇ ತ್ಯಜಿಸು"

ಈ ಅಮೃತವಾಕ್ಕು ಜವಹರಲಾಲರ ಬರವಣಿಗೆಯಲ್ಲಿ ಮೇಲಿಂದ ಮೇಲೆ ಮಿಡಿಯುತ್ತದೆ. ತಮ್ಮ ಮೋಹದ ಕುವರಿಗೆ ಈ ತ್ಯಾಗದ ಪಾಠ ಕಲಿಸಿ ಕೊಟ್ಟಿದ್ದಾರೆ ಅವರು. 'ಸಹಕಾರ, ಸರ್ವಜನ ಸುಖ ಶಾಂತಿಗಾಗಿ ಬಲಿದಾನ' ಎಂಬೀ ಮಂತ್ರವನ್ನು ತಮ್ಮ ಮುದ್ದು ಮಗಳ ಹೃದಯದಲ್ಲಿ ನುಡಿಸಿದ್ದಾರೆ. 'ಬಲಿದಾನದ ಬ್ರಹ್ಮಾನಂದವೆಲ್ಲರಿಗೆ ಎಲ್ಲಿಯದು? ಭಾಗ್ಯಶಾಲಿಗಳಿಗೆ ಮಾತ್ರ! ಭಾರತದ ಪಾರತಂತ್ರ್ಯವನ್ನು ನಿರ್ಮೂಲ ಮಾಡುವ ಮಹತ್ಕಾರ್ಯ ಸಾಧಿಸಿದರಷ್ಟೇ ಸಾಲದು, ಅವರೊಂದಿಗೆ ಅದಕ್ಕಿಂತಲೂ ಮಿಗಿಲಾದುದು ಮಾನವ ಕುಲ ಹಿತಸಾಧನೆಯ ಕಾರ್ಯ' ಎಂಬುದಾಗಿ ಮೇಲಿಂದ ಮೇಲೆ ಹೇಳಿ, ವಿಶ್ವ ಪ್ರೇಮವನ್ನು ತಮ್ಮ ಕುಮಾರಿಯ ಮನೋವಾಕ್ಕುಗಳಲ್ಲಿ ತುಂಬಿ, ಕೈಹಿಡಿದು ನಡೆಸಿದ್ದಾರೆ ಜವಹರರು. ಈ ದೃಷ್ಟಿಕೋನವನ್ನು ಪಸರಿಸಲಿಕ್ಕಾಗಿ, ಹೊಸ ಬೆಳಕು ಕಾಣಲಿಕ್ಕಾಗಿ ನಾವಿಡಬಹುದಾದ ಮೊದಲ ಹೆಜ್ಜೆ, 'ಜಗತ್‌ಕಥಾವಲ್ಲರಿ'ಯನ್ನು ಓದಿ ಅರಿಯುವುದು; ಅದರಂತೆ ನಡೆಯುವುದು.

'ಪ್ರಾಚೀನ ಜಗತ್ಕಥಾನಕವನ್ನು ಕುರಿತು, ಮಹಾ ವೀರರನ್ನೂ ಮಹಾ ವೀರರಮಣಿಯರನ್ನೂ ಕುರಿತು ಆಲೋಚನೆಮಾಡುವುದೇ ಒಂದು ಮಾನಸೋಲ್ಲಾಸ. ಇತಿಹಾಸಾಧ್ಯಯನವು ಹಿತವೆ. ಆದರೆ ಇತಿಹಾಸ ನಿರ್ಮಾಣ ಮಾಡುವುದು ಅದಕ್ಕಿಂತ ಮನೋರಂಜಕ, ಮನೋಹರ'— ಹೀಗೆಂದು ಹೇಳಿ ಜವಹರರು ತಮ್ಮ ಪತ್ರಗುಚ್ಛವನ್ನು ಮೊದಲುಮಾಡುತ್ತಾರೆ. ಇತಿಹಾಸ ಹೇಳಲು, ಅದರ ನಿರ್ಮಾಣಮಾಡಲು ಜವಹರಲಾಲರಿಗೆ ಅದೆಷ್ಟೋ ಸಡಗರ. ಈ ಇತಿಹಾಸ ಬರೆವ ಹುರುಪಿನಲ್ಲಿ ಅವರಿಗೆ ಸ್ವಂತ ವಿಷಯವಾಗಿ ಎರಡು ಮಾತು ಬರೆವುದೆಂದರೆ ಅದೆಷ್ಟೋ ಬೇಸರ, ಅಸಡ್ಡೆಯೆಂದು ಅವರ ಪತ್ರಗಳನ್ನೋದಿ ಸುಲಭವಾಗಿ ಹೇಳಬಹುದು.

ಜವಹರಲಾಲರ ಈ ಪತ್ರಗಳು ಇಷ್ಟು ಪ್ರಾಮುಖ್ಯತೆಗೆ ಬರಲು ಕಾರಣ ಒಂದಲ್ಲ, ಹಲವಾರು. ಮೊದಲನೆಯದಾಗಿ ತಂದೆ ಮತ್ತು ಮಗಳಲ್ಲಿರುವ ಆತ್ಮೀಯತೆ ಬರವಣಿಗೆಯನ್ನು ನಿಸ್ಸಂಕೋಚವಾಗಿ ಮಾಡಿದೆ. ಎರಡನೆಯದಾಗಿ, ಪ್ರಪಂಚದ ಕಥೆಗಳ ಸರಣಿ ಒಂದಕ್ಕೊಂದು ಮನೋರಂಜಕವಾಗಿ ಬೆಳೆದುಕೊಂಡು ಹೋಗಿದೆ. ಮೂರನೆಯದು, ಶಾಲೆಯ ಶಿಕ್ಷಕ ತನ್ನ ಶಿಷ್ಯನಿಗೆ ಬೋಧಿಸುವಷ್ಟು ಸರಳವಾಗಿಯೂ ಸುಲಭವಾಗಿಯೂ ಇರುವ ವಿವರಣೆಗಳು. ಎಲ್ಲಕ್ಕಿಂತ ಮುಖ್ಯವಾದುದು: ವಿಶ್ವವಿಖ್ಯಾತ ವ್ಯಕ್ತಿಯೊಂದು ರಾಜಕೀಯ, ಇತಿಹಾಸಗಳನ್ನೆಲ್ಲಾ ಶೋಧಿಸಿ, ತನ್ನ ವಾಕ್‌ಸಾಮ್ರಾಜ್ಯದ ಸೊಬಗಿನಲ್ಲಿ ಅದನ್ನು ಚಿತ್ರಿಸಿರುವುದು.

ರಾಜಕೀಯದ ತುಮುಲದಲ್ಲಿ ದುಮುಕಿ ಸತತವೂ ಹೋರಾಡುತ್ತಿರುವ ಈ ವ್ಯಕ್ತಿ ಬೋಧಕನ ಜಾಲವನ್ನೆಲ್ಲಿ ಕಲಿತರೋ ತಿಳಿಯದು. ಇತಿಹಾಸವೆಂದರೆ ಉರಿದುಬೀಳುವ, ಬೇಸರಪಡುವ ವಿಜ್ಞಾನದ ವಿದ್ಯಾರ್ಥಿಗಳ ಕೈಲಿ 'ಜಗತ್ ಕಥಾವಲ್ಲರಿ'ಯ ಪ್ರತಿಯೊಂದನ್ನಿಡಿ. ಜವಹರರ ಹೆಸರು ಕೇಳಿ ಅವರು ಅದನ್ನು ಓದಲು ಮೊದಲುಮಾಡುವರು. ಆ ಪುಸ್ತಕವನ್ನು ಮುಗಿಸಿದ ಮೇಲೆ ಅವರೆಂದುಕೊಳ್ಳುತ್ತಾರೆ: 'ಇತಿಹಾಸದಂತಹ ಸೊಗಸು ವಿಷಯ ಇನ್ನಿಲ್ಲ'ವೆಂದು! ಇಂತಹ ಸಾಹಿತ್ಯಕ ಕೈವಾಡ ಜವಹರರಲ್ಲಿದೆಯೆಂದರೆ, ಅದು ನಮ್ಮೆಲ್ಲರಿಗೆ ಹೆಮ್ಮೆಯಾದ ವಿಷಯವೇ ಸರಿ.

ಆರ್ಯರು ಪರ್ಷಿಯ ಮೆಸಪೊಟೇಮಿಯಾ ವಸಾಹತುಗಳಿಂದ ಭಾರತಕ್ಕೆ

ಬಂದಿರಬೇಕು. ಅವರು ಉತ್ತರದೇಶದಲ್ಲೆಲ್ಲಾ ನೆಲಸಿದರು. ಅವರು ಪ್ರವೇಶ ಮಾಡಿದಾಗ ಭಾರತ ನಾಗರಿಕವೆನಿಸಿತ್ತು. ದಕ್ಷಿಣ ಭಾರತದಲ್ಲಿ ದ್ರಾವಿಡರು ವಿಶೇಷ ನಾಗರಿಕರಾಗಿದ್ದರು. ಆಗ ಭಾರತದಿಂದ ವಿದೇಶಗಳಿಗೆ ಮೆಣಸು, ಚಿನ್ನ, ಮುತ್ತು, ಅಕ್ಕಿ ಮುಂತಾದುವು ರಫ್ತಾಗುತ್ತಿದ್ದುವು.

ಈ ಆರ್ಯ-ದ್ರಾವಿಡರ ಸಂಕರ ಆಯಿತು. ಪ್ರಜಾಪ್ರಾತಿನಿಧ್ಯದ ಮೊದಲ ಹೆಜ್ಜೆಯಾದ ಗ್ರಾಮಪಂಚಾಯಿತಿಗಳು ನಿರ್ಮಿತವಾದುವು; ಪ್ರಜಾನು ಕೂಲ್ಯಗಳು ಯಥೇಚ್ಛವಾಗಿ ದೊರೆತುವು. ಬಣ್ಣ ಮತ್ತು ಕಸಬುಗಳಿಗನು ಸಾರವಾಗಿ ಚಾತುರ್ವರ್ಣ್ಯವಾಯಿತು. ಈ ಕಾಲದಲ್ಲಿ ವಿದ್ಯಾಭ್ಯಾಸ, ವಾಣಿಜ್ಯ, ಸಾಹಿತ್ಯ ಮುಂತಾದವುಗಳು ಅಭಿವೃದ್ಧಿಯಾದವು. ಆದರೆ ಆರ್ಯರು ಸೋತ ವರನ್ನು ತಮ್ಮ ಗುಲಾಮರನ್ನಾಗಿ ಮಾಡಿಕೊಂಡು ತಮ್ಮ ಸದ್ಗುಣಗಳನ್ನೆಲ್ಲಾ ನೀಗಿಕೊಂಡದ್ದರಿಂದ ವರ್ಣವೈಷಮ್ಯ ಬಲವಾಗುತ್ತಾ ಬಂತು.

ಇದೇ ಕಾಲದಲ್ಲಿ ಈಜಿಪ್ಟ್ ನಾಗರಿಕತೆ ಪ್ರಸಿದ್ಧವಾಗುತ್ತ ಬಂತು. ಪಿರಮಿಡ್ಡುಗಳು, ಸ್ಫಿಂಕ್ಸ್ ಮುಂತಾದ ಅತ್ಯುನ್ನತ ಕಲಾಕೃತಿಗಳನ್ನು ನಿರ್ಮಿಸಿದ ಮಹಾರಾಜ್ಯ ಇಲ್ಲಿ ಆಡಳಿತ ನಡೆಸಿತು. ಕ್ರಿ. ಪೂ. ೫೦೦-೬೦೦ ವರ್ಷಗಳ ಹಿಂದೆಯೇ ಭಾರತದಲ್ಲಿ ಮಹಾವೀರ ಬುದ್ಧರೂ, ಚೀನದಲ್ಲಿ ಕನ್‌ಫ್ಯೂಷಿಯಸ್ ಲವತ್ಸೆಗಳೂ, ಪರ್ಷಿಯಾದಲ್ಲಿ ಜೊರಾಸ್ಟ್ರರನೂ, ಗ್ರೀಸ್‌ನಲ್ಲಿ ಪೈಥಾಗೊ ರಾಸನೂ—ಇವರೇ ಮೊದಲಾದ ಅಸಂಖ್ಯಾತ ಜ್ಞಾನಿಗಳು ಅವತಾರಮಾಡಿ ದರು. ಬುದ್ಧನು ವರ್ಣದ ವ್ಯವಸ್ಥೆಯನ್ನೆದುರಿಸಿ, ಸಮಾನಸ್ಕಂಧತೆಯನ್ನು ಬೋಧಿಸಿ, ವೈದಿಕ ಧರ್ಮದ ಅಂದಿನ ರೂಪರಚನೆಗಳನ್ನು ಪ್ರತಿಭಟಿಸಿದನು.

ಏಷ್ಯಾ ಮತ್ತು ಯೂರೋಪ್ ಎರಡೂ ಕೂಡುವ ಕಡೆ ಗ್ರೀಸ್ ಮತ್ತು ಪರ್ಷಿಯಾಗಳಿವೆ. ಇವು ಅತ್ಯುಚ್ಛ್ರಾಯ ಸ್ಥಿತಿಯಲ್ಲಿ ಇದ್ದಂತಹ ಕಾಲ ವೊಂದಿತ್ತು. ಆಗ ಪರ್ಷಿಯಾ ದೇಶದ ಸಾಮ್ರಾಜ್ಯ ಭಾರತಭೂಮಿಯ ಸಿಂಧು ಪ್ರಾಂತದವರೆಗೆ ಹಬ್ಬಿತ್ತು. ದರಿಯಸ್ ಎಂಬವ ದೊರೆಯಾಗಿದ್ದ. ಗ್ರೀಸನ್ನು ಕಬಳಿಸಲು ನೋಡಿದ. ಗ್ರೀಸರು ನೂರೆಂಟು ಛಿದ್ರಗಳಾಗಿದ್ದರು ಕೂಡ, ಒಬ್ಬೊಬ್ಬರಲ್ಲೂ ಅಂತಃಕಲಹಗಳು ಇದ್ದರು ಕೂಡ, ತಮ್ಮ ಸಾಮಾನ್ಯ ಶತ್ರುವಿನ ಪತನಕ್ಕಾಗಿ ಒಂದಾಗಿ ನಿಂತರು. ದರಿಯಸ್ ಸೋತು ಹಿಮ್ಮೆಟ್ಟಿ ಹೋಗಬೇಕಾಯಿತು.

ಗ್ರೀಸಿನ ಸ್ವರ್ಣಯುಗ ಮೊದಲಾಯಿತು. ಪೆರಿಕ್ಲಿಸ್‌ನಂತಹ ಮಹಾ ವೀರರು, ಸಾಕ್ರೆಟೀಸ್‌ನಂತಹ ವಿಭೂತಿಪುರುಷರು ಜನ್ಮವೆತ್ತಿದರು. ಸಾಹಿತ್ಯದ ನವಯುಗ ಉಗಮವಾಯಿತು; ಉನ್ನತ ಮಟ್ಟದ ಕಲೆ ಆರಂಭವಾಯಿತು. ಅಲೆಕ್ಸಾಂಡರ್ ಬಂದ. ಜಗದ್ದಿಗ್ವಿಜಯಕ್ಕೆ ಹೊರಟ. ಚಿಕ್ಕ ಚಿಕ್ಕ ರಾಜ್ಯವನ್ನೆಲ್ಲಾ ಸೂರೆ ಹೊಡೆದು, ಪರ್ಷಿಯಾ ಸಾಮ್ರಾಜ್ಯವನ್ನೆಲ್ಲಾ ಮಣ್ಣುಗೂಡಿಸಿ, ಭಾರತದ ಗಡಿ ದಾಟಿ ಜಯಶಾಲಿಯಾದ. ಎಲ್ಲೆಡೆಗೂ ಗ್ರೀಸಿನ ಕೀರ್ತಿಯನ್ನು ಹಬ್ಬಿಸಿದ. ಆದರೇನು? ಅವನು ಕ್ರೂರಿ, ಕೊಳ್ಳೆ ಹೊಡೆಯುವವ. ದಿಗ್ವಿಜಯದಿಂದ ಮೆರೆಯುತ್ತಾ ತನ್ನ ತಾಯ್ನಾಡಿಗೆ ಹಿಂದಿರುಗುತ್ತಿರುವಾಗ ಕ್ಷಾಮಕ್ಕೆ ಸಿಕ್ಕಿ, ಅವನೂ ಅವನ ಸೇನೆಯೂ ತೀರಿಕೊಂಡರು.

ಅವನ ಮರಣಾನಂತರ ಅವನ ಪ್ರತಿನಿಧಿಗಳಾದ ಟೋಲಮಿ ಮತ್ತು ಸೆಲ್ಯೂಕಸರು, ಈಜಿಪ್ಟ್ ಮತ್ತು ಭಾರತವನ್ನು ದಕ್ಕಿಸಿಕೊಳ್ಳಲು ನೋಡಿದರು. ಟೋಲಮಿ ಈಜಿಪ್ಟ್ ಪಡೆದ. ಆದರೆ ಭಾರತಭೂಮಿ ಚಂದ್ರಗುಪ್ತ ಮೌರ್ಯನ ಪಾಲಿಗೆ ಸೇರಿತು. ಸೆಲ್ಯೂಕಸ್ ಸೋತು, ತನ್ನ ಮಗಳನ್ನೂ ಮೆಗಾಸ್ತನೀಸನನ್ನೂ ದೊರೆಗೆ ಬಳುವಳಿಯಾಗಿ ಕೊಟ್ಟು ಹಿಂದಿರುಗಿದ. ಚಂದ್ರಗುಪ್ತನ ಮೇಧಾವಿ ಮಂತ್ರಿ ಚಾಣಕ್ಯ ದೊಡ್ಡ ಅರ್ಥಶಾಸ್ತ್ರ ಬರೆದಿದ್ದಾನೆ. ಕ್ರಿ. ಪೂ. ೨೦೦ರಲ್ಲಿ ಚಂದ್ರಗುಪ್ತನು ಕಾಲವಾದ. ಅವನನಂತರ ಅವನ ಮಗ ಬಿಂದುಸಾರ ಚಕ್ರವರ್ತಿಯಾದ. ಅವನ ಕಾಲದಲ್ಲಿ ಭಾರತದೇಶ ವಿಶ್ವವಿಖ್ಯಾತವಾಗಿ ವ್ಯಾಪಾರ ವಾಣಿಜ್ಯಗಳನ್ನು ನಡಸಿತು. ಇವನಾದ ಮೇಲೆ ಅಶೋಕ ಪಟ್ಟಕ್ಕೆ ಬಂದ. ಕಾಳಗದ ಭಯಾನಕ ದೃಶ್ಯವನ್ನು ಕಂಡು, ಹೇಸಿ, ಕಾಳಗ ಮಾಡೆನೆಂದು ಹಟತೊಟ್ಟ. ಬೌದ್ಧಮತ ಪ್ರಚಾರಮಾಡಿದ. ಶಾಸನಗಳು, ಬೌದ್ಧ ವಿಹಾರಗಳು, ಸ್ತೂಪಗಳು ಇವುಗಳನ್ನೆಲ್ಲಾ ಕಟ್ಟಿಸಿ, ಪ್ರಪಂಚದ ಮೂಲೆ ಮೂಲೆಯಲ್ಲೂ ಬೌದ್ಧಧರ್ಮ ಬೆಳಗುವಂತೆ ಮಾಡಿದ.

ಅಲೆಗ್ಸಾಂಡರನ ದೇಶ, ಮೆಸಪೊಟೇಮಿಯಾ, ಅವನ ಹಿಂದೆಯೇ ಹಾಳಾಗಿಹೋಯಿತು. ಟೋಲಮಿಗಳ ಈಜಿಪ್ಟ್ ಮತ್ತು ರಾಜಧಾನಿ ಅಲೆಗ್ಸಾಂಡ್ರಿಯಾ ಗ್ರೀಕ್ ಸಂಸ್ಕೃತಿಯ ತೀರ್ಥಕ್ಷೇತ್ರವೆನಿಸಿದುವು. ಇಲ್ಲಿನ ಪುಸ್ತಕ ಭಂಡಾರ, ಮ್ಯೂಜಿಯಂ ಮೊದಲಾದುವು ಅವನ್ನು ಜಗದ್ವಿಖ್ಯಾತವಾಗಿ ಮಾಡಿದುವು. ಯೂಕ್ಲಿಡ್‌ನಂತಹ ಗಣಿತಶಾಸ್ತ್ರಜ್ಞ ಅವತರಿಸಿದ್ದೂ ಇಲ್ಲಿಯೆ.

ಗ್ರೀಸ್ ಮತ್ತು ಈಜಿಪ್ಟ್ ಸಂಸ್ಕೃತಿಗಳ ಸಂಕರವಾಯಿತು. ಆಚಾರವಿಚಾರಗಳಲ್ಲಿ ಗ್ರೀಕರು ಈಜಿಪ್ಟಿನವರೇ ಆಗಿಹೋದರು.

ಇದಾದ ಮೇಲೆ ರೋಮಿನ ವಿಚಾರ. ರೋಮಿಗೂ ಕಾರ್ಥೇಜಿಗೂ ಬದ್ಧವೈರ. ಕಾರ್ಥೇಜು ನಿರ್ನಾಮವಾಯಿತು. ರೋಮಿನಂತೆಯೇ ಪ್ರಮುಖವಾದುದು ಚೀನಾದೇಶ. ಇದರ ಚರಿತ್ರೆ ಪ್ರಾಮುಖ್ಯದ್ದು, ಎಂದು ಜವಹರರು ನುಡಿದಿದ್ದಾರೆ. ಇಲ್ಲಿಗೆ ಜಗತ್ಕಥಾವಲ್ಲರಿಯ ಮೊದಲ ಭಾಗ ಮುಗಿಯುತ್ತದೆ.

ಜಗತ್‌ಕಥೆ ಇಷ್ಟಿದ್ದರೂ, ನಾವು ಈ ಪತ್ರಗುಚ್ಛವನ್ನು ಓದಬೇಕಾಗಿರುವುದು ಇದಕ್ಕಿಂತಲೂ ಹೆಚ್ಚಿಗೆ ವಿಷಯ ಅರಿಯಲಿಕ್ಕೆ. ಇದರಲ್ಲಿ ಜವಹರಲಾಲರ ಅನುಭವ, ಆಲೋಚನೆ, ಆದರ್ಶಗಳ ಛಾಯೆಯೆಲ್ಲಾ ಸಂಪೂರ್ಣವಾಗಿ ಮೂಡಿವೆ. ಇದನ್ನರಿತರೆ 'ಜಗತ್‌ಕಥಾವಲ್ಲರಿ'ಯ ಓದು ಸಾರ್ಥಕವೆನಿಸೀತು.

ಸೆರೆಮನೆಯಿಂದ ಹೊರಬಿದ್ದ ಪತ್ರಗಳಿವು. ಸೆರೆಯ ಅನುಭವ ಜವಹರರಿಗೆ ಹೇಗಿತ್ತು ಎಂಬುದನ್ನು ಅವುಗಳಲ್ಲೇ ಕಾಣಬಹುದಾಗಿದೆ. ಜವಹರರು ಎನ್ನುತ್ತಾರೆ :

'ನನಗೆ ಬೇಕಾದುದನ್ನೋದಲು, ನನಗೆ ಬೇಕೆನಿಸಿದುದನ್ನು ಬರೆಯಲು ನೈನಿ ಸೆರೆಮನೆಯಲ್ಲಿ ನನಗೆ ಬೇಕಾದಷ್ಟು ಕಾಲವಿದೆ. ಆದರೆ ನನ್ನ ಮನಸ್ಸು ನನ್ನ ಅಂಕೆಯಲ್ಲಿಲ್ಲ, ಅಲೆದಾಡುತ್ತಿದೆ. ಸೆರೆಮನೆಯ ಹೊರಗೆ ನಡೆಯುತ್ತಿರುವ ಮಹಾಸಂಗ್ರಾಮ ಕುರಿತು ನನ್ನಾಲೋಚನೆ ಹೋಗುತ್ತಿದೆ. ಆದರೂ ಇದು ತಪ್ಪೆಂದು ನನಗೆನಿಸಿದೆ. ಹೊರಗಿನ ಚಟುವಟಿಕೆಯಲ್ಲಿ ಭಾಗವಹಿಸಲು ಸಾಧ್ಯವಿಲ್ಲದಿರುವಾಗ ನಾನೇಕೆ ತಾಪತ್ರಯಪಡಬೇಕು ?'

'ಸೆರೆಮನೆಯಲ್ಲಿ ನಾನು ಹೊಸ ಅಭ್ಯಾಸಗಳನ್ನು ಕಲಿತಿದ್ದೇನೆ. ಅವುಗಳಲ್ಲಿ ಬೆಳಗಾಗುವುದಕ್ಕೆ ಮುಂಚೆಯೆ ಏಳುವುದೂ ಒಂದು. ಅರುಣೋದಯ ಭಾಗ್ಯವನ್ನು ನೋಡಬೇಕೆಂಬುದು ನನ್ನ ಆಶೆ. ಕ್ರಮೇಣ ನಕ್ಷತ್ರಗಳು ಹೇಗೆ ಕಣ್ಮರೆಯಾಗುವುದೆಂಬುದನ್ನು ನೋಡಬೇಕೆಂಬುದೇ ನನ್ನ ಅಪೇಕ್ಷೆ.

—ಇದೇ ಬಗೆಯ ಅನೇಕ ಹೃದಯಂಗಮವಾದ ಮಾತುಗಳು ಅವರ ಪತ್ರಗಳಲ್ಲಿ ಕಂಡುಬಂದಿವೆ. ಕವಿಸಹಜವಾದ ವಾಣಿಯಿಂದ ಅವರು ಈ ಪತ್ರಗಳನ್ನು ಬರೆದಿದ್ದಾರೆ. ಈ ಗುಚ್ಛವೆಲ್ಲ ಒಂದು ಭಾವಗೀತದಂತೆ ತೋರುತ್ತದೆ,

ನನಗೆ. ತಮ್ಮ ಕುವರಿಯ ಮೇಲಿನ ಪ್ರೀತಿ, ಆಕೆಯ ಪುರೋಭಿವೃದ್ಧಿಯಲ್ಲಿ ಆಸಕ್ತಿ, ತಮ್ಮಂತೆ ತಾವಿಟ್ಟ ಹೆಜ್ಜೆಯಲ್ಲೇ ಅವಳೂ ನಡೆಯಬೇಕೆನ್ನುವ ಬಯಕೆ, ಮಿತವರಿತ ಹಿತವಾದ—ಇವೆಲ್ಲ ಪತ್ರದಲ್ಲಿ ಹಾಸುಹೊಕ್ಕಾಗಿವೆ. 'ದಾದು'ವಿನಲ್ಲಿ ಮಮತೆ, ಭಕ್ತಿ; ಬಾಪುವಿನಲ್ಲಿ ಅಚಲಶ್ರದ್ಧೆ, ವಿಶ್ವಾಸ; ತಮ್ಮ ನಚ್ಚಿನ ಮಡದಿಯಲ್ಲಿದ್ದ ಪೂಜ್ಯ ವೀರಭಾವನೆ; ಜಗದ್ವಿಭೂತಿಗಳಲ್ಲಿ ಗೌರವ; ವಿಶ್ವಪ್ರೇಮದ ಬಗ್ಗೆ ಅಖಂಡ ವಿಶ್ವಾಸ; ಬರವಣಿಗೆಯ ಬರಹಕ್ಕಿಂತ ಹೆಚ್ಚಾಗಿ ಸಂವಾದದ, ಮಾತುಕತೆಯ ಬರಹ; ಹೃದಯಂಗಮವಾದ ವಿಷಯಗಳ ಜೋಡಣೆ—ಇವೇ ಈ ಪತ್ರಗುಚ್ಛದ ವಿಶಿಷ್ಟ ಗುಣರಾಶಿ. ಒಟ್ಟಿನಲ್ಲಿ ಈ ಪತ್ರ ಗುಚ್ಛವನ್ನು ಓದುವುದು ಎರಡು ದೃಷ್ಟಿಗಾಗಿ: ಮೊದಲನೆಯದು ಇತಿಹಾಸದ ಸಮರಸದೃಷ್ಟಿಗಾಗಿ; ಎರಡನೆಯದು ವಿಶಾಲ ಭಾವನೆಗಳ ವಿಧಾಯಕ ದೃಷ್ಟಿಗಾಗಿ.

—ಹಾಂ. ರಂ. ನಾಗೇಶರಾವ್.

## ೨. ಶ್ರೀ ವಡಿಗೇನಹಳ್ಳಿ ಅಶ್ವತ್ಥನಾರಾಯಣರಾಯರ

### "What it cost me"

ವ್ಯಕ್ತಿತ್ವವನ್ನು ಮೋಹಿಸಿ, ಅದಕ್ಕೆ ಮಾತ್ರ ಬೆಲೆಗೊಟ್ಟು, ಅಂತಹ ಪುಸ್ತಕಗಳನ್ನು ಮಾತ್ರ ಓದುವೆವೆನ್ನುವ ಜನಕ್ಕೆ ಇದು ಎಲ್ಲಿಯ ಕಗ್ಗವೆಂದೆನಿಸ ಬಹುದು. ಅಂತಹವರು ಈ ಪುಸ್ತಕವನ್ನು ಬೆಲೆಗೊಟ್ಟು ಓದಲಾರರು. ಇದೊಂದು ಜವಹರಲಾರರ ಆತ್ಮಕಥೆಯಲ್ಲ, ಗಾಂಧೀಜಿಯ ಸತ್ಯಶೋಧನೆಯಲ್ಲ. ಆದರೆ ಇವೆರಡೂ ಅಮೂಲ್ಯಗ್ರಂಥಗಳು ಏನು ಬೋಧಿಸಿವೆಯೋ, ಏನನ್ನು ಅರಸಿವೆಯೋ ಅದನ್ನೇ ಅನುಸರಿಸಿ, ಅವರ ಕರೆಗೆ 'ಓ'ಗೊಟ್ಟು ಸ್ವಾತಂತ್ರ್ಯ ಸಂಗರದಲ್ಲಿ ಧುಮುಕಿದ ಒಬ್ಬ ನಿಜ ರಾಷ್ಟ್ರೀಯ ವೀರನ ಡೈರಿಯ ದಳಗಳು ಇವು. ಸ್ವಾತಂತ್ರ್ಯ ಸಂಗರದಲ್ಲಿ ಗಾಂಧೀಜಿಯಾದರೇನು? ಮತ್ತೊಬ್ಬರಾದ ರೇನು? ರೇಷನಿಂಗ್ ಕಾಲದಲ್ಲಿ ಬಲ್ಲಿದನಾದರೇನು? ಬಡವನಾದರೇನು? ಎಲ್ಲಾ ಒಂದೇ. ಆದ್ದರಿಂದ ಈ ಕತೆ ನಮ್ಮ ಮುಂದಿನ ಸಂಗ್ರಾಮಗಳಿಗೆ ಹಿನ್ನೆಲೆ ಯಾಗಿ ನಿಂತಿದೆ. ಹಳೆಯದನ್ನು ಓದುವುದು ಹೊಸತನ್ನು ಉತ್ತಮಗೊಳಿಸ ಲಿಕ್ಕಾಗಿ. ಹಿಂದಿನ ಯತ್ನಗಳಲ್ಲಾದ ವಿಫಲತೆ, ಆಗಿನ ಏರುಪೇರುಗಳನ್ನು

ಮನನ ಮಾಡುವುದು ಮುಂದಿನ ಪ್ರಯತ್ನಗಳನ್ನು ಬಿಗಿಗೊಳಿಸಲಿಕ್ಕಾಗಿ. ಹೀಗಾಗಿ ನಮ್ಮ ರಾಜಕೀಯದ ಹಿನ್ನೆಲೆ, ಹಿಂದಿನ ಕತೆ, ಇವುಗಳನ್ನು ಅರಿತು ನಡೆದಲ್ಲಿ ಮುಂದಿನ ಮಾರ್ಗ ಸುಗಮವಾದೀತು ಎನಿಸುತ್ತದೆ.

ಈ ಪುಸ್ತಕದಲ್ಲಿ ಬರುವ ಸಂಭವಗಳು, ವಿಷಯಗಳೆಲ್ಲಾ ನಮಗೆ ಅಪರಿಚಿತವಾದವುಗಳಲ್ಲ. ಈಗ್ಗೆ ಒಂದು ವರ್ಷದ ಹಿಂದೆ ನಾವು ಭಾರತದ ರಾಜಕೀಯದಲ್ಲಿ ಯಾವ ಹೋರಾಟ ಕಂಡೆವೋ, ಕೇಳಿದೆವೋ, ಅಂಥದೇ ಹೋರಾಟ, ಅದೇ ಉದ್ದೇಶಸಾಧನೆಗಾಗಿ ೧೯೩೦ರಲ್ಲೂ ನಡೆಯಿತು. ಆದ್ದರಿಂದ ಹೋದ ವರುಷ ನಾವು ಕಂಡ ಕಾರ್ಯಕಲಾಪಗಳಿಗಿಂತ ಹೆಚ್ಚೇನೂ ಈ ಪುಸ್ತಕದ ಘಟನೆಗಳಿಂದ ಕಾಣಲಾಗದು. ಆಗ್ಗೆ ಈ ಸ್ವಾತಂತ್ರ್ಯಸಂಗ್ರಾಮದಲ್ಲಿ ಶ್ರೀ ವಡಿಗೇನಹಳ್ಳಿ ಅಶ್ವತ್ಥನಾರಾಯಣರಾಯರೂ ಸಿಕ್ಕಿಬಿದ್ದರು. ಬಹು ದೊಡ್ಡ ಪ್ರಚಾರಕಾರ್ಯವನ್ನು ನಡಸಿದರು. ತಾವೇ ಮುಂದಾಳಾಗಿ ನಿಂತು ಹಳ್ಳಿಹಳ್ಳಿಗಳಲ್ಲಿ ಬೋಧನೆ ಮಾಡಲಾರಂಭಿಸಿದರು. 'ದಿನಕ್ಕೆರಡು ರುಚಿಯಿಲ್ಲದ ಊಟ, ಜೊತೆಗೆ ಪ್ರತಿಕ್ಷಣದಲ್ಲೂ ಮಿಡಿಯುತ್ತಿರುವ ದಸ್ತಗಿರಿಯ ಆಹ್ವಾನ'—ಈ ಪ್ರತಿಫಲದ ಮೇಲೆ ತಾಯ್ನಾಡಿಗಾಗಿ ಕೆಲಸ-ಮಾಡಿದರು. ತಾವೇ ಸ್ವತಃ ಒಂದು ಕಲ್ಲಚ್ಚಿನ ದಿನಪತ್ರವನ್ನು ಆರಂಭಿಸಿದರು. ಹಳ್ಳಿಯವರನ್ನೆಲ್ಲಾ ತೀವ್ರ ಪ್ರಚೋದನೆಯಿಂದ ಎಚ್ಚರಗೊಳಿಸಿ, ಅವರ ಕರ್ತವ್ಯವನ್ನು ಅವರಿಗೆ ತಿಳಿಸಿ, ಚಳುವಳಿಯನ್ನು ಮುಂದುವರಿಸಿದರು.

ಇದ್ದಕ್ಕಿದ್ದಂತೆ ತಮ್ಮ ಸ್ವಂತ ಊರಿಗೆ ಬರಬೇಕಾಯಿತು. ತಾವು ಚಳುವಳಿಯಲ್ಲಿ ಮುಳುಗುವುದಕ್ಕೆ ಹೊರಟಾಗ ತಮ್ಮ ತಾಯಿಗೆ ಸುಳ್ಳುಹೇಳಿ ಬಂದಿದ್ದರು. ಈಗ ಅವರ ತಾಯಿ ಮತ್ತು ತಮ್ಮ ದರಿದ್ರಾವಸ್ಥೆಯಲ್ಲಿ ಸೊರಗಿ ಅನಾರೋಗ್ಯಕರವಾದೆಡೆ ವಾಸಿಸುತ್ತಿದ್ದಾರೆ. ಮನೆಗೆ ಬಂದ ಒಡನೆಯೆ ತಾಯಿಯೆನ್ನುತ್ತಾಳೆ: "ನೀನೊಬ್ಬ ಸತ್ಯಾಗ್ರಹಿ ಅಲ್ಲವೆ? ನಿನ್ನ ತಾಯಿಗೆ ನೀನು ಸುಳ್ಳು ಹೇಳಿ ಹೇಡಿಯಂತೆ ಓಡಿಹೋಗಿದ್ದೀಯೆ. ಸತ್ಯದ ಶ್ರದ್ಧೆಯೆಂದರೆ ಇದೇ ಏನು ನೀನಂದುಕೊಂಡಿರುವುದು?" 'ಸ್ತ್ರೀಯರು ಯಾವಾಗಲೂ ನಿರ್ದಿಷ್ಟವಾಗಿ ಭಾವನಾಯುತರು. ಅವರು ನೋವಿನ ಅನುಭವದ ಮತ್ತು ಶೌರ್ಯದ ಕರೆಗೆ ಉತ್ತರವೀವರು. ಅವರು ನಿಜವಾಗಿಯೂ ನೋವಿನ ಜೀವಸ್ವರೂಪ, ಅಲ್ಲದೆ ಅವರು ಮತ್ತೊಬ್ಬರ ಯಾತನೆಯ ಬಗ್ಗೆ ಅಂತಃಕರಣವುಳ್ಳವರು.'

ಇಂತಹ ನೋವನ್ನನುಭವಿಸಿದ ತಾಯನ್ನು ನೋಡಿದಕೂಡಲೆ ಅವರಿಗೆನ್ನಿಸಿತು: 'ತಾಯ್ನಾಡಿಗೆ ಸಲ್ಲಿಸುವ ಸೇವೆಗಿಂತ ನನ್ನ ತಾಯಿಗೆ ಸಲ್ಲಿಸುವ ಸೇವೆ ಕಡಮೆ ಮಹತ್ವದ್ದೇನೂ ಅಲ್ಲ' ಎಂದು. 'ಮನೆಯಲ್ಲೇ ಸುಖವಾಗಿರುವ' ಎಂದಿತು ಮನಸ್ಸು. ಆದರೆ ಅವರ ಅಂತರಾತ್ಮ ಬೇಡವೆಂದಿತು. ಅದರಂತೆ ಮತ್ತೆ ಪ್ರಚಾರಕಾರ್ಯಕ್ಕೆ ಹೊರಟರು. ಆ ಪ್ರಚಾರ ಕೈಕೊಂಡಾಗ ಅವರು ಅನುಭವಿಸಿದ ಕಷ್ಟಪರಂಪರೆ ಅಗಾಧವಾದದ್ದು; ಎಷ್ಟೋಬಾರಿ ಉಪವಾಸಮಾಡಿದರು. ಯಾವಾಗಲೂ 'ಭೂಮಾತೆಯ ಸ್ವಾಭಾವಿಕ ಒರಟುತನ'ದ ಮೇಲೇ ಮಲಗಿದರು. ನಿದ್ದೆಗೆಟ್ಟರು. ಸಿಕ್ಕಂತೆಲ್ಲಾ ಅಲೆದಾಡಿದರು. ಸುತ್ತಲ ಹಳ್ಳಿಪಳ್ಳಿಗಳನ್ನೆಲ್ಲಾ ತಮ್ಮದನ್ನಾಗಿ ಮಾಡಿಕೊಂಡರು.

ಹಳ್ಳಿಗಳಲ್ಲಿ ಮಾಡಿದ ಕೆಲಸವೆಂದರೆ ಅರಣ್ಯಶಾಸನಗಳನ್ನು ಉಲ್ಲಂಘಿಸುವುದು; ಪಟೇಲರು, ಶಾನುಭೋಗರು ರಾಜೀನಾಮೆ ಕೊಡುವಂತೆ ಮಾಡುವುದು. ಅದರಂತೆಯೇ ಹಳ್ಳಿಯ ಜನ ಸರಕಾರದೊಂದಿಗೆ ಅಸಹಕಾರ ಮಾಡಿತು. ಪಟೇಲರು ಮುಂತಾದವರು ತಮ್ಮ ಸ್ಥಾನಗಳಿಗೆ ರಾಜೀನಾಮೆಯಿತ್ತರು. ಸ್ಥಳಗಳಿಗೆ ಹೊಸಬರಾರೂ ಬರಲಿಲ್ಲ. ಇದರಿಂದ ಸರಕಾರ ಎದೆಗುಂದಿತು. ಆದರೆ ಪಟ್ಟಣಗಳ ಬೆಂಬಲ ರಾಜ್ಯಕ್ಕಿದ್ದೇ ಇದೆಯಲ್ಲ. ಪಟ್ಟಣದಲ್ಲಿ ಅದೆಷ್ಟು ಪ್ರಚಾರ ನಡಸಲಿ, ಜನ ಮುಂದೆ ಬಾರರು. ಆದರೆ ಹಳ್ಳಿಗಳಲ್ಲಾದರೋ ಜನ ಇಂತಹ ಸುಸಂಧಿ ಸಿಕ್ಕೀತೇ ಎಂದು ಕಾದುಕೊಂಡಿರುತ್ತಾರೆ. ಏಕೆಂದರೆ, ಇಂದಿನ ಸ್ಥಿತಿಗತಿಗಳಲ್ಲಿ ಹಳ್ಳಿಗರೆಂದರೆ ತೀರಾ ಹಿಂದುಳಿದವರು. ಒಂದು ಅತಿ ದುಂದು ಸರ್ಕಾರದ ಹೊರೆಯ ಭಾರವನ್ನು ಹೊರಬೇಕಾಗಿದೆ ಅವರು. ಆದ್ದರಿಂದ ಕಂದಾಯಗಳು ಅವರ ಮೇಲೆ ವಿಪರೀತ ಬೀಳುತ್ತವೆ. ಇವೆಲ್ಲ ಕೆಡುಕಿಗೆ ವಿದೇಶೀ ಆಡಳಿತವೇ ಕಾರಣವೆಂದು ಅವರು ಬಲ್ಲರು. ಮತ್ತು ನಮ್ಮ ಚಳುವಳಿಯನ್ನು ಅದರ ಸಂಪೂರ್ಣಮಟ್ಟಕ್ಕೆ ಒಯ್ಯುವುದು ಅವರಿಗೆ ಸುಲಭದ ಕೆಲಸ." ಇದೇ ಕಾರಣದಿಂದಲೇ ಅವರು ಈ ಸ್ವಯಂಸೇವಕರಿಗೆ ಸಂಪೂರ್ಣ ಸಹಕಾರ ಹಸ್ತ ನೀಡಿದರು. ಅವರ ಹೊಟ್ಟೆ ಬಟ್ಟೆಗಳಿಗೆ ಆಶ್ರಯವಾಗಿ ಪೋಷಿಸಿದರು ಈ ಹಳ್ಳಿಗರು. ಆದರೆ ಪಟ್ಟಣಿಗರೊ? 'ಅವರಲ್ಲಿ ಹೆಚ್ಚು ಜನ ಸರ್ಕಾರೀ ಅಧಿಕಾರಿಗಳು. ಅವರು ಹಳ್ಳಿಗರಿಂದ ನ್ಯಾಯವಾಗಿ ಬರಬೇಕಾದ್ದಕ್ಕಿಂತ ಹೆಚ್ಚಿಗೆಯೇ ಎಳೆಯುತ್ತಾರೆ. ಹೀಗೆ ಬಡ ರೈತ ಇಕ್ಕೆಲಗಳಿಂದಲೂ ಒತ್ತಿ

ಸೊರಗುತ್ತಾನೆ. ಇನ್ನುಳಿದ ಜನರೆಂದರೆ ವ್ಯಾಪಾರಗಾರರು ಮತ್ತು ಕೆಲವು ಕಂಟ್ರಾಕ್ಟುದಾರರು. ಇವರು ಅಧಿಕಾರಿಗಳ ಕೃಪಾಪೋಷಣೆಯ ಮೇಲೆಯೇ ಒಂದಿಲ್ಲೊಂದು ಕಾರಣದಿಂದ ನಿಂತಿರುವವರು. ಇದೆಲ್ಲ ಕಾರಣದಿಂದ ನಾವು ನಮ್ಮ ನಿಜಶಕ್ತಿಯನ್ನು ಹಳ್ಳಿಗಳಲ್ಲಿ ಹೆಚ್ಚಿಸಬೇಕೆಂಬುದು ಸ್ಪಷ್ಟಪಡುತ್ತದೆ. ಪಟ್ಟಣದ ಜನ ಇವರಿಗೆ ಜಾಗ ಕೊಡದೆ ಹೋದರು. ಒಂದು ತುತ್ತು ಅನ್ನ ನೀಡದೆ ಹೋದರು. ಇವರನ್ನು ದೂರವಾಡಿದರು. ಆದರೂ ಸ್ವಯಂಸೇವಕರ ದಳ ಅಲ್ಲಿ ಬೇರೂರಿತು. ಪ್ರಭಾತಫೇರಿ ಮುಂತಾದುವು ನಡೆಯಲು ಮೊದ ಲಾದುವು. ಬರುಬರುತ್ತಾ ಪಟ್ಟಣಿಗರು ಈ ಜಾಲಕ್ಕೆ ಸಿಕ್ಕಿಬಿದ್ದರು. ಇದನ್ನು ಕಂಡ ಸರ್ಕಾರದ ಕ್ರೂರದೃಷ್ಟಿ ಈ ಮುಖಂಡರ ಮೇಲೆ ಬಿತ್ತು. ಇಪ್ಪತ್ತನಾಲ್ಕು ಗಂಟೆಯ ಅವಧಿಯೊಳಗೆ ಊರು ಬಿಡುವಂತೆ ಸುಗ್ರೀವಾಜ್ಞೆ ಬಂತು. ಬೇಕೆಂದೇ ಈ ಆಜ್ಞೆ ಉಲ್ಲಂಘಿಸಿದ್ದಕ್ಕಾಗಿ ದಸ್ತಗಿರಿಯಾಗಿ, ವಿಚಾರಣೆ ನಡೆದು, ಆರು ತಿಂಗಳು ಸರ್ಕಾರದ ಆತಿಥ್ಯ ಕಂಡರು ಅಶ್ವತ್ಥನಾರಾಯಣರಾಯರು.

ಇಲ್ಲಿಂದ ಮುಂದಕ್ಕೆ ಸೆರೆಮನೆಯ ವಾಸ, ಅಲ್ಲಿನ ಅನುಭವ, ಮುಂತಾದವು ಮುಂದುವರಿಯುತ್ತವೆ. 'ಪಿಂಡ', 'ತಿಕ್ಕಿ'—'ಪಿಕ್ಕಿ', 'ಕಾಫಿ' ಇವುಗಳ ಅಭ್ಯಾಸ. ಇವು ಮೈಗೆ ಒಂಟದುದು. ಬಂಗಾಳೀ 'ಬಾಬು'ವಿನ ಸಖ್ಯ. ಅವನಿಂದ ಅವನ ರೊಟ್ಟಿಯಲ್ಲಿ ಪಾಲುಗೊಂಡುದು. ಇತ್ಯಾದಿ ಅನೇಕ ಅಂಶಗಳು ಸೆರೆಯ ನಿಜಜೀವನವನ್ನು ಚಿತ್ರಿಸುತ್ತವೆ. ಈ ಮಧ್ಯೆ ಆರು ತಿಂಗಳು ಮುಗಿದು ಸೆರೆಯಿಂದ ಮುಕ್ತರಾದುದು, ಅಲ್ಲಿನ ಎಲ್ಲರ ಸ್ನೇಹ ಸಹವಾಸ ಕಳೆದುಕೊಂಡು ಬಂದುದು, ಆಗಿನ ಪರಿತಾಪ—ಇವುಗಳೆಲ್ಲ ಮುಗಿದಮೇಲೆ ಕತೆ ಕೊನೆಯಾಗುತ್ತದೆ.

ಸಾಹಿತ್ಯದಲ್ಲಿ ಕ್ರಾಂತಿ ಮಾಡಲಿಕ್ಕಾಗಲಿ ಇಲ್ಲವೆ ರಾಜಕೀಯದಲ್ಲಿ ಆಂದೋಲನ ಎಬ್ಬಿಸಲಿಕ್ಕಾಗಲಿ ಬರೆದ ಗ್ರಂಥವಲ್ಲ ಇದು. ಸತ್ಯಾಗ್ರಹಿ ತನ್ನ ನಿತ್ಯಜೀವನದಲ್ಲಿ ಏನೇನು ಕಾಣುವನು, ಅವನ ಜೀವನ ಎಂತಹ ಸೊಗಸು ಎಂಬುದನ್ನು ತಿಳಿಸುವುದೆ ಈ ಪುಸ್ತಕದ ಒಳಪಿಡಿ. ನಮ್ಮ ರಾಷ್ಟ್ರೀಯ ಜೀವನ ನೇರ್ಪಡಿಸಿಕೊಳ್ಳಲು ಇಂತಹ ಎಷ್ಟೊಂದು ಪುಸ್ತಕಗಳ ಸಹಾಯ ಬೇಕೇ ಬೇಕು. ಮುಂದಾವ ಕ್ರಾಂತಿಯಾದೀತೋ, ಮುಂದೆಂಥ ಚಳುವಳಿಗಳು ನಡೆ ದಾವೋ ಅವನ್ನೆಲ್ಲಾ ಭೇದಿಸಿ ಮುನ್ನುಗ್ಗುವ ಪ್ರಯತ್ನಕ್ಕೆ ಅನುವು ಈ ಪುಸ್ತಕ.

—**ಹಾ. ರಂ. ನಾಗೇಶರಾವ್.**

## ೩. ಶ್ರೀ ಪಿ. ಆರ್. ರಾಮಯ್ಯನವರ

### "ಫ್ರಾನ್ಸಿನ ಮಹಾಕ್ರಾಂತಿ"

ಒಂದು ದೇಶ ದರಿದ್ರಾವಸ್ಥೆಯಲ್ಲಿದ್ದಾಗ ಅಲ್ಲಿನ ಜನ ಎಂಥ ಘೋರ ಕೃತ್ಯವನ್ನಾದರೂ ಮಾಡಲು ಹಿಂಜರಿಯುವುದಿಲ್ಲ. ದೇವರು, ದಯೆ ಮುಂತಾದ ಭಾವನೆಗಳು ಅವರ ಮನಸ್ಸಿನಲ್ಲಿ ಶೂನ್ಯವಾಗಿರುತ್ತವೆ. "ಫ್ರಾನ್ಸಿನ ಮಹಾ ಕ್ರಾಂತಿ" ಎಂಬ ಈ ಪುಸ್ತಕವನ್ನೋದಿದರೆ ಒಂದು ದೇಶದ ಆರ್ಥಿಕಸ್ಥಿತಿ ಆ ದೇಶದ ಜನಗಳ ಮೇಲೆ ಮಾಡುವ ಉಗ್ರ ಪರಿಣಾಮ ಸ್ಪಷ್ಟವಾಗಿ ತಿಳಿಯುತ್ತದೆ.

೧೮ನೇ ಶತಮಾನದಲ್ಲಿ ಫ್ರಾನ್ಸಿನ ಸ್ಥಿತಿ ಇದೇ ರೀತಿ ಇತ್ತು. ಜನ ದುಸ್ಸಹವಾದ ಬಡತನವನ್ನನುಭವಿಸುತ್ತಿದ್ದರು. ರಾಜನು ವಿಷಯ ಲೋಲ ನಾಗಿದ್ದನು. ಜನರ ನಿಜವಾದ ಪ್ರತಿನಿಧಿಗಳ ಮಾತಿಗೆ ಬೆಲೆಯಿರಲಿಲ್ಲ. ಶ್ರೀಮಂತರು ಮತ್ತು ಪಾದ್ರಿಗಳು ಸ್ವೇಚ್ಛೆಯಾಗಿ ವರ್ತಿಸುತ್ತಿದ್ದರು. ರಾಜನು ರಾಣಿಯ ಮಾತಿಗೆ ವಿಶೇಷ ಮನ್ನಣೆ ಕೊಡುತ್ತಿದ್ದನು. ಪಡಬಾರದ ಕಷ್ಟವನ್ನನು ಭವಿಸುತ್ತಿದ್ದ ಜನರ ವಿಷಯದಲ್ಲಿ ಇವರಿಗೆ ಸ್ವಲ್ಪವಾದರೂ ಕರುಣೆಯಿರಲಿಲ್ಲ.

ಇಂಥ ವಿಷಮ ಪರಿಸ್ಥಿತಿಯಲ್ಲಿ ಜನರ ಮನಸ್ಸು ಕ್ರಾಂತಿಯ ದಿಕ್ಕಿನಲ್ಲಿ ಹೆಜ್ಜೆಯಿಡುವುದು ಸಹಜ. ಜನ ಕ್ರಾಂತಿಕ್ಷೇತ್ರದಲ್ಲಿ ದುಮುಕಿ ಅನೇಕ ಕ್ರೂರ ಕೃತ್ಯಗಳನ್ನಾಚರಿಸಿದರು. ಆದರೆ ಇವಕ್ಕೆಲ್ಲಾ ರಾಜನ ನಿರ್ದಯೆಯೇ ಕಾರಣ ವೆಂಬುದು ನಿಸ್ಸಂದೇಹವಾದ ವಿಷಯ.

ಈ ಕ್ರಾಂತಿಯಿಂದ ಇಡೀ ಪ್ರಪಂಚದಲ್ಲಿಯೇ ಒಂದು ಕ್ರಾಂತಿಯ ಉದಯವಾಯಿತೆನ್ನಬಹುದು. ಇದೇ ಕಾಲದಲ್ಲಿ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ ಎಂಬ ಮೂರು ಉದಾತ್ತಭಾವನೆಗಳು ಜನ್ಮತಾಳಿ, ಜನರು ತಮ್ಮ ಆಜನ್ಮಸಿದ್ಧ ಹಕ್ಕುಗಳಿಗಾಗಿ ಹೊಡೆದಾಡಲಾರಂಭಿಸಿದರು. ಇತರ ರಾಜರುಗಳ ಪತನವಾಯಿತು. ಈ ರೀತಿ ಈ ಕ್ರಾಂತಿ ಪ್ರಜಾಪ್ರಭುತ್ವದ ಮಾರ್ಗದಲ್ಲಿ ಒಂದು ಪ್ರಮುಖ ಘಟನೆಯಾಯಿತು. ಪ್ರಪಂಚದ ಪ್ರಮುಖ ಕ್ರಾಂತಿಗಳಲ್ಲಿ ಇದಕ್ಕೊಂದು ಉಚ್ಚಸ್ಥಾನ ದೊರಕಿತು.

ಈ ಕಾರಣದಿಂದ ಪ್ರತಿಯೊಬ್ಬನೂ ಈ ಕ್ರಾಂತಿಯ ವಿಷಯವಾಗಿ ಸ್ವಲ್ಪ ವಾದರೂ ತಿಳಿದಿರುವುದು ಆವಶ್ಯಕ. ಆದರೆ ಕನ್ನಡದಲ್ಲಿ ಈ ಬಗೆಯ ಗ್ರಂಥಗಳು

ಬಹಳ ವಿರಳ. ಆದುದರಿಂದ ಈ ಗ್ರಂಥದ ಪ್ರಕಟಣೆಯಿಂದ ಕರ್ನಾಟಕದ ಜನತೆಗೆ ಹಿರಿಯ ಉಪಕಾರವಾಗಿದೆ. ಇದರ ಶೈಲಿ ಬಹು ಸರಳವಾಗಿದ್ದು, ಎಂಥ ಸಾಮಾನ್ಯನಾದರೂ ಅರ್ಥಮಾಡಿಕೊಳ್ಳುವಂತಿದೆ.

—ಎಸ್. ರಂಗನಾಥ್.

## ೪. ಶ್ರೀಮತಿ ಕೆ. ವಿ. ರತ್ನಮ್ಮನವರ

### "ಮೆಡೇಮ್ ಕ್ಯೂರಿ"

ಪ್ರಪಂಚದ ಅತ್ಯುತ್ತಮ ವಿಜ್ಞಾನಿಗಳಲ್ಲಿ ಒಬ್ಬಳಾದ ಮೇರಿ ಕ್ಯೂರಿಯ ಜೀವನಚರಿತ್ರೆ ಈ ಪುಸ್ತಕದಲ್ಲಿ ಮನೋಹರವಾಗಿ ಚಿತ್ರಿತವಾಗಿದೆ. ಒಬ್ಬ ಘನವ್ಯಕ್ತಿಯ ಜೀವನಚರಿತ್ರೆಯೂ ಮನೋಹರ ಶೈಲಿಯೂ ಒಟ್ಟುಗೂಡಿರುವ ಈ ಪುಸ್ತಕ ಎಂಥವನ ಮನಸ್ಸಿಗಾಗಲಿ ಆನಂದವನ್ನುಂಟುಮಾಡುವುದಾದರೂ ಈ ಪುಸ್ತಕದ ಶೈಲಿಗಿಂತಲೂ ಇದರಲ್ಲಿ ಅಡಕವಾಗಿರುವ ವಿಷಯ ಮಹತ್ತಾದುದು.

ಮೇರಿಗೆ ಪ್ರಪಂಚದ ಸ್ತ್ರೀವರ್ಗದಲ್ಲಿ ಉನ್ನತಸ್ಥಾನ ದೊರೆತಿದೆ. ಅವಳ ಸಂಶೋಧನೆಗಳಿಂದ ವಿಜ್ಞಾನಪ್ರಪಂಚದಲ್ಲೇ ಒಂದು ಹೊಸ ಕ್ರಾಂತಿ ಉಂಟಾಯಿತು. ರೇಡಿಯಂ ಕಿರಣಗಳ ಸಂಶೋಧನೆ ವಿಜ್ಞಾನದ ಇತಿಹಾಸದಲ್ಲೇ ಒಂದು ಮುಖ್ಯ ಘಟನೆ. ಈ ಸಂಶೋಧನೆ ಇಡೀ ಪ್ರಪಂಚದ ಗಮನವನ್ನೇ ತನ್ನ ಕಡೆಗೆ ಸೆಳೆಯಿತು. ಇದರಿಂದಾದ ಪ್ರಯೋಜನಕ್ಕೆ ಅಳತೆಯಿಲ್ಲ.

ಮೇರಿ ಬರೀ ವಿಜ್ಞಾನಿ ಮಾತ್ರವಲ್ಲ. ಇತರ ದೃಷ್ಟಿಸ್ಥಾನಗಳಿಂದಲೂ ಆಕೆ ಜಗತ್ತಿನ ಒಬ್ಬ ಮಹಾ ವ್ಯಕ್ತಿ. ಅವಳು ತನ್ನ ಧ್ಯೇಯಸಾಧನೆಗಾಗಿ ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಅನೇಕ ದಿನ ಅರೆಹೊಟ್ಟೆ ಇರುತ್ತಿದ್ದಳು. ಆದರೆ ತನ್ನ ಧ್ಯೇಯಸಾಧನೆಯಲ್ಲೇ ಮಗ್ನಳಾಗಿ ಇತರ ವಿಷಯಗಳನ್ನು ಅಷ್ಟಾಗಿ ಲೆಕ್ಕಿಸುತ್ತಿರಲಿಲ್ಲ.

ಮೇರಿಗೆ ಜನತೆಯ ಸೇವೆ ಮಾಡುವುದರಲ್ಲಿ ಅಗಾಧ ಆಸಕ್ತಿಯಿತ್ತು. ೧೯೧೪–೧೮ ರ ಯುದ್ಧದಲ್ಲಿ ಪ್ಯಾರಿಸ್ ಜನ ಕಂಗಾಲಾಗಿ ಓಡತೊಡಗಿದಾಗ ಮೇರಿ ಏನೇ ಆದರೂ ಪ್ಯಾರಿಸ್ ಬಿಡಕೂಡದೆಂದೂ, ಗಾಯಗೊಂಡವರ ಸೇವೆ ಮಾಡಬೇಕೆಂದೂ ನಿರ್ಧರಿಸಿದಳು. ಆಗ ಅವಳು ಮಾಡಿದ ಸೇವೆ ನಿರುಪಮ

ವಾದದ್ದು. ಅದನ್ನು ಓದಿದರೆ ವೈಜ್ಞಾನಿಕರು ಜನತೆಯ ನಾಶಕ್ಕೆ ಹೇಗೆ ಕಾರಣ ಕರ್ತರಾಗಬಹುದೋ ಹಾಗೆಯೇ ಜನತೆಯ ಉದ್ಧಾರಕ್ಕೂ ಕಾರಣರಾಗಬಹುದೆಂದು ತಿಳಿಯುತ್ತದೆ. ಅವಳು ತನ್ನ ಮಾರ್ಗದಲ್ಲಿ ಬಂದ ತೊಡಕುಗಳನ್ನೆಲ್ಲಾ ನಿರ್ಲಕ್ಷಿಸುತ್ತಿದ್ದಳು. ದಿನದ ಜೀವನ ಚಿಂತಿಸುವಷ್ಟು ದೊಡ್ಡದಲ್ಲ ಎಂದು ಅವಳು ತಿಳಿದಿದ್ದಳು.

ಇಂಥ ಮೇಧಾವಿನಿಯ ಜೀವನವನ್ನು ಅರಿಯುವುದು ಅತ್ಯಗತ್ಯ. ಶ್ರೀಮತಿ ಕೆ. ವಿ. ರತ್ನಮ್ಮನವರು ಈ ಪುಸ್ತಕವನ್ನು ಪ್ರಕಟಿಸುವುದರ ಮೂಲಕ ಕರ್ಣಾಟಕದ ಜನತೆಗೆ ಹಿರಿಯ ಉಪಕಾರ ಮಾಡಿದ್ದಾರೆ, ಮೇಲಾಗಿ ಒಬ್ಬ ಮಹಾವ್ಯಕ್ತಿಗೆ ಸಲ್ಲಬೇಕಾದ ಗೌರವವನ್ನು ಸಲ್ಲಿಸಿದ್ದಾರೆ.

—ಎಸ್. ರಂಗನಾಥ್.

## ೫. ಶ್ರೀ ಚಕ್ರವರ್ತಿ ರಾಜಗೋಪಾಲಾಚಾರ್ಯರ

### "ಉಪನಿಷತ್ತಿನ ಕತೆಗಳು"

ಏಕೋ ವಶೀ ಸರ್ವಭೂತಾಂತರಾತ್ಮಾ
ಏಕಂ ರೂಪಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇನುಪಶ್ಯಂತಿ ಧೀರಾಃ
ತೇಷಾಂ ಸುಖಂ ಶಾಶ್ವತಂ ನೇತಾರೇಷಾಂ ॥

ಉಪನಿಷತ್ತುಗಳಲ್ಲಿನ ಒಂದು ಅಮೃತಬಿಂದು ಇದು. ಮತಗಳಲ್ಲೆಲ್ಲಾ ನಮಗೆ ಉತ್ತಮವಾದುದು ನಮ್ಮ ಹಿಂದೂಮತ. ಅದರ ಮುಖ್ಯವಾದ ಪ್ರಾಣ —ಸತ್ಯ. ನಮ್ಮ ಪೂರ್ವಜರಾದ ಋಷಿಗಳೂ ಮಹಾತ್ಮರೂ ಇದನ್ನೇ ಆರಿಸಿದರು ಎಂಬುದನ್ನು ಈ ಉಪನಿಷತ್ತಿನ ಕಥೆಗಳನ್ನು ಕ್ರಮವಾಗಿ ಓದಿದರೆ ಕಾಣಬಹುದು. ಉಪನಿಷತ್ತುಗಳೆಲ್ಲಾ ಸಂಸ್ಕೃತದಲ್ಲಿ ಬರೆಯಲ್ಪಟ್ಟಿವೆ. ಸಂಸ್ಕೃತ ಈಚೀಚೆಗೆ ನಶಿಸುತ್ತಾ ಬಂದು ಬಹಳ ಜನಗಳಿಗೆ ಸಂಸ್ಕೃತದಲ್ಲಿ ಬರೆದ ಉತ್ಕೃಷ್ಟ ಧರ್ಮಗ್ರಂಥಗಳನ್ನು ಓದಲು ಸಾಧ್ಯವಾಗುತ್ತಿಲ್ಲ. ಅನೇಕ ವಿದ್ಯಾವಂತರು, ಸಂಸ್ಕೃತವನ್ನರಿತವರು ಅದನ್ನು ಓದಿ ಆನಂದಪಟ್ಟು, ಜಾಗ್ರತರಾಗಿ, ತಮ್ಮಂತೆ ಇತರರಿಗೂ ಅದರ ಸವಿ ಗೊತ್ತಾಗಲೆಂದು ತಮ್ಮ ತಮ್ಮ ಭಾಷೆಗಳಿಗೆ ಅದನ್ನು ಪರಿವರ್ತಿಸಿದ್ದಾರೆ. ನಮಗೂ ಈ ಪುಸ್ತಕವನ್ನು ಓದಿ ಉಪನಿಷತ್ತುಗಳ

ಮೇಲೆ ಭಕ್ತಿ, ಶ್ರದ್ಧೆ ಹುಟ್ಟುತ್ತದೆ. ಬರೀ ಧರ್ಮವನ್ನೇ ಬೇರೆಯಾಗಿ ಬೋಧಿಸಿದರೆ ಬಹಳ ಜನಗಳಿಗೆ ಅದರಲ್ಲಿ ಉತ್ಸುಕತೆ ಬರುವುದಿಲ್ಲ. ಆದರೆ ಪ್ರತಿಯೊಬ್ಬರಿಗೂ ಕಥೆಗಳೆಂದರೆ ಚಿಕ್ಕವರಾಗಿದ್ದಾಗಿಂದಲೂ ವಯಸ್ಸಾಗುವ ವರೆಗೂ ಇಷ್ಟವೆ. ಇದನ್ನು ತಿಳಿದೇ ನಮ್ಮ ಪೂರ್ವಿಕರು ಧರ್ಮವನ್ನೆಲ್ಲಾ ಕಥೆಗಳ ರೂಪದಲ್ಲಿ ಬೋಧಿಸಿದರು. ಬುದ್ಧದೇವನೂ ಏಸುಕ್ರಿಸ್ತನೂ ರಾಮಕೃಷ್ಣ ಪರಮಹಂಸರೂ ಹೇಳಿದ ಉತ್ಕೃಷ್ಟವಾದ ಕಥೆಗಳು ಎಲ್ಲರಿಗೂ ತಿಳಿದೇ ಇವೆ.

ನೀತಿ, ಧರ್ಮಗಳನ್ನು ಕಥೆಗಳಲ್ಲಿ ಹೊರಪಡಿಸುವ ಕಲೆ ನಮ್ಮ ಭಾರತಕ್ಕೆ ಪುರಾತನವಾದ ವರ. ಕಠೋಪನಿಷತ್ತನ್ನು ತಿಳಿಸುವುದಕ್ಕೆ-ಮೊದಲು ಅದಕ್ಕೆ ಪೂರ್ವಭಾವಿಯಾಗಿ ನಚಿಕೇತನ ಕಥೆ ಹೇಳುವರು. ಕಠೋಪನಿಷತ್ತನ್ನು ಅರ್ಥ ಮಾಡಿಕೊಳ್ಳಬೇಕಾದರೆ, ಅಂಥಾದ್ದರ ಬೋಧನೆಗೆ ಏನು ಯೋಗ್ಯತೆ ಇರಬೇಕು ಎನ್ನುವುದು ನಚಿಕೇತನ ವ್ಯಕ್ತಿತ್ವದಲ್ಲಿ ಕಂಡುಬರುತ್ತದೆ. ಆತನ ಪಿತೃಭಕ್ತಿ, ತನ್ನನ್ನೇ ದಾನಮಾಡಲು ತಂದೆಯನ್ನು ಪ್ರಾರ್ಥಿಸಿ ಆತನ ಆಣತಿಯಂತೆ ತಾನೇ ಕಾಲಯಮನ ಹತ್ತಿರ ಹೋಗುವಾಗ ಕಾಣುವ ಅವನ ತ್ಯಾಗ, ಬ್ರಹ್ಮಚರ್ಯ, ಯಮಧರ್ಮನು ಆತನಿಗೆ ಮೂರು ವರಗಳನ್ನು ಕೊಡಲೊಪ್ಪಿದಾಗ ಆತ ಕೇಳುವ ವರಗಳು, ಆತನ ಜ್ಞಾನ, ಹೊಸ ವಿಷಯವನ್ನು ತಿಳಿಯಬೇಕೆಂಬ ನಿಶ್ಚಲಬುದ್ಧಿ, ಯಮನು ಆಶೆಗಳನ್ನು ತೋರಿಸಿದರೂ ಅದಕ್ಕೊಪ್ಪದೆ ಇಹಸುಖದಲ್ಲಿ ಸುಖವಿಲ್ಲೆಂದು ಆ ಸುಖಕ್ಕಾಗಿ ಮೋಹಪಡದೆ ಜ್ಞಾನಕ್ಕಾಗಿ, ಪರಹಿತಕ್ಕಾಗಿ ಕಾತರವಾಗುವ ಸ್ವಭಾವ, ಇವೇ ಕಠೋಪನಿಷತ್ತಿನ ಬೋಧನೆಗೆ ಅರ್ಹನಾದವನ ಯೋಗ್ಯತೆಗಳೆಂದು ಗೊತ್ತಾಗುತ್ತದೆ.

ಹೀಗೆಯೇ ಎಲ್ಲಾ ಜೀವಿಗಳೂ ಒಂದು ಆತ್ಮದಿಂದ ಬಂದುವೆಂದೂ ಆದರೂ ಆ ಆತ್ಮ ಕುಂದಿಲ್ಲದೆ ಬೆಳಗುತ್ತಿದೆ ಎಂದೂ ಅದೇ ದೇವರು ಎಂದೂ ಒಂದು ಕಥೆಯಿಂದ ತಿಳಿಸುತ್ತಾರೆ.

ನಾವು ಬರಿಯ ಪುಸ್ತಕಜ್ಞಾನ ಪಡೆದರೆ ಸಾಲದು. ಪರದ ಹಿತ ಸಾಧನೆಗೆ ಬೇಕಾಗುವ ಆತ್ಮವಿಜ್ಞಾನ ಪಡೆದರೆ ಆಗ ಪೂರ್ಣತ್ವ ಪ್ರಾಪ್ತವಾಗುತ್ತದೆ ಎಂದು ನಾರದನ ಉದಾಹರಣೆಯಿಂದ ತೋರಿಸುತ್ತಾರೆ. ನಾರದ ಮಹರ್ಷಿ ಕೂಡ ಎಷ್ಟೇ ಗ್ರಂಥಜ್ಞಾನ ಪಡೆದರೂ ಆತ್ಮದ ಅರಿವಿಗೆ ಮಾರ್ಗವನ್ನು ಹುಡುಕಲು ಗುರುಗಳ ಹತ್ತಿರಕ್ಕೆ ಹೋದನಂತೆ.

ಹೀಗೇ ಇನ್ನೂ ಹಲವು ಕತೆಗಳು. ತಪ್ಪಲೆಯ ಅನ್ನ ಬೆಂದಿರುವುದನ್ನು ನೋಡುವುದಕ್ಕೆ ಒಂದು ಅಗುಳಿನ ಸಾಕ್ಷಿ ಸಾಕು.

—ಕೆ. ಕೊಟ್ರಬಸಪ್ಪ.

## ೬. ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರ

### "ವರ್ಧಾ ಯಾತ್ರೆ"

ಸೆಪ್ಟೆಂಬರ್ ಎಂಟನೆಯ ತಾರೀಕು ಬುಧವಾರ ಬೆಳಗ್ಗೆ ನಾನು ನನ್ನ ರೂಮಿನಲ್ಲಿ ಕುಳಿತಿದ್ದೆ. ಅದೆಷ್ಟೋ ಹೊತ್ತು ಹಾಗೇ ಕುಳಿತಿದ್ದೆ, ಮನಸ್ಸು ಮಾತ್ರ ವರ್ಧಾಕ್ಕೆ ಯಾತ್ರೆ ಹೋಗಿತ್ತು. ನನ್ನ ಕಿವಿಯಲ್ಲಿ ಇನ್ನೂ ಆ ಗೀತೆಯ ಘೋಷ, ಸುನಿನಾದ ಪ್ರತಿಧ್ವನಿಗುಟ್ಟುತ್ತಿತ್ತು. ಬಾಪೂಜಿ ತಮ್ಮ ಆಶ್ರಮದಲ್ಲಿ ಗೀತೆಯ ಭಕ್ತರ ಜೊತೆಗೆ ಮಾಡುವ ಪ್ರಾರ್ಥನೆಯ ಧ್ವನಿ ನನ್ನ ಮನಸ್ಸನ್ನು ಹರ್ಷಗೊಳಿಸಿತ್ತು. ವಿನೋಬಾ ಭಾವೆಯವರ ಪ್ರಾರ್ಥನೆಯೂ, ಅವರು ಗೀತೆಯ ಮೇಲೆ ಹೇಳಿದ ಉಪದೇಶವೂ ಮನಸ್ಸನ್ನು ತಟ್ಟಿ ಎಚ್ಚರಿಸಿದಂತಾಯಿತು. ಗೀತೆ ಸಂಸ್ಕೃತದಲ್ಲಿ ಬರೆಯಲ್ಪಟ್ಟಿದೆ. ಸಂಸ್ಕೃತ ತಿಳಿಯದ ನಮಗೆ ಅದು ಅರ್ಥವಾಗುವುದಿಲ್ಲ. ಆದರೂ ಅದನ್ನು ಗಟ್ಟಿಯಾಗಿ ಓದಿದರೆ ಎಂತಹ ಅನಿರ್ವಚನೀಯ ಆನಂದ ಉಂಟಾಗುತ್ತದೆ! ಬರಹಗಾರರ ಲೇಖನಿ ಓಡುತ್ತಿದ್ದಂತೆ ನನ್ನ ಮನಸ್ಸೂ ಓಡುತ್ತಿತ್ತು. ಗಾಂಧೀಜಿಗೆ ಪ್ರಿಯವಾದ ಪರ್ಣಕುಟಿ ಕಣ್ಣಿಗೆ ಕಟ್ಟಿದಂತಿತ್ತು. ಅಲ್ಲಿನ ಸ್ವಚ್ಛತೆ, ಹಾಗೂ ಮಗನವಾಡಿಯ ಗ್ರಾಮ ಕೈಗಾರಿಕೆಗಳ ಕಲೆ, ಸುತ್ತುಮುತ್ತಲಿನ ಪ್ರಕೃತಿಸೌಂದರ್ಯದ ಚಿತ್ರ ಮನಸ್ಸನ್ನು ಸೂರೆ ಮಾಡುವಂತಹದು. ನಮ್ಮ ಭಾರತದ ಎಲ್ಲಾ ಕಡೆಗೂ ಅಂಥಾ ಹಳ್ಳಿಗಳಾದರೆ ಹೇಗೆ? ಸ್ವರ್ಗ ನೆಲದ ಮೇಲೆ ಆಗುವುದಲ್ಲವೆ! "ವಂದೇ ಮಾತರಂ" ಸ್ತೋತ್ರದಲ್ಲಿ ಬರುವ ಮಾತೆಯ ವರ್ಣನೆ ಅಕ್ಷರಶಃ ನಿಜವಾಗುವುದಲ್ಲವೆ!

ಗಾಂಧೀಜಿಯ ಪರ್ಣಕುಟಿಯ ಗೋಡೆಯ ಮೇಲೆ ಮೂರು ಸಂಕೇತ ಚಿತ್ರಗಳಿವೆ. ತಾಳೆಯ ಮರ, ಭ್ರಮರ, ಚರಕ. ಲೇಖಕರು ಅವುಗಳ ಸಂಕೇತಗಳನ್ನು ಯಾವುದಕ್ಕಾದರೂ ತಾಳೆಹಾಕಲಿ, ನನಗಂತು ಈ ರೀತಿ ತೋರುತ್ತೆ: ತಾಳೆಮರ ಪ್ರಪಂಚದಲ್ಲೆ ಎತ್ತರವಾದ ಮರ ಎಂದು ನಮ್ಮಲ್ಲಿ ಅದನ್ನು ಅನೇಕ ಉದಾಹರಣೆಗಳಿಗೆ ತೆಗೆದುಕೊಳ್ಳುತ್ತಾರೆ. ಅದರಲ್ಲಿ ತಾಳೆಮರ ಇಷ್ಟು ಎತ್ತರ

ಎಂದು ತೆಗೆದುಕೊಳ್ಳುವುದಿಲ್ಲ. ಸುಮ್ಮನೆ ಅತ್ಯಂತ ಎತ್ತರ ಎನ್ನುವುದಕ್ಕೆ ಆ ಪದ ರೂಢಿಯಾಗಿದೆ. ಅದರಂತೆ ನನಗೆ ಆ ಮರವನ್ನು ಚಿತ್ರದಲ್ಲಿ ನೋಡುತ್ತಲೆ ಗಾಂಧೀಜಿಯವರ ಉನ್ನತಭಾವನೆ, ಅವರಿಗೆ ಅಹಿಂಸೆಯಲ್ಲಿರುವ ಶ್ರದ್ಧೆ ಎಷ್ಟು ಎತ್ತರದ ಮಟ್ಟಕ್ಕೆ ಹೋಗಿದೆ ಎನ್ನುವುದಕ್ಕೆ ಅದು ಸಂಕೇತ ಎಂದು ಹೊಳೆಯುತ್ತೆ. ಆ ಭ್ರಮರ ಅವರ ಅವಿಶ್ರಾಂತವಾದ ದುಡಿಮೆಯ ಗುರುತು. ಆ ತುಂಬಿ ಅವರ ತುಂಬುಹೃದಯದ ಗುರುತೆಂದು ತೋರುತ್ತೆ. ಅವರಂತೆ ಒಂದು ಕ್ಷಣವನ್ನೂ ಪೋಲುಮಾಡದೆ ಕಾಲವನ್ನು ಪಯೋಗಿಸಿಕೊಳ್ಳಲು ನಮಗೆ ಸಾಧ್ಯವೆ! ಸಾಧ್ಯ, ಪ್ರಯತ್ನ ಒಂದಿದ್ದರೆ.

ಯಾತ್ರೆಯಲ್ಲಿ ಅನೇಕ ಸಂತರ, ಗಾಂಧೀಮಠದ ಮಹಂತರ ಪರಿಚಯವಾಗುತ್ತೆ. ಮುಖ್ಯವಾಗಿ ಅವರಲ್ಲೆಲ್ಲಾ ಒಂದೇ ರೀತಿಯ ಸಾಮ್ಯ ಇದೆ. ಕೈಲಾಸದಲ್ಲಿರುವ ರುದ್ರರು, ಗಣರುಗಳಲ್ಲಿ ಅನೇಕರು ಸಾಕ್ಷಾತ್ ಶಿವನಂತೆ ರೂಪಧರರಾಗಿರುತ್ತಾರೆ, ಮಾಹಾತ್ಮ್ಯವುಳ್ಳವರಾಗಿರುತ್ತಾರೆ ಎಂದು ನಮ್ಮ ಪುರಾಣಗಳಲ್ಲಿ ಓದುತ್ತಿರುತ್ತೇವೆ. ಅದೇ ತರದ ಚಿತ್ರವನ್ನು ವರ್ಧಾದಲ್ಲೂ ಕಾಣಬಹುದು. ಗಾಂಧೀಜಿಯಂತೆ ಅಲ್ಲಿನ ಆಶ್ರಮಜೀವಿಗಳು ಶ್ರಮಜೀವಿಗಳು. ಅವರ ಉತ್ತಮ ಗುಣ, ವ್ರತಗಳಲ್ಲೆಲ್ಲಾ ಬ್ರಹ್ಮಚರ್ಯವ್ರತ, ಸತ್ಯಸಂಕಲ್ಪ ನನ್ನ ಮನಸ್ಸಿಗಂತೂ ಬಹಳವಾಗಿ ಹಿಡಿಯಿತು. ವಿನೋಬಾ ಭಾವೆಯವರ ಜೀವನ, ಭನಸಾಲೆಯವರ ಹಟವ್ರತ ಮನಸ್ಸಿಗೆ ಒಂದು ತೆರದ ಪರಿಣಾಮ ಉಂಟು ಮಾಡುತ್ತೆ.

ಎಲ್ಲಕ್ಕೂ ಹೆಚ್ಚಾಗಿ ಮಹದೇವ ಭಾಯಿಯವರ ಗುರುನಿಷ್ಠೆ, ಪುಸ್ತಕ ಓದುವ ಹಂಬಲ, ಕ್ಲಿಷ್ಟವಾದ ತೊಡಕುಗಳನ್ನು ಸುಲಭವಾಗಿ ಬಿಡಿಸುವ ಅವರ ಸುಲಲಿತವಾದ ಸರಣಿ ಅನುಸರಣೀಯವಾದುವು. ಮಹದೇವ ದೇಸಾಯರ ಜೀವನ ನನಗೆ ಬಹಳ ಒಪ್ಪಿಗೆಯಾಯ್ತು. ಅವರಂತೆ ನಾವು ಏಕೆ ಜೀವಿಸಲು ಪ್ರಯತ್ನಿಸಬಾರದು ಎಂದೆನಿಸಿತು. ಅವರನ್ನು ನೆನಸಿದಾಕ್ಷಣ ಅವರ ಭವ್ಯಾಕೃತಿ, ಗಂಭೀರ ಭಾವದಲ್ಲಿ ಬರುವ ಗಂಭೀರ ಮುಗುಳ್ನಗೆ ಕಣ್ಣಿಗೆ ಕಟ್ಟಿಬರುತ್ತವೆ. ೧೯೩೭ರಲ್ಲಿ ಅವರನ್ನು ನೋಡಿದ ನೆನಪು ಇನ್ನೂ ಅಳಿಸಿಲ್ಲ, ಅಳಿಸುವುದೂ ಇಲ್ಲ. ಬಾಪೂಜಿಯವರನ್ನೂ ನಾನು ಚಿಕ್ಕವನಾಗಿದ್ದಾಗ, ಆರೇಳು ವರ್ಷದವನಿದ್ದಾಗ ನೋಡಿದ ಸವಿದೃಶ್ಯ ಚಿತ್ರಪಟದಂತೆ ಸುಳಿದು ಅವರನ್ನು ಅವರ

ಆಶ್ರಮದಲ್ಲಿ ನೋಡುವ ಭಾಗ್ಯ ಒದಗೀತೇ ಎನ್ನಿಸುತ್ತದೆ. ದೇವರು ಕರುಣೆ ದೋರಿ ಬಾಪೂಜಿಯ ಬಂಧನ ಕಡಿದು ಅವರ ದರ್ಶನ ದೊರೆಯುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ. ಉಸಿರೊಂದಿದ್ದರೆ ಆ ಪೂಜ್ಯನನ್ನು ಕಣ್ಣಾರೆ ನೋಡಿಯೇನೆಂಬ ಭರವಸೆ ಇದೆ.

ಇಷ್ಟೆಲ್ಲಾ ಮನಸ್ಸಿನಲ್ಲಿ ವಿಚಾರತರಂಗ ಏಳುತ್ತಿತ್ತು. ಅದೇ ವಿಚಾರವನ್ನು ವಿಮರ್ಶಿಸುತ್ತಾ ಎಚ್ಚತ್ತೆ. ಎಂದರೆ, ವರ್ಧಾಕ್ಕೆ ಹೋಗಿದ್ದ ಮನಸ್ಸು ಯಾತ್ರೆ ಮುಗಿಸಿ ಹಿಂದಿರುಗಿ ಬರುತ್ತಿತ್ತು. ಬಂದಬಂದಂತೆ ಪರ್ಣಕುಟಿಯಲ್ಲಿ ನಡೆಯುತ್ತಿದ್ದ ಪ್ರಾರ್ಥನಾಧ್ವನಿ ಸಣ್ಣಸಣ್ಣದಾಗಿ ತೇಲಿಬರುತ್ತಿತ್ತು:

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ
ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ

ಓಂ ಶಾಂತಿಃ ಶಾಂತಿಃ ಶಾಂತಿಃ

—ಕೆ. ಕೊಟ್ರಬಸಪ್ಪ.

# ಸೀನಿಯರ್ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿ

[ತುಮಕೂರು ಇಂಟರ್‌ಮೀಡಿಯೆಟ್ ಕಾಲೇಜು ಸಂಘದವರು ನಡಸಿದ "ಕನ್ನಡ ಪ್ರಬಂಧ ರಚನಾ ಸ್ಪರ್ಧೆ"ಯಲ್ಲಿ ಮೊದಲನೆಯ, ಎರಡನೆಯ ಬಹುಮಾನ ಪಡೆದವನ್ನು ಸಂಘದವರ ಅನುಮತಿಯಿಂದ ಕೆಳಗೆ ಪ್ರಕಟಿಸಿದೆ. ಈ ವಿಜಯಿಗಳ ಇತರ ಬರಹಗಳು ಮೇಲೆ ವ್ಯಾಸಂಗ ಗೋಷ್ಠಿಯ ಸಂಕಲನದಲ್ಲೂ ಇವೆ.]

## ೧. ಮೊದಲನೆಯ ಬಹುಮಾನದ ಪ್ರಬಂಧ

ನನಗೆ ಎಷ್ಟೋ ಜನ ಕಾಲೇಜುಗೆಳೆಯರಿದ್ದಾರೆ. ಇದ್ದಾರೆ ಎನ್ನುವದೇಕೆ? ಇದ್ದರು! ಈ ವರ್ಷದ ಮೊದಲಲ್ಲಿ ಇದ್ದರು. ಈಗ್ಗೆ ಒಂದು ತಿಂಗಳ ಹಿಂದೆ, ಮೂವತ್ತೇ ದಿನಗಳ ಹಿಂದೆ ಜೀವಕಾಯರಾಗಿ, ಮನುಷ್ಯರಾಗಿ, ಸುತ್ತಣ ಪ್ರಪಂಚದ ಸವಿಕಹಿಗಳನ್ನುಂಡು, ನನ್ನೊಂದಿಗೆ "ಹಿಂದೂ"ವನ್ನೋ "ಇಂಡಿಯನ್ ಎಕ್ಸ್‌ಪ್ರೆಸ್" ಅನ್ನೋ ಓದುತ್ತಾ, ಯುದ್ಧದ ಏಟಿಗೆ ಹೆದರದೆ, ಆಹಾರ ಸಮಸ್ಯೆಗೆ ಮರುಗಿ, ದೇಶನಾಯಕರ ಬಿಡುಗಡೆಯಾಗಲಿಲ್ಲವಲ್ಲಾ ಎಂದು ಕಣ್ಣೀರಿಟ್ಟು, ಸುಖ ಬಂದಾಗ ನಕ್ಕು, ಕಷ್ಟಕಂಡಾಗ ಅತ್ತು, ಈ ಭೂಮಿಗೆ ತಕ್ಕವರು, ಈ ನಾಡಿಗೆ ತಕ್ಕವರು ಎಂದು ನಾನು ಮೆಚ್ಚಿದ್ದ ನನ್ನ ಗೆಳೆಯರು ಇದ್ದರು! ಆದರೆ ಇಂದು ನಾನು ಅವರನ್ನು ಮಾತಾಡಿಸುವುದು ಹಾಗಿರಲಿ, ಅವರ ಮುಖಕಮಲವನ್ನು ನೋಡುವುದು ಕೂಡ ಬಹು ಕಷ್ಟವಾಗಿದೆ. ಮನೆಯಲ್ಲಿ ಹುಡುಕಿಕೊಂಡು ಹೋದರೆ "ಅವನಿಲ್ಲಪ್ಪಾ, ಪಾಠ ಓದಿಕೊಳ್ಳಲು ಹೋಗಿದ್ದಾನೆ" ಎನ್ನುವ ಉತ್ತರ! ಕಾಲೇಜು ಹತ್ತಿರ ಬಂದರೆ, ಅವನಿಗೆ ಮೊದಲನೆಯ ಗಂಟೆ ವಿರಾಮ! ಅಸೋಸಿಯೇಷನ್ ಹಾಲಿನಲ್ಲಿ ೫೦೦ ಕ್ಯಾಂಡಲ್ ಪವರಿನ ಬಲ್ಬ್ ಹಾಕಿಕೊಂಡು ಹುಡುಕಿದರೂ ಸಿಗುವಂತಿಲ್ಲ! 'ಕ್ಯಾಂಟೀನ್'ನಲ್ಲಿಯೂ ಸಿಗುವುದು ಪ್ರಯಾಸ! ಹೀಗಾಗಿ, ಅಳತೆಗೆ ಸಿಗದೆ, ಕೈಗೆ ನಿಲುಕದೆ, ಎಲ್ಲಿಯೂ ಸಂಧಿಸಲಾಗದೆ ಇರುವ ವ್ಯಕ್ತಿಯೆಂದರೆ "ಸೀನಿಯರ್ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿ."

* * * *

ಅಗೋ . . . ಅಲ್ಲಿ . . . ದೂರದಲ್ಲಿ ಬರುತ್ತಾ ಇದಾನೆ! ಅವನನ್ನು ಏನಾದರೂ ಮಾಡಿ, ತಡೆಹಾಕಿ, ನಿಲ್ಲಿಸಿಕೊಂಡು ಹತ್ತು ನಿಮಿಷ ಮಾತಾಡಿಸಿ ಬಿಡಬೇಕು ಎಂದು ನನ್ನ ಸಂಕಲ್ಪ! ಅವನೂ ದೂರದಿಂದಲೇ ನನ್ನ ಮುಖ ನೋಡುತ್ತಾನೆ. 'ಅಯ್ಯೋ, ಇದೆಲ್ಲಿ ಸಿಕ್ಕಿತಪ್ಪಾ ಈ ಶನಿ! ಬೆಳಗ್ಗೆ ಎದ್ದ ತಕ್ಷಣ ಬೆಕ್ಕಿನ ಮುಖ ನೋಡಿರಬೇಕು' ಎಂದು ಶಪಿಸಿಕೊಳ್ಳುತ್ತಾನೆ. ಅದೋ ಬಂದ . . . ಒಂದೇ ಲೈಟುಕಂಬದ ಅಂತರ . . . ಎರಡುಗಜ ದೂರವಿದ್ದಾನೆ . . . ಒಂದು ಗಜ . . . ಒಂದೇ ಮಾರು . . . ಒಂದೇ ಗೇಣು . . . ಬಂದೇ ಬಿಟ್ಟ! ಅಲ್ಲಿಂದಲೇ ಕೇಳುತ್ತಾನೆ: "ಏನೋ, ನಾ . . . ?" "ಏನೂ, ಇಲ್ಲಪ್ಪ." ಸರಿ, ಹೊರಟೇಬಿಟ್ಟ!

'ಲೋ, ಸೀನಾ! ನಿಂತುಕೊಳ್ಳೋ, ಪರವಾಯಿಲ್ಲ.'

'ಹೋಗೋ, ಇನ್ನೂ ಒಂದು ಚೂರೂ ಮುಟ್ಟೇ ಇಲ್ಲ. ಪರೀಕ್ಷೆ ಹತ್ತಿರಕ್ಕೆ ಬಂತು, ಎಲ್ರೂ ಆಗಲೇ ನಾಲ್ಕೈದು ಸಲ ರಿವೈಸು ಮಾಡ್ತಾ ಇದ್ದಾರೆ. ನಾನಿನ್ನೂ ಹೀಗೇ ಅಲೆದುಕೊಂಡು ಇದ್ದೀನಿ. ಇನ್ಯಾವಾಗಲಾದರೂ ಮಾತಾಡೋಣ. ಬರ್ತೀನಪ್ಪ!'

ಇಲ್ಲ, ನಿಲ್ಲಲೇ ಇಲ್ಲ . . . ಹೊರಟೇ ಹೋದ . . . ಅಗೋ ಆ ಲೈಟು ಕಂಬದಾಚೆ, ಆ ಸಂದೀ ಒಳಗೆ ತಿರುಗಿಕೊಂಡು, ಕಣ್ಣಿಗೆ ಕಾಣದೆ ಹೊರಟೇ ಹೋದ. ಇನ್ಯಾವಾಗಲಾದರೂ ಸಿಗಲಿ, ಬಿಡಬಾರದು. ಏನಪ್ಪಾ? ಎಷ್ಟೊಂದು ಜಂಭ ಇವರಿಗೆ? ನಾವು ಜ್ಯೂನಿಯರ್‌ನೋರಿಗೆ ಇನ್ನೂ ಮುಂಚಿತವಾಗಿಯೇ ಪರೀಕ್ಷೆ. ಅಂಥಾದ್ದರಲ್ಲೂ ನಾವು ಪೇಚಾಡೋದೇ ಇಲ್ಲ. ಇವರ್‍ಯಾಕೆ ಇಷ್ಟೊಂದು ಗೋಳಾಡ್ತಾರೆ? ಅಂದುಕೊಂಡು ನಾನು ಮರಳುತ್ತೇನೆ. ಈಗ ಸಿಕ್ಕಿದ್ದನಲ್ಲಾ ಅವನೇ ಸೀನಿಯರ್ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿ.

* * * * *

ಇವತ್ತು ಶನಿವಾರ, ಮನಸ್ಸಿಗೆ ಬೇಜಾರಾಗಿದೆ. ಹರಟೆ ಹೊಡೆಯೋಣ ಅಂದರೆ ನಮ್ಮ ಮನೆ ಸುತ್ತಲೂ ಇರುವ ಸೀನಿಯರ್ ಇಂಟರ್ ವಿದ್ಯಾರ್ಥಿ

ಗಳೊಬ್ಬರೂ ಬರೋ ಹಾಗೇ ಇಲ್ಲ. ಅದಕ್ಕೋಸ್ಕರ ಇನ್ನೇನು ಮಾಡಲಿ? 'ಬಾಲನಾಗಮ್ಮ' ಚೆನ್ನಾಗಿಲ್ಲವಂತೆ, ಯಾತಕ್ಕೆ ಚೆನ್ನಾಗಿಲ್ಲ ನೋಡಿಕೊಂಡು ಬರೋಣಾ ಅಂತ ಹೊರಡ್ತೀನಿ. ಯಾವಾಗಲೋ ಸೀನ ಲೈಟುಹಚ್ಚಿಕೊಂಡು ಓದಲು ಷುರುಮಾಡಿರೋದು ಕಾಣುತ್ತೆ. ನಾನು ಸಾಮಾನ್ಯವಾಗಿ ಚಿತ್ರಗಳಿಗೆ ಹೋಗೋದೆಲ್ಲಾ ಎರಡನೇ ಆಟಕ್ಕೇ! ನಾನು ಹೋದದ್ದೂ ಆಯಿತು, ಸಿನಿಮಾ ನೋಡಿದ್ದೂ ಆಯಿತು. ಬರೋ ಹೊತ್ತಿಗೆ—ಚಿತ್ರ ದೊಡ್ಡದು—ಮೂರು ಮೂರೂವರೆ ಗಂಟೆ ಆಗುತ್ತೆ!—ಡಿಸ್ಟ್ರಿಕ್ಟ್ ಕಛೇರಿಯಲ್ಲಿ ೧॥ ಗಂಟೆ ಹೊಡೆಯುತ್ತೆ. ನಾನು ಮನೆಗೆ ಬರೋ ಹೊತ್ತಿಗೆ ಆಗಲೇ ಎರಡು ಗಂಟೆ. ಸೀನನ ರೂಮಿನಲ್ಲಿ ಇನ್ನೂ ಲೈಟಿದೆ. ಇನ್ನೂ ಅವನು ಓದುತ್ತಲೇ ಇದ್ದಾನೆ. ಎರಡು ಸಲ ಸೀನಾ ಎಂದು ಕೂಗಿದರೂ ಅವನಿಗೆ ಕೇಳೋಲ್ಲ. ಕೇಳಿಸಿದರೂ ಸುಮ್ಮನಿದ್ದಾನೋ ಏನೋ!

"ಅಯ್ಯೋ ದೇವರೆ, ಈ ಪಾಡು ಬೇಡಪ್ಪಾ" ಅಂತೀನಿ ನಾನು. ಇವನು, ಆಗಲೇ ಹೇಳಿದೆನಲ್ಲಾ, ಸೀನಿಯರ್ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿ!

* * * *

ಸಂಜೆ, ಅಸೋಸಿಯೇಷನ್ನಿನ ಪತ್ರಿಕೆಗಳು, ಕೇರಂ ಗೀರಂ, ಎಲ್ಲಾ ಮುಗಿಸಿಕೊಂಡು ಮನೆಗೆ ವಾಪಸು ಹೋಗುವಾಗ ಮೊದಲ ಹಾಗೇ ಡಿಸ್ಟ್ರಿಕ್ಟ್ ಲೈಬ್ರರಿ ಹೊಕ್ಕು ಹೋಗುತ್ತೇನೆ. ನನಗೆ ಎಲ್ಲೂ ಇಲ್ಲದ ಆಶ್ಚರ್ಯ! ಅರೆ! ಸೀನಾ . . . ! ಅವನು, ಇವನು, ಎಲ್ಲರೂ ಬಂದಿಳಿದಿದಾರಲ್ಲಾ ಇಲ್ಲಿಗೆ! ದಿನಕ್ಕೆ ಹನ್ನೆರಡು ಗಂಟೆ ಕಾಲ ಓದೋರು! ಇದೇನು ಇಲ್ಲಿ ವಕ್ರಿಸಿದಾರಲ್ಲಾ ಅಂತ ಸಂತೋಷಪಟ್ಟುಕೊಂಡು, ಸದ್ಯ ಈಗಲಾದರೂ ಮಾತಾಡಿಸಬಹುದಲ್ಲಾ ಅಂತ ಸಂತೋಷಪಟ್ಟುಕೊಂಡು, ಹತ್ತಿರಕ್ಕೆ ಹೋದರೆ ಹೆದರಿಕೆ ಆಗುತ್ತೆ! ಆನೆಗಾತ್ರ ಪುಸ್ತಕ ಇಟ್ಟುಕೊಂಡು, ಅದರಲ್ಲಿ ಇರೋದೆಲ್ಲಾ ಏನೇನೋ ಒಂದು ರಫ್‌ನೋಟಿನಲ್ಲಿ ಗುರ್ತು ಹಾಕಿಕೊಂಡು, ಆ ಪುಸ್ತಕ ಓದಿದ್ದೂ ಓದಿದ್ದೇ! ಆ ಪುಸ್ತಕ ಯಾವುದೂಂತ ನೋಡಿದರೆ ಒಬ್ಬನ ಬಳಿ "Encyclopaedia Britanica,"

ಇನ್ನೊಬ್ಬನ ಹತ್ತಿರ ಇನ್ನೊಂದು "Encyclopaedia," ಮತ್ತೊಬ್ಬನ ಹತ್ತಿರ ಮಗದೊಂದು! ಒಬ್ಬನು ಜಾನ್‌ಸನ್ ವಿಚಾರವೆಲ್ಲಾ ಗುರುತುಹಾಕಿಕೊಳ್ಳುತ್ತಾನೆ, ಇನ್ನೊಬ್ಬ ಷೇಕ್ಸ್‌ಪಿಯರ್ ವಿಷಯವೆಲ್ಲಾ ಓದ್ತಾ ಇದ್ದಾನೆ, ಮತ್ತೊಬ್ಬ ಆರ್. ಎಲ್. ಸ್ಟೀವನ್‌ಸನ್ನೋ ಇನ್ನಾವ ಮಹಾನುಭಾವನ ಪವಿತ್ರ ಚರಿತ್ರೆಯನ್ನೋ ಓದಿ ತನ್ನ ಪರೀಕ್ಷೆಯ ಜ್ಞಾನಭಂಡಾರಕ್ಕೆ ತುರುಕುತ್ತಿದ್ದಾನೆ! ಇದೆಲ್ಲಾ ನೋಡಿ ನನಗೆ ಗಾಬರಿಯಾಗುತ್ತೆ. ಸದ್ಯ ಇವರ ಹೆಣಗಾಟ ನೋಡಲಾರೆನಪ್ಪಾ ದೇವರೇ, ಎಂದುಕೊಂಡು ಹೊರಬೀಳುತ್ತೇನೆ. ನಾನು ಮೊದಲೆ ಹೇಳಿದಂತೆ, ಇಲ್ಲಿ ಇರೋನೂ ಸೀನಿಯರ್ ಇಂಟರ್‌ಮೀಡಿಯಟ್ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥೀನೇ!



* * * *

'ಭಾನುವಾರ ಹೇಗಿದ್ದರೂ ಸುಧಾರಿಸಿಕೊಳ್ಳುತ್ತಾ ಇರಬೇಕು ಸೀನ' ಅಂದುಕೊಂಡು ಅವನ ಮನೆ ಹತ್ರ ಹೋಗ್ತೀನಿ, ಇರಲ್ಲ ಅವನು. 'ಸರಿ ಓದಿಕೊಳ್ಳೋಕೇ ಹೋಗಿರಬೇಕು' ಅಂದುಕೊಂಡು ಅವನ ಮಿತ್ರನ ಮನೆಗೆ ಹೋಗುವೆ.

ಅಲ್ಲಿ ಏನೇನೋ ಪ್ರಶ್ನೆಗಳು, ಉತ್ತರ ಇವುಗಳೆಲ್ಲ ಸುರಿಮಳೆ ಆಗ್ತಾ ಇರುತ್ತೆ. ನಾನು ಧೈರ್ಯಮಾಡಿ ಹೋಗ್ತೀನಿ ಒಳಕ್ಕೆ. ನನ್ನ ನೋಡಿದ ತತ್‌ಕ್ಷಣವೇ ಇಬ್ಬರಿಗೂ ಮುಖ, ಮೊದಲೇ ಓದಿ ಓದಿ ಬತ್ತಿಹೋಗಿದ್ದು, ಸ್ವಲ್ಪ ಕೆಂಪಾಗುತ್ತೆ ಸಿಟ್ಟಿನಿಂದ. ನಾನು ಯಾವುದಕ್ಕೂ ಜಗ್ಗೋದೇ ಇಲ್ಲ. ಸರಿ, "ಶಿವಪೂಜೆಯಲ್ಲಿ ಕರಡಿ ಬಂದ ಹಾಗೆ" ಎಂದು, ಇದ್ದಕ್ಕಿದ್ದಹಾಗೆ ಅವರನ್ನು ಕೇಂದ್ರ ಶಾಸನ ಸಭೆಯ ಚರ್ಚೆಗೋ, ರಷ್ಯಾದ ರಣರಂಗಕ್ಕೋ, ತುಮಕೂರಿನ ಸಿನಿಮಾ ವೃತ್ತಕ್ಕೋ, ಇಲ್ಲವೆ ಅಕ್ಕಿಡಿಪೋ ಆಡಳಿತದ ಕಡೆಗೋ ಎಳೆಯಲು ಹೋದರೆ, ಎರಡು ದನಿಯೂ ಸೇರಿ ಗಡುಸಾಗಿ ಬರುತ್ತೇ ಈ ಉತ್ತರ— "ನಾ . . . ನೀನು ಸುಮ್ಮನೆ disturb ಮಾಡದೇ ಕೂತುಕೊಳ್ಳೋ ಹಾಗಿದ್ದರೆ ಕೂತುಕೋ. ಇಲ್ಲದೆ ಹೋದರೆ, ದಯವಿಟ್ಟು ಹೊರಟು ಹೋಗಪ್ಪಾ."

ಸರಿ! ಇನ್ನು ಅಲ್ಲಿ ನಾನು ಕೂತುಕೊಂಡೇನೇ? ಸೀದಾ ಹೊರಟು ಬಂದುಬಿಡುತ್ತೇನೆ. ನಿಮಗೆ ಗೊತ್ತಿರಬಹುದು, ಸೀನ ಸೀನಿಯರ್ ಇಂಟರ್ ಮಿಡಿಯೆಟ್ ಪರೀಕ್ಷೆಗೆ ಕಟ್ಟಿರುವ ವಿದ್ಯಾರ್ಥಿಯೆಂದು!

* * * *

ಇದೇನಿದು, ನನ್ನ ಕಣ್ಣು ನಾನೇ ನಂಬುವಹಾಗಿಲ್ಲ! ನಮ್ಮ ಮನೆಯ ಕಡೆಗೆ ಬಿಜಯಮಾಡುತ್ತಿದೆ ಸೀನನ ಸವಾರಿ! ಎಲ್ಲೋ ಪಾಠಕ್ಕೆ ಹೋಗಲು ಹೀಗೆಯೇ ಬಂದಿರಬಹುದು . . . ಇಲ್ಲ, ಇಲ್ಲ, ನನ್ನ ಕಡೆಗೇ ಕೈ ಸನ್ನೆ ಮಾಡು ತ್ತಾನೆ . . . ! ಏನಿದು ವಿಚಾರಿಸೋಣ . . . ಓಹೋ, ಏನೋ ಕಂಕುಳ ತುಂಬ ತುಂಬಿಕೊಂಡು ಬರುತ್ತಾ ಇದ್ದಾನೆ . . . ಹತ್ತಿರ ಬಂದ . . . 'ಲೋ . . . ನಾ . . . ' ಎಂದ.

'ಏನೋ?'

'ಏನೂ ಇಲ್ಲ. ಒಂದು ವಿಚಾರ. ಖಂಡಿತ ಮಾಡಿಕೊಡ್ತೀಯೋ?'

'ಅದ್ಹೇಗೋ ಹೇಳಲಿ? ಆದರೆ ಮಾಡಿಕೊಡುತ್ತೇನೆ.'

'ನಿನ್ಕೈಲಿ ಆಗೋದೇ ಕಣೋ.'

'ಹೇಳೋ ಹಾಗಾದರೆ.'

'ಏನೂ ಇಲ್ಲ. ನಿಮ್ಮಣ್ಣ ನೈನ್‌ಟೀನ್ ಫಾರ್ಟಿ ಒನ್ ಎಕ್ಸಾಮಿ ನೇಷನ್‌ಗೆ ಕೂತಿದ್ರಲ್ಲಾ, ಆಗಿನ ಕೊಶ್ಚನ್ ಪೇಪರ್ ಇದೆಯಲ್ಲೋ . . . '

'ಹೌದು ಇದೆ. ಏನೀಗ?'

'ಅದನ್ನ ಸ್ವಲ್ಪ ಕೊಟ್ಟಿರೋ. ಎಕ್ಸಾಮಿನೇಷನ್ ಮುಗಿದ ಮೇಲೆ ಕೊಡ್ತೀನಿ. ನಿಂಗೆ ಸಲಾಮ್ ಮಾಡ್ತೀನಿ, ದಮ್ಮಯ್ಯ ಕೊಡಮ್ಮಾ.'

ಆ ಸಲಾಮಿಗೆ ಕಟ್ಟುಬಿದ್ದು ತಂದುಕೊಟ್ಟೆ.

ನೈನ್‌ಟೀನ್ ಥರ್ಟಿಫೈವ್, ಥರ್ಟಿಏಟ್, ಥರ್ಟಿ ನೈನ್, ಫಾರ್ಟಿ, ನಾನು ಕೊಟ್ಟ ಫಾರ್ಟಿಒನ್, ಫಾರ್ಟಿ ಟೂ ಎಲ್ಲಾ ಸೇರಿತು ಆ ಕಡತಕ್ಕೆ.

'ಬರ್ತೀನೋ ನಾ . . . ಥ್ಯಾಂಕ್ಸ್ ಕಣೋ.'

'ಸ್ವಲ್ಪ ನಿಂತ್ಕೊಳ್ಳೋ.'

'ಇಲ್ವೋ. ರಾಮೂ ಥರ್ಟಿ ಸಿಕ್ಸ್‌ದೂ, ಫಾರ್ಟಿತ್ರೀದೂ ಪೇಪರ್ ಕೊಡ್ತಾನಂತೋ, ಹೋಗಬೇಕು.'

ಹೊರಟೇ ಹೋದ. ಇಷ್ಟೆಲ್ಲಾ ಪೇಪರ್ ಸಂಪಾದಿಸಿ, ದಿನವೆಲ್ಲಾ ಊಟಬಿಟ್ಟು, ನಿದ್ದೆಗೆಟ್ಟು, ಕಷ್ಟಪಡುವ ಯೋಗಿ ಯಾರು ಗೊತ್ತೇ . . . ಸೀನಿಯರ್ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿ!

* * * *

ಇಷ್ಟೆ ಅಲ್ಲ, ಈ ವಿದ್ಯಾರ್ಥಿಯ ವಿಷಯ ಇನ್ನೂ ಎಷ್ಟೋ ಇದೆ. ಇನ್ಯಾವ ಮಹಾನುಭಾವನೇ ಬಂದು ಈ ಊರಲ್ಲಿ ಲೆಕ್ಚರ್‌ಮಾಡಲಿ, ಅವನು ಅಲ್ಲಿಗೆ ಹೋಗುವುದಿಲ್ಲ. ಇನ್ನೆಂತಹ ಮಹಾ ಮಹಾ ಚಿತ್ರ ಪ್ರದರ್ಶನಕ್ಕೆ ಬರಲಿ, ಅದಕ್ಕೆ ಅವನ ಬಹಿಷ್ಕಾರ. ಇನ್ನೆಂತಹ ದೊಡ್ಡ ಸುದ್ದಿ ಬಂದಿರಲಿ, ಪತ್ರಿಕೆಗಳ ಕಡೆ ಅವನು ನೋಡಲೇ ಆರ. ಅವನಿಗೆಷ್ಟೇ ಆಪ್ತನಾಗಿರಲಿ ಸ್ನೇಹಿತ, ಈಗಂತೂ ಮಾತಾಡಿಸಲಾರ. ಅವನ ತಂದೆ ತಾಯಿ ಯಾವ ಕೆಲಸ ಹೇಳಲಿ, 'ಊಹೂಂ.' ಎಷ್ಟೇ ಬೇಜಾರಾಗಿರಲಿ ಆಟದ ಪ್ರೋಗ್ರಾಂ ಕ್ಯಾನ್‌ಸಲ್!

ಹೇಗೆ ಜೀವವಿದ್ದರೂ ಜೀವವಿಲ್ಲದಂತೆ, ಮನುಷ್ಯನಾದರೂ ಅಲ್ಲದಂತೆ, ಯಾವುದೋ ಮಹಾಕಾರ್ಯ ಸಾಧಿಸಲು ಎಡೆಬಿಡದೆ, ಹಗಲಿರುಳೆನ್ನದೆ ತಪಸ್ಸು ಮಾಡುತ್ತಿರುವ ಹಟಯೋಗಿ ಈ ಸೀನಿಯರ್ ಇಂಟರ್‌ಮಿಡಿಯೆಟ್ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿ!

'ದೇವರೇ, ಈ ಪರೀಕ್ಷೆಗೆ ಸಲಾಂ! ಬೇಡಪ್ಪಾ ಈ ಸಂಕಟ, ಜನ್ಮ ಜನ್ಮಕ್ಕೂ ಬೇಡ' ಎಂದೆ.

ಆದರೆ ಒಳಗೊಂದು ನುಡಿ ನುಡಿಯಿತು: "ಮುಂದೆ ಕಾದಿದೆ ನಿನಗೆ ಮುದುಕಿಯ ಹಬ್ಬ! ಇನ್ನೆಷ್ಟು ದಿನ? ಮುಂದಿನ ವರ್ಷ ನೀನೂ ಈ ಬವಣೆಗೆ ಸಿಕ್ಕೇ ಸಿಕ್ಕುವೆ, ತಪ್ಪಿಸಿಕೊಳ್ಳುವಂತಿಲ್ಲ!" ಎಂದು.

"ನಿಜವೇ? . . . ನಿಜವೇ? ಹಾಗಾದರೆ ಏನು ಗತಿ!"

ಸುತ್ತಣ ಪ್ರಕೃತಿ ನಕ್ಕಿತು. ನನ್ನ ಪುಸ್ತಕಗಳು, ಲೇಖಣಿ ಎಲ್ಲವೂ ನಕ್ಕವು. 'ಇರಲಿ' ಎಂದುಕೊಂಡು ನಾನೂ ನಕ್ಕುಬಿಟ್ಟೆ.

—ಹಾಂ. ರಂ. ನಾಗೇಶರಾವ್.

## ೨೧. ಎರಡನೆಯ ಬಹುಮಾನದ ಪ್ರಬಂಧ

"ಅಯ್ಯೋ, ಯಾಕ್ರಿ ಅಷ್ಟು ಪೇಚಾಡ್ತೀರಾ ಜೂನಿಯರ್‌ಗೆಲ್ಲಾ? ಅಟೆಂಡೆನ್ಸ್ ಕೀಪಪ್ ಮಾಡಿಕೊಳ್ರಿ. ಸುಲಭವಾಗಿ ಪಾಸಾಗ್ತೀರಾ" ಎನ್ನುವ ಸೀನಿಯರ್ ವಿದ್ಯಾರ್ಥಿಗಳ ಮಾತು ಸಾಮಾನ್ಯವಾಗಿ ಎಲ್ಲಾ ಜೂನಿಯರ್ ವಿದ್ಯಾರ್ಥಿಗಳ ಕಿವಿಯಲ್ಲೂ ಬಿದ್ದಿರುತ್ತದೆ. ವಿದ್ಯಾರ್ಥಿಗಳು ಯಾವಾಗ ಪ್ರೌಢ ತರಗತಿಗಳಲ್ಲೆಲ್ಲಾ ತೇರ್ಗಡೆಯಾಗಿ ಕಾಲೇಜಿಗೆ ಬರುತ್ತಾರೋ ಆವಾಗಲೆ ಅವರಿಗೆ ಸೀನಿಯರ್ ಪರೀಕ್ಷೆಯ ಮೇಲೆಯೇ ದೃಷ್ಟಿ. ಜೂನಿಯರ್‌ನಲ್ಲೇನೋ ಕಾಲವನ್ನು ಆನಂದವಾಗಿ ಕಳೆದುಬಿಡುವರು. ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಓದಿ ಶ್ರಮಪಟ್ಟು ಮೂರು ತಿಂಗಳು ಮನೆಯಲ್ಲಿ ಸುಖವಾಗಿ ಕಾಲ ಯಾಪನೆ ಮಾಡಿದ ಮನಸ್ಸು ಜೂನಿಯರ್‌ನಲ್ಲೂ ವಿಶ್ರಾಂತಿ, ಸುಖಸಂಕಥಾ ವಿನೋದಗಳಲ್ಲಿರಲು ಬಯಸಿದರೂ ಪಬ್ಲಿಕ್‌ಪರೀಕ್ಷೆ ಭಯಕ್ಕೆ ಹಾಗೂ ಹೀಗೂ ಓದಲು ಪ್ರಯತ್ನಪಡುತ್ತೆ. ಮೇಲೆ ಹೇಳಿದಂತೆ ಸೀನಿಯರ್ ವಿದ್ಯಾರ್ಥಿಗಳು ಜೂನಿಯರ್ ವಿದ್ಯಾರ್ಥಿಗಳ ಪೇಚಾಟವನ್ನು ನೋಡಲಾರದೆ ಅವರಿಗೆ ತಮ್ಮ ಉದಾಹರಣೆಗಳನ್ನು ಕೊಟ್ಟು, ಅವರು ಓದುವ ಕಷ್ಟದಿಂದ ತಪ್ಪಿಸಿ ಉಪಕಾರ ಮಾಡುತ್ತಾರೆ. ತೂಕಡಿಸುವವರಿಗೆ ಹಾಸಿಕೊಟ್ಟಂತಾಗುತ್ತೆ. ಪಾಪ! ಸೀನಿಯರ್ ವಿದ್ಯಾರ್ಥಿಗಳಿಗೂ ಒಂದು ತರಹ ಅನುಕಂಪ ಬುದ್ಧಿ ಇರುತ್ತೆ. ತಾವು ಕಷ್ಟಪಡುತ್ತಿರುವುದೂ ಪರೀಕ್ಷೆಗೆ ಓದುತ್ತಿರುವುದೂ ಅನುಭವಕ್ಕೆ ಬಂದು, ಜೂನಿಯರ್ ತರಗತಿಯ ಕಾಲ ವಿಶ್ರಾಂತಿಯ ಕಾಲವೆಂದು ಜೂನಿಯರ್‌ನವರಿಗೆ ಬೋಧಿಸುವರು. ಕೆಲವರು ಜೂನಿಯರ್‌ನಲ್ಲಿ ಒಂದು ಅಕ್ಷರವೂ ಓದದೆ ಪಾಸು ಮಾಡಿ ಹೆಮ್ಮೆಯಿಂದ ಸೀನಿಯರ್‌ಗೆ ಬಂದ ತತ್‌ಕ್ಷಣ ಓದಿನ ಗುಡ್ಡೆ ಬಿದ್ದಿರುವುದನ್ನು ನೋಡಿ ಬೆಚ್ಚಿಬೀಳುತ್ತಾರೆ. ಒಂದೊಂದು ಸಲ ಎಡಹುವುದೂ ಉಂಟು. ಬಿದ್ದು ಪೆಟ್ಟಾಗಿ ಅನುಕಂಪದಿಂದ ಜೂನಿಯರ್ ಹುಡುಗರಿಗೆ ಹೇಳುತ್ತಾರೆ: "ಅವತ್‌ಅವತ್ತಿನ ಪಾಠ ಅವತ್ತವತ್ತೇ ಓದಿಕೊಂಡರೆ ಅನುಕೂಲವಪ್ಪಾ. ಇಲ್ಲದೆ ಇದ್ದರೆ ಅವರಿಗೆ ಆದ ಗತಿಯೇ ಆಗುತ್ತೆ."

ಜೂನಿಯರ್‌ನಲ್ಲಿ ಸಾಧಾರಣವಾಗಿ ಓದಿದರೂ ಶೇಕಡ ೪೫ ಅಂಕಗಳನ್ನು ಪಡೆದು ತೇರ್ಗಡೆ ಹೊಂದಿ ಸೀನಿಯರ್‌ಗೆ ಬಂದ ವಿದ್ಯಾರ್ಥಿಗಳಿಗೆ ಸ್ವಲ್ಪ ಧೈರ್ಯ

ಇರುತ್ತದೆ. ಆದರೂ ಒಂದೊಂದು ಸಲ ದೂರದಲ್ಲಿರುವ ಪರೀಕ್ಷೆ ಹೆದರಿಸುತ್ತಾ ಇರುತ್ತದೆ. ವಿದ್ಯಾರ್ಥಿ ಆಗಲೇ ಲೆಕ್ಕ ಹಾಕುತ್ತಿರುತ್ತಾನೆ: 'ಇನ್ನಾರು ತಿಂಗಳು, ಐದು, ಇನ್ನಾಲ್ಕೇ ತಿಂಗಳು' ಎಂದು.

ಸೀನಿಯರ್‌ಗೆ ಕಾಲಿಟ್ಟ ಕೂಡಲೆ ಅವನ ಸ್ವಭಾವವೇ ಬದಲಾಗಿ ಹೋಗುತ್ತದೆ. ಅವನ ದಿನಚರಿ ಬದಲಾಗುತ್ತೆ. ಅಂದಿನಿಂದ ಹೊಸ ವಿದ್ಯಾರ್ಥಿಯೇ ಆಗುತ್ತಾನೆ. ಅವನ ವಿಶ್ರಾಂತಿ ಪೂರ ಹರಿದುಹೋಗುತ್ತೆ. ಅಲಾರಂ ಗಡಿಯಾರ ಅವನ ರೂಮಿನಲ್ಲಿ ಹಾಜರು. ಸಿನಿಮಾ ಮುಂತಾದ ವಿನೋದ, ಮನೋರಂಜಕ ಸ್ಥಳಗಳಿಗೆ ಹೋಗುವುದು ನಿಂತುಬಿಡುತ್ತೆ, ಎಂದರೆ ಕಡಿಮೆ ಮಾಡುತ್ತಾನೆ. ವಿದ್ಯಾರ್ಥಿ ತೀರ ಸಭ್ಯನಾಗುತ್ತಾನೆ. ಕಾರ್ಯತತ್ಪರನಾಗುತ್ತಾನೆ. ಗೀತೆಯ ಗುಟ್ಟು ಕಾರ್ಯತಃ ಆಚರಣೆಗೆ ಬರುವಂತಿರುತ್ತದೆ. ಇಷ್ಟೆಲ್ಲಾ ಕ್ರಾಂತಿಯಂತೆ ಒಂದೇ ಸಲಕ್ಕೆ ಆಗುವುದಿಲ್ಲ. ನಿದಾನವಾಗಿ ಗ್ರಹಣ ಹಿಡಿದ ಹಾಗೆ ಆಗುತ್ತೆ. ಪರೀಕ್ಷೆ ಹತ್ತಿರ ಬಂದಂತೆಲ್ಲಾ ವಿದ್ಯಾರ್ಥಿ ಚಡಪಡಿಸಹತ್ತುತ್ತಾನೆ. ರಾತ್ರಿ ಹನ್ನೆರಡು ಗಂಟೆಯಾದರೂ ಆಯಿತೆ, ಇಲ್ಲವೆ ಒಂದೂ ಆಯಿತೆ. ಬೆಳಗ್ಗೆ ಯಥಾಪ್ರಕಾರ ಐದು ಗಂಟೆಗೆ ಅಲಾರಂ ಹೊಡೆದ ತಕ್ಷಣ ಎದ್ದು ಅರ್ಧ ನಿದ್ರೆಯಲ್ಲಿಯೇ ಕಣ್ಣಿಗೆ ಒದ್ದೆ ಬಟ್ಟೆ ಒತ್ತುತ್ತ ಓದುವನು. ಎಷ್ಟು ಓದಿದರೂ ತೃಪ್ತಿಯಿಲ್ಲ. ಇನ್ನೂ ಓದುವುದು ಬಹಳವಿದ್ದಂತೆ ಕಾಣುತ್ತದೆ.

ಇನ್ನೂ ವಿವರವಾಗಿ ಆ ವಿದ್ಯಾರ್ಥಿಯ ಅವಸ್ಥೆ ಹೇಳಬೇಕೆಂದರೆ ಅದನ್ನು ಸ್ವತಃ ಅನುಭವಿಸಬೇಕು. ರಾತ್ರಿ ಥರ್ಮಾಸ್ ಫ್ಲಾಸ್ಕಿನಲ್ಲಿ ಮೂರು ಲೋಟ ಕಾಫಿ ಇರುತ್ತೆ. ನಿದ್ದೆ ಬಂದಾಗೆಲ್ಲಾ ಕಾಫಿ ಕುಡಿದದ್ದೂ ಕುಡಿದದ್ದೇ. ಸ್ವಲ್ಪದರಲ್ಲಿ ಹೇಳಬೇಕೆಂದರೆ ಆ ವಿದ್ಯಾರ್ಥಿಯ ಗುರಿ ಓದುವುದೇ. ನಿಜವಾಗಿ, ಸಹಜವಾಗಿ ಇರಬೇಕಾದ ಗುರಿ—ಆ ಪರೀಕ್ಷೆಗಾದರೂ ಓದುವುದೇ ತಾತ್ಕಾಲಿಕವಾಗಿ ಗುರಿಯಾಗಿರುತ್ತದೆ. ಪರೀಕ್ಷೆ ಎಂದು ಮುಗಿಯಿತೋ ಅಂದೇ ರಾತ್ರಿ ಮೂರು ಸಲ ಸಿನಿಮಾ, ಸಾಯಂಕಾಲ ನಾಲ್ಕು ಸಲ ಹೊಟೆಲ್ಲು. ಇಷ್ಟು ದಿನ ಓದಿದ ಶ್ರಮಕ್ಕೆ ಇದು ಪರಿಹಾರ.

ದಸರಾ ರಜಕ್ಕೆ ಊರಿಗೆ ಹೋಗುವುದೋ ಬೇಡವೋ ಎನ್ನುವುದೊಂದು ಸಮಸ್ಯೆ. "ಮನೆಯಲ್ಲೇನೋ ಬಾ ಎಂದು ಕಾಗದ ಬರೆದಿದ್ದಾರೆ. ಊರಿಗೆ ಹೋದರೆ—ಓದಿಗೆ ಚಕ್ರ. ಹೋದರೇನಂತೆ? ಕ್ರಿಸ್‌ಮಸ್‌ನಲ್ಲಿ ಹೋಗದೆ

ಓದಿದರಾಯಿತು – ದಸರಾಕ್ಕೆ ಊರಿಗೆ ಹೋದರೂ ಅಲ್ಲೂ ಓದಿದರಾಯಿತು” ಎಂದು ನಾನಾ ಬಗೆಯ ತೊಡಕು, ಪರಿಹಾರಗಳಲ್ಲಿ ವಿದ್ಯಾರ್ಥಿಯ ಮನಸ್ಸು ನಾಲ್ಕೈದು ದಿನ ತೊಂದರೆಪಡುತ್ತೆ. ಕೊನೆಗೆ ಊರಿಗೆ ಹೋಗಲು ಮನಸ್ಸು ಮಾಡಿದ ಎನ್ನಿ. ಆಗ ಒಂದು ಟ್ರಂಕು ತುಂಬಾ ಪುಸ್ತಕಗಳನ್ನು ತುಂಬಿಕೊಂಡು ಊರಿಗೆ ಹೋಗುತ್ತಾನೆ. ಊರಿನಲ್ಲಿ ಒಂದು ಪುಸ್ತಕ ಹಿಡಿದಾ ಎಂದರೆ ಒಳಗೆ ಹುಡುಗರ ಗಲಾಟೆ, ತಾಯಿಯ ಕೂಗು ಮುಂತಾದ ಗಲಾಟೆಗಳು. ತಾಯಿ “ಏನೋ ಅಷ್ಟು ಓದುತ್ತಿದ್ದೀಯಾ ? ಇಲ್ಲಿ ಬಂದರೂ ಹಾಗೆ ಓದುವವನು ಯಾಕೆ ಬರಬೇಕು, ಹುಡುಗರ ಮೇಲೆಲ್ಲಾ ರೇಗುವುದಕ್ಕೆ ?” ಎಂದು ವಿದ್ಯಾರ್ಥಿಯ ಬಾಯಿ ಮುಚ್ಚಿಸಿಬಿಡುವರು, ವಿದ್ಯಾರ್ಥಿ ಏನಾದರೂ ಹುಡುಗರ ಮೇಲೆ ರೇಗಿದರೆ. ಸರಿ, ಊರಿನಲ್ಲೇನೋ ಮುಚ್ಚಿದ ಟ್ರಂಕು ತೆಗೆಯಲಾಗುವುದಿಲ್ಲ. ರಜಾ ಮುಗಿಸಿಕೊಂಡು ಪುನಃ ಬರುತ್ತಾನೆ ಯುದ್ಧರಂಗಕ್ಕೆ.

ಈ ಸಲವಂತೂ ಅವನು ಮಲಗುವ ಗಂಟೆ ೪ ಆಗಿರುತ್ತದೆ. ಇದೇ ಕಾಲ ಅವರಿಗೆ “ಪರೀಕ್ಷಾ ಜ್ವರ” ಹಿಡಿಯುವುದಕ್ಕೆ. ಈ ಜ್ವರ ವಿದ್ಯಾರ್ಥಿಗಳು ಸೀನಿಯರ್‌ಗೆ ಬಂದಾಗಲೆ ಕಾಣಿಸಿಕೊಳ್ಳುತ್ತೆ. ಆದರೆ ಸ್ವಲ್ಪ ಸ್ವಲ್ಪವಾಗಿ ಹೆಚ್ಚುತ್ತಾ ದಸರಾ ಮುಗಿದ ಮೇಲೆ ಮುಕ್ಕಾಲು ಭಾಗ ಪ್ರಭಾವವನ್ನು ಬೀರುತ್ತೆ. ವಿದ್ಯಾರ್ಥಿಗಳಿಗೂ ಪ್ರೌಢಶಾಲೆಯಲ್ಲಿ ಓದುವಾಗ, ಎಲ್. ಎಸ್. ಪರೀಕ್ಷೆಗೆ ಕುಳಿತಾಗ, ಈ ಜ್ವರದ ಅನುಭವವಾಗಿರುತ್ತೆ. ಆದರೆ ಈ ಜ್ವರ ಸಾಮಾನ್ಯವಾಗಿ ಇತರ ಜ್ವರಗಳಂತಲ್ಲ. ಚಳಿಜ್ವರ, ವಿಷಮಶೀತಜ್ವರ, ಉಷ್ಣಜ್ವರ, ಮುಂತಾದ ಜ್ವರಗಳಿಗೆ ತುಂಬಾ ದೂರ. ಆದರೂ ಈ ಜ್ವರ ಬಂದಾಗ, ಪರೀಕ್ಷೆಯ ನೆನಪಾಗಿ, ಎಂಥಾ ಧೈರ್ಯಶಾಲಿ ವಿದ್ಯಾರ್ಥಿಯೇ ಆಗಲಿ, ದೊಡ್ಡ ವೈದ್ಯರ ಮಕ್ಕಳೇ ಆಗಲಿ, ಚಳಿ ಬಂದಂತೆ ನಡುಗುತ್ತಾರೆ, ಬೆವರುತ್ತಾರೆ. ರಾತ್ರಿ ಓದುತ್ತಾ ಇರುವಾಗ ಬಂದರಂತೂ ಮೈಯೆಲ್ಲಾ ಜುಂಮೆಂದು ಶಾಖ ನೂರು ಡಿಗ್ರಿ ತನಕ ಏರುತ್ತೆ. ಆದ್ದರಿಂದ ಈ ಜ್ವರ ಇತರ ಎಲ್ಲಾ ಜ್ವರಗಳಿಗಿಂತ ದೊಡ್ಡ ಜ್ವರ.

ಈ ಜ್ವರಕ್ಕೆ ಔಷಧಿಯೇ ಇಲ್ಲವೆಂದು ಹೇಳಬಹುದು. ಪರೀಕ್ಷೆ ಮುಗಿದ ಕೂಡಲೆ ನಿಂತುಬಿಡುತ್ತೆ. ಎಂದಮೇಲೆ ಬೇಸಿಗೆ ರಜಾ ಇದಕ್ಕೆ ವಿರಾಮ ಕಾಲ. ಇಷ್ಟೆಲ್ಲಾ ತಿಳಿದ ಮೇಲೆ ಪರೀಕ್ಷಾಜ್ವರ ಪರೀಕ್ಷೆಗಿಂತ ಮೂರು ತಿಂಗಳು

ಮುಂಚೆನಿಂದ ಪ್ರಾರಂಭವಾಗುತ್ತೆ. ಪ್ರತಿಯೊಬ್ಬ ವಿದ್ಯಾರ್ಥಿಗೂ ಈ ಜ್ವರ ಕಾಣಿಸಿಕೊಂಡರೂ ಸೀನಿಯರ್ ಪರೀಕ್ಷೆಗೆ ಕುಳಿತ ವಿದ್ಯಾರ್ಥಿಗೂ ಈ ಜ್ವರಕ್ಕೂ ಬಹಳ ಹತ್ತಿರದ ಸಂಬಂಧ. ಈ ಜ್ವರದಿಂದ ಇನ್ನೂ ಸ್ವಲ್ಪ ಅನುಕೂಲವೆ. ಏಕೆಂದರೆ ಪರೀಕ್ಷೆಗೆ ಮುಂಚೆ ಮೂರು ಇಲ್ಲ ಎರಡು ತಿಂಗಳೂ ಚಳಿಗಾಲ. ಈ ಜ್ವರ ಬಂದರೆ ವಿದ್ಯಾರ್ಥಿ ಯಾವ ಚಳಿಗೂ ಹೆದರಬೇಕಾಗಿಲ್ಲ. ಧೈರ್ಯವಾಗಿ ಬೆಳಗ್ಗೆ ಐದು ಗಂಟೆಗೆ ಏಳಬಹುದು. ರಾತ್ರಿ ಎರಡು ಗಂಟೆಯವರೆಗೂ ಎಚ್ಚತ್ತಿರಬಹುದು. ಇಷ್ಟೂ ಸೀನಿಯರ್ ಪರೀಕ್ಷೆಗೆ ಕುಳಿತ ವಿದ್ಯಾರ್ಥಿಗೂ ಪರೀಕ್ಷಾ ಜ್ವರಕ್ಕೂ ಇರುವ ಸಂಬಂಧ, ಸ್ನೇಹ ಆಯಿತು.

ಈ ವಿದ್ಯಾರ್ಥಿಗಳು ಕ್ರಿಸ್‌ಮಸ್‌ಗೆ ಊರಿಗೆ ಹೋಗುವುದಿಲ್ಲ ಎಂದು ಮೊದಲೇ ತಿಳಿಸಿದೆ. ರಜಾಕಾಲದಲ್ಲಿ ಇವರು ಓದುವ ವೇಳೆ ಸುಮಾರು ಒಂಬತ್ತು ಗಂಟೆಯಿಂದ ಹನ್ನೆರಡು ಗಂಟೆವರೆಗೂ ಆಗುತ್ತೆ. ಓದಿದ್ದೂ ಓದಿದ್ದೇ. ರಾತ್ರೆಯೆಲ್ಲಾ ದೀಪ ಅವಿಶ್ರಾಂತವಾಗಿ ಉರಿದು ಒಡೆಯನ ಸೇವೆ ಸಲ್ಲಿಸುತ್ತದೆ. ಥರ್ಮಾಸ್‌ಫ್ಲಾಸ್ಕಿಗೆ ಬಿಡುವಿಲ್ಲ. ಕಣ್ಣುಗಳು ಕೆಂಪಾಗಿ ಪರೀಕ್ಷೆಯನ್ನೇ ಹೆದರಿಸುವಂತಿರುತ್ತವೆ. ಹದಿನೈದು ದಿನವಾದರೂ ತಲೆ ಬಾಚಿರುವುದಿಲ್ಲ. ಶುದ್ಧ ನಿಶ್ಚಲ ಮನಸ್ಸಿನ ಕರ್ಮಯೋಗಿಗಳು ಕರ್ತವ್ಯಪಾರಾಯಣರಾಗಿರುತ್ತಾರೆ. ಪಾಠಗಳನ್ನು ಉರುಹಚ್ಚಿ ಗಂಟಲೆಲ್ಲಾ ಬಳಲಿ ಆರಿಹೋಗಿರುತ್ತದೆ. ರಜಾ ಮುಗಿಯುವಷ್ಟರಲ್ಲಿ ವಿದ್ಯಾರ್ಥಿ ಪರೀಕ್ಷಾ ಜ್ವರದಿಂದ ಬಳಲಿ ಬೆಂಡಾಗಿ ಬಂದ ರೋಗಿಯಂತಿರುತ್ತಾನೆ. ತಪಸ್ಸು ಮಾಡಿ ಬಂದ ಯೋಗಿಯಂತಿರುತ್ತಾನೆ. ಯಾವುದಾದರೂ ಆಗಬಹುದು. ಅಂತೂ ಒಟ್ಟಿನಲ್ಲಿ ಹೃದಯ ಬುದ್ಧಿ ಮಾತ್ರ ದಣಿದಿರುತ್ತದೆ. ಓದಿ ತಣಿದಿರುತ್ತದೆಯೋ ಹೇಳಲಾಗುವುದಿಲ್ಲ. ದೇಹ ಸವೆದು ಕೃಶವಾಗಿ ಹೋಗಿರುತ್ತೆ. ಕಣ್ಣು ಉಬ್ಬಿಕೊಂಡಿರುತ್ತೆ. ಇದೆಲ್ಲಾ ಅವಸ್ಥೆ ಯನ್ನು ನೋಡಿದರೆ ಪರೀಕ್ಷೆ ಇಟ್ಟವರು ಎಷ್ಟುಕ್ರೂರಿಗಳಪ್ಪಾ ಎನ್ನಿಸುತ್ತದೆ.

ತರಗತಿಯಲ್ಲಿ ಉಪಾಧ್ಯಾಯರಿಗೆ (ಉಪನ್ಯಾಸಕರಿಗೆ) ವಿದ್ಯಾರ್ಥಿಗಳು ಕಾಟಕೊಡಲು ಷುರುಮಾಡುತ್ತಾರೆ. 'ಎಂಥಾ ಪ್ರಶ್ನೆ ಬರಬಹುದು? ಆ ಪ್ರಶ್ನೆ ಗಳಿಗೆಲ್ಲಾ ಉತ್ತರ ಬರೆಸಿಬಿಡಬೇಕು' ಎಂದು ಮುಂತಾಗಿ ಗೋಗರೆಯು ತ್ತಾರೆ. ಉಪಾಧ್ಯಾಯರು ಬರೆಸಿದರೋ, ಸರಿ. ಇಲ್ಲ, ಹುಡುಗರ ಬಾಯಲ್ಲೇ ಅವರು ಬೈಗುಳಗಳಿಂದ ಮುಳುಗಿಹೋಗುತ್ತಾರೆ. "ಎಂಥಾ ಮೇಷ್ಟ್ರೋ?

ಪಾಪಿ ಮೇಷ್ಟ್ರು! ಸ್ವಲ್ಪವೂ ಕರುಣೆಯಿಲ್ಲ" . ಎನ್ನುವುದು ಸರ್ವಸಾಧಾರಣ ಮಾತಾಗಿರುತ್ತೆ.

ನೋಟ್ಸು ಬರೆಯುವವರಿಗಂತೂ ಹಣದ ಸುಗ್ಗಿ. ಸೀನಿಯರ್‌ಗೆ ಬಂದ ತತ್‌ಕ್ಷಣ ಪ್ರತಿ ಒಂದು ಪಠ್ಯ ಪುಸ್ತಕಕ್ಕೂ ಒಂದು ನೋಟ್ಸ್ ತೆಗೆದುಕೊಳ್ಳುತ್ತಾರೆ. ಆ ನೋಟ್ಸ್ ಬಾಯಿಪಾಠ ಮಾಡುವುದು. ಬೆಳಗ್ಗೆ ಸಾಯಂಕಾಲ ರಾತ್ರಿಕಾಲವೂ ಮತ್ತು ನಡುವೆ ಲೀಷರ್ ಇದ್ದರೆ ಆವಾಗಲೂ ಪುಸ್ತಕ ಓದುತ್ತಲೇ ಇರುತ್ತಾರೆ.

ಪರೀಕ್ಷೆಗೆ ಎರಡು ತಿಂಗಳಿದೆ ಎಂದಾಗ ಪಾಠಕ್ಕೆ ಹೋಗುವವರೆಷ್ಟೋ! ಪ್ರಶ್ನೆಗಳನ್ನು ಊಹಿಸಿ, ಕೇಳಿದಷ್ಟು ಹಣ ಸುರಿದು, ಉತ್ತರ ಬರೆಸಿ ಉರು ಹಚ್ಚುವವರೆಷ್ಟೋ! ಹೇಳಲಸಾಧ್ಯ. ಎಲ್ಲಾ ಪಾಠಗಳನ್ನು ಓದದೆ, ಪರೀಕ್ಷೆಗೂ ಹೆದರದೆ, ಮೊದಲನೆಯ ಟರ್ಮೆಲ್ಲಾ ಸುಖವಾಗಿ ಕಾಲಕಳೆದವರು ಆಗ ಎಚ್ಚರಾಗುವರು. ಅವರೇ ಓದಬೇಕಾದ ಭಾಗಗಳನ್ನೆಲ್ಲಾ ನೋಡಿ ಅವುಗಳಲ್ಲಿ ಕೆಲವನ್ನು ಅನವಶ್ಯಕವೆಂದು ಊಹಿಸಿ ಬಿಟ್ಟುಬಿಡುವರು. ಅವರದೇ ಧೈರ್ಯ!

ಇಷ್ಟುದಿನವೂ ಓದಿ (ಬಾಯಿಪಾಠ ಮಾಡಿ)ದ್ದೂ ಒಂದೇ, ಪರೀಕ್ಷೆ ಇನ್ನು ಹದಿನೈದು ದಿನ ಇದ್ದಂತೆ ಇನ್ನೂ ಹೆಚ್ಚಾಗಿ ಮೊದಲಿಗಿಂತಲೂ ದ್ವಿಗುಣ, ತ್ರಿಗುಣವಾಗಿ ಓದುವುದೂ ಒಂದೇ ಆಗುತ್ತೆ. ತರಗತಿಗಳು ಇನ್ನು ಆರೇಳು ದಿನಗಳಲ್ಲಿ ಮುಚ್ಚುತ್ತವೆ ಎಂದಾಗ ಆ ಆರೇಳು ದಿನ ಕೆಲವರು ತರಗತಿಗಳಿಗೆ ಗೈರುಹಾಜರು, ಮನೆಯಲ್ಲಿ ಓದಲು. ಇಷ್ಟು ಕಷ್ಟಪಟ್ಟು ತಲೆಯನ್ನೆಲ್ಲಾ ನೋಯಿಸಿಕೊಂಡು, ದೇಹಾರೋಗ್ಯಗಳ ಪರಿವೆಯಿಲ್ಲದೆ ಓದಿದ್ದಕ್ಕೆ ತಕ್ಕ ಪ್ರತಿಫಲ ಪರೀಕ್ಷೆಯಾದ ಎರಡೂವರೆ ತಿಂಗಳಿಗೆ ತಿಳಿಯುತ್ತೆ.

ಪರೀಕ್ಷೆಗೆ ಹಿಂದಿನ ದಿನ ವಿದ್ಯಾರ್ಥಿ, ಎಂದರೆ ಭಾವುಕ ವಿದ್ಯಾರ್ಥಿ (ನಾಸ್ತಿಕನಲ್ಲ) ಶಾರದಾರಾಧನೆಮಾಡಿ ತಾನು ನಂಬುವ ದೇವರುಗಳಿಗೆಲ್ಲಾ ಪೂಜೆ ಕಾಯಿ ಕರ್ಪೂರ ಮಂಗಳಾರತಿ ಅರ್ಪಿಸಿ ಸಿದ್ಧನಾಗುತ್ತಾನೆ ಪರೀಕ್ಷೆಗೆ. ಎಲ್ಲಾ ಭಾರ ದೇವರ ಮೇಲೆ. ಸಂಚಕಾರವಾಗಿ ಕಾಯಿ ಕರ್ಪೂರ ಕೊಟ್ಟಿರುವುದಿಲ್ಲವೆ! ಮಾರನೆಯ ದಿನ ಪರೀಕ್ಷೆಗೆ ದೇವರಿಗೆ ಕೈಮುಗಿದು ಹೊರಡುವನು. ಪರೀಕ್ಷಾ ಹಾಲ್‌ನಲ್ಲಿ ಕಾಲುಗಂಟೆ ಶರೀರ ಕಂಪನ, ಕರ ಕಂಪನ. ಹೃದಯವೇನೋ ಎರಡು ತಿಂಗಳಿಂದ ಒಂದೇ ಸಮನೆ ಕಂಪನವಾಗುತ್ತಿರುತ್ತೆ.

ಅವತ್ತು ಮಾತ್ರ ಇನ್ನೂ ಹೆಚ್ಚಾಗಿ ಸೆಕೆಂಡಿಗೆ ಹತ್ತು ಸಲ ದಡ, ದಡ ಎನ್ನುತ್ತಿರುತ್ತೆ.

ಪರೀಕ್ಷೆ ಮುಗಿಯಿತು ಎಂದ ದಿನ ಕೊರಳ ಮೇಲಿಂದ. ನೊಗ ತೆಗೆದ ಎತ್ತಿನಂತೆ ವಿದ್ಯಾರ್ಥಿಗಳು ಒಂದು ನಿಡಿದಾದ ಉಸಿರನ್ನು ಬಿಡುತ್ತಾರೆ. ಅದರೊಂದಿಗೆ ಅವರ ತಲೆಯ ಭಾರ ಇಳಿದುಹೋಗುತ್ತೆ. ಅಂದರೆ, ಪರೀಕ್ಷೆ ಮುಗಿಯುವವರೆಗೂ ವಿದ್ಯಾರ್ಥಿಗೆ ಬಿಡುವಿಲ್ಲ. ಪರೀಕ್ಷೆಗೆ ಹಣ ಕಟ್ಟಲು ಷುರುವಾದ ಕರಕಂಪನ ಪರೀಕ್ಷೆ ಮುಗಿದ ಮೇಲೆ ನಿಲ್ಲುತ್ತೆ. ಓದಿದ ರೀತಿ ನೆನೆದುಕೊಂಡರೆ ಆಗಾಗ ಆವಾಗಲೂ ಕಂಪನ ಶರೀರಾದ್ಯಂತ ಉಂಟಾಗುತ್ತೆ . . .

ಸಾಕೇ ? . . .

—ಕೆ. ಕೊಟ್ರಬಸಪ್ಪ.

ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ೨.

# ನಮ್ಮ ಪುಸ್ತಕಗಳು

೧. **ಶ್ರೀ ಕೈಲಾಸಂ ಅವರ ಸ್ಮರಣೆ** ರೂ. ೨/೪

ಶ್ರೀ ಕೆ. ವಿ. ಐಯರ್ ಬರೆದದ್ದು. ಕೈಲಾಸಂ ಅವರ ಚೈತನ್ಯದ ಲೀಲೆಗಳನ್ನು ಚಿತ್ರಿಸಿರುವ ಪುಸ್ತಕ. ಶ್ರೀ ಡಿ. ವಿ. ಜಿ. ಅವರ ಮುನ್ನುಡಿಯೊಡನೆ.

೨. **ಕರ್ಣಾಟಕ ಮಾಲವಿಕಾಗ್ನಿಮಿತ್ರ ನಾಟಕಂ** ರೂ. ೧/೧೨

ಆಸ್ಥಾನ ವಿದ್ವಾನ್ ಮೋ. ಶಂ. ಸುಬ್ರಹ್ಮಣ್ಯ ಶಾಸ್ತ್ರಿಗಳ ಅನುವಾದ. ಶ್ರೀ ಎ. ಆರ್. ಕೃಷ್ಣಶಾಸ್ತ್ರೀ ಅವರ 'ಕವಿ ಕಾವ್ಯ ಪರಿಚಯ'ದೊಂದಿಗೆ.

೩. **ಮೊನ್ನ ವನ್ನ** (ಮೂರು ಅಂಕಗಳ ನಾಟಕ) ರೂ. ೨/-

ಬೆಲ್ಜಿಯಂ ದೇಶದ ಮಾರಿಸ್ ಮ್ಯಾಟರ್‌ಲಿಂಕ್ ಮಹಾಕವಿಯ ನಾಟಕದ ಅನುವಾದ. ಶ್ರೀ ಎಸ್. ಜಿ. ಶಾಸ್ತ್ರೀ ಅವರು ಮಾಡಿದ್ದು. ಶ್ರೀ ಜಿ. ಪಿ. ರಾಜರತ್ನಂ ಅವರ 'ಕವಿ ಕಾವ್ಯ ಪರಿಚಯ'ದೊಂದಿಗೆ.

೪. **ನಾಗನ ಪದಗಳು** ರೂ. ೧/೪

ಶ್ರೀ ಜಿ. ಪಿ. ರಾಜರತ್ನಂ ಬರೆದುವು. 'ರತ್ನನ ಪದಗಳು' ಜಾತಿಯುವು.

೫. **ಬಾಲ ಸರಸ್ವತಿ** (೩೬ ಬೇರೆ ಬೇರೆ ಕೃತಿಗಳು) ರೂ. ೨/೮

ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘದ ಸದಸ್ಯರಿಂದ.

೬. **ನಮ್ಮ ನಮ್ಮವರು** (೬೬ ಬೇರೆ ಬೇರೆ ಕೃತಿಗಳು) ರೂ. ೨/೮

ಮೈಸೂರು ವಿಶ್ವವಿದ್ಯಾನಿಲಯದ ಇಂಟರ್‌ಮೀಡಿಯೆಟ್ ವಿದ್ಯಾರ್ಥಿಗಳಿಂದ.

೭. **ಚಿನ್ನದ ದೋಸೆ ಮತ್ತು ಇತರ ಕಥೆಗಳು** ಹನ್ನೆರಡಾಣೆ

ಸಂಘದ ಸದಸ್ಯರು ಸಂಗ್ರಹಿಸಿದ ಎಂಟು ಜಾನಪದ ಕಥೆಗಳು.

---

**ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು**

---